ಪ್ರತಿಭಾ ಗ್ರಂಥಮಾಲೆ, ಧಾರವಾಡ :: ಹನ್ನೆರಡನೆ ವರುಷ, ಎರಡನೆ ಕಿರಣ

# ಕ್ಷತ್ರಿ—ಶ್ರೀ

( ಸ್ವತಂತ್ರ ಸಾಮಾಜಿಕ ಕಾದಂಬರಿ )





ಲೇಖಕರು:

ವರದರಾಜ ಹುಯಿಲಗೋಳ

ಹಿಂದುಸ್ಥಾನ್ ಪಬ್ಲಿಷಿಂಗ್ ಕಂಪೆನಿ,
ಪುಸ್ತಕ, ಕಾಗದ ಮತ್ತು ಸ್ಟೇಷನರಿ ವ್ಯಾಪಾರಿಗಳು
ಜಯಪ್ರಕಾಶ ಭವನ, ಉಡುಪಿ.

ಅಕ್ಟೋಬರ ೧೯೫೪



ಬೆಲೆ: ೧—೪—೦

ಮುದ್ರಕರು :
ಭಾಲಚಂದ್ರ ಘಾಣೇಕರ
ಪ್ರತಿಭಾ ಮುದ್ರಣ
ಧಾರವಾಡ.



ಮುಂದಿನ ಹೊತ್ತಿಗೆ !

ಸುಪ್ರಸಿದ್ಧ ಕತೆಗಾರರಾದ ಶ್ರೀ. ವೆಂ. ಮು. ಜೋಶಿಯವರ

ಹೃದಯಂಗಮ ಕಾದಂಬರಿ

## ಸಮರ ಭೂಮಿ

ನೇತಾಜಿಯವರು ಸಿಂಗಪುರದಲ್ಲಿ ಸುರಿಸಿದ ಕಣ್ಣೀರಿನ ರಹಸ್ಯವೇನು ? ಅದೇನು ದೌರ್ಬಲ್ಯದ ಪ್ರತೀಕವೇ ? ಅಲ್ಲ ! ಅಲ್ಲ !

ಆಝಾದ ಹಿಂದ ಸೈನ್ಯದೆದುರು ಅವರು ಮಾಡಿದ ಗದ್ಗದಿತ ಭಾಷಣವೆಂದರೆ— ಬ್ರಿಟಿಷರ ದಾಸ್ಯದಲ್ಲಿದ್ದ ಹಿಂದೀ ಸೈನಿಕರ ಕಬ್ಬಿಣ ಹೃದಯವನ್ನು ಕರಗಿಸುವ ಉಗ್ರ ಜ್ವಾಲಾರಸವಾಗಿತ್ತು.

ದ್ವಿತೀಯ ಮಹಾ ಯುದ್ಧದ ಹಿನ್ನೆಲೆಯಲ್ಲಿ ರೂಪಗೊಂಡ ಅದ್ವಿತೀಯ ಕಾದಂಬರಿ !

ಸಮರ ಕುಂಡದಲ್ಲಿಯೇ ಪ್ರೇಮವೃಕ್ಷವನ್ನು ಬೆಳಿಸಿಕೊಂಡು ಬಂದ ಯುವತಿ " ಚುಯಮಿಂಗ್ " ಓದುಗರನ್ನು ಸೆರೆ ಹಿಡಿಯುತ್ತಾಳೆ.

ಪ್ರಕಾಶಕರು :
ಭಾಲಚಂದ್ರ ಘಾಣೇಕರ
ಪ್ರತಿಭಾ ಗ್ರಂಥಮಾಲೆ,
ಧಾರವಾಡ.

# ಶ್ರೀಕಾರ

ಶ್ರೀಯ ಸೌಖ್ಯಸಮುದ್ರದಲ್ಲಿ ಒಂದೇಸವನೆ ತೇಲಾಡುವ ಒಂದು ಬಾಳ ನೌಕೆಯ ಚಿತ್ರ ಈ ಕಾದಂಬರಿಯಲ್ಲಿದೆ. ಬೆಲ್ಲಕ್ಕೆ ಇರಿವೆಗಳು ಮುಕುರುವಂತೆ ಸಂಪತ್ತಿದ್ದಲ್ಲಿ ಅನೇಕ ಜನ ಓಡಿಬರುತ್ತಾರೆ. ಈ ಕಾದಂಬರಿಯಲ್ಲಿ ಬರುವ ಶೀನಪ್ಪನವರು ಅಂಥ ಒಂದು ಇರಿವೆ. ಆದರೆ! ಆ ಇರಿವೆ ಆನೆಯಷ್ಟು ಶಕ್ತಿಯನ್ನು ಯುಕ್ತಿಯಿಂದ ಪಡೆಯುವುದು ಅಚ್ಚರಿಯ ಸಂಗತಿ. ಶ್ರೀಮಂತಿಕೆ ಇರುವಲ್ಲಿ ಮದ, ಮೋಹ, ಮತ್ಸರ ಇವೆಲ್ಲವೂ ಗೂಡುಗಟ್ಟಿರುತ್ತವೆ. ಸಿರಿಸರಸ್ವತಿಯರು ಒಂದೆಡೆಗೆ ಕುಳಿತ ತೂಗುಯ್ಯಾಲೆಯನ್ನು ಜಗತ್ತಿನಲ್ಲಿ ಕಾಣುವುದು ಅತಿ ವಿರಳ. ಇಬ್ಬರೂ ದೇವತೆಗಳಿಗೆ ಎಣ್ಣೆ ಸೀಗೇಕಾಯಿ. ಈ ಕಾದಂಬರಿಯಲ್ಲಿ ಬರುವ ಅನೇಕ ವ್ಯಕ್ತಿಗಳು ಶ್ರೀಯ ಬಲೆಯಲ್ಲಿ ಸಿಲುಕಿ, ಸರಸ್ವತಿಯ ಪ್ರಸಾದವನ್ನು ಎಂದೂ ಸೇವಿಸದವರು. ಬರಿ 'ಶ್ರೀ'ಯ ಸುಖ ಎಂತಹದೋ! ಶ್ರೀಯ ಇತಿ–ಈ ರೀತಿಯಾಗಿ–ಇದೆ!

'ಹರಕೆಗೆಂದೇ ತಂದ ಕುರಿ ತಳಿರ ತೋರಣ ಮೇಯಿತ್ತು' ಎಂಬುವಂತೆ ಈ ಕಾದಂಬರಿಯಲ್ಲಿ ಬರುವ ಲಕ್ಷ್ಮಿಯ ಪಾಡು ಇದೆ. ಬಾಸಿಂಗವನ್ನು ಕಟ್ಟಿಸಿಕೊಳ್ಳುವಾಗ, ಅವಳ ಕನಸು ಹೊಂಗನಸುಗಳಾಗಿದ್ದವು. ಆದರೆ ಸಿರಿಯ ಸೆರೆಯಲ್ಲಿ ಸಿಕ್ಕು ನರಳುವಾಗ, ವಿಚಿತ್ರ ಪತಿಯನ್ನು ಗಂಟು ಹಾಕಿಕೊಂಡು ಚಿತ್ರಹಿಂಸೆಯನ್ನು ಪಡುತ್ತಿರುವಾಗ, ಎರಡು ನಾಲಗೆಯುಳ್ಳ ಹಾವಿನಂತಿರುವ ಶೀನಪ್ಪನವರ ಒಳಹೃದಯವನ್ನು ಅರಿತಾಗ ಲಕ್ಷ್ಮಿಯ ಕರುಳನ್ನು ಹಿಂಡಿದಂತಾಯಿತು. ಅವಳು ಅಬಲೆಯಾದರೂ ಬಲವನ್ನು ಸಂಪಾದಿಸಿದಳು. ಪತಿವ್ರತೆಯ ಕಟ್ಟುನಿಟ್ಟುಗಳನ್ನು ಪಾಲಿಸುತ್ತ, ಧೈರ್ಯದಿಂದ ಮುನ್ನುಗ್ಗಿದಳು. ಆದರೂ ಆ 'ಶ್ರೀ'ಯ ಮನೆತನದಲ್ಲಿ ನಿರ್ಮಲವಾದ, ಉದಾತ್ತವಾದ ಸ್ವಭಾವಕ್ಕೆ ಸ್ಥಳವೇ ಇರಲಿಲ್ಲ. ದೈವಾನುಕೂಲವೇ ಇರಲಿಲ್ಲ. ಹೀಗಾಗಿ ಈ ಕಾದಂಬರಿಯಲ್ಲಿ ಕೆಲವು ವ್ಯಕ್ತಿಗಳ 'ಇತಿ-ಶ್ರೀ' ಯಾಗಿದೆ.

'ಇತಿ-ಶ್ರೀ' ತಲೆಬರಹದ ಅರ್ಥವಿವರಣೆಯನ್ನು ಸ್ವಲ್ಪದರಲ್ಲಿಯೇ ಈ ಶ್ರೀಕಾರದ ನುಡಿಗಳಲ್ಲಿ ಹೇಳಿರುವೆ. ಸಹೃದಯದ ವಾಚಕರು ಈ ಕಥೆಯನ್ನು ಸಮಗ್ರವಾಗಿ ಓದಿ, ಇಲ್ಲಿರುವ ವ್ಯಕ್ತಿಗಳನ್ನು ಅರಿತುಕೊಂಡು ವಿಮರ್ಶೆಯನ್ನು ಬರೆದು ತಿಳಿಸಿದರೆ ನಾನು ಅವರಿಗೆ ಕೃತಜ್ಞನಾಗುವೆನು. ಅಂಥವರ ವಿಮರ್ಶೆಗಳು ನನ್ನ ಮುಂದಿನ ಕೃತಿಗಳಿಗೆ ದಾರಿದೀಪಗಳಾಗುವವು.

ಈ ಕಾದಂಬರಿಯನ್ನು ನಾನು ಬರೆಯುವಾಗ ನನಗೆ ಅನೇಕ ರೀತಿಯಿಂದ ಸಲಹೆ ಸೂಚನೆಗಳನ್ನು ಕೊಟ್ಟ ನನ್ನ ವಿದ್ಯಾಗುರುಗಳಾದ ಶ್ರೀಯುತ ರಂ. ಶ್ರೀ. ಮುಗಳಿಯವರಿಗೆ ಎಷ್ಟು ನೆನಕೆಗಳನ್ನು ಸಲ್ಲಿಸಿದರೂ ಕಡಿಮೆಯೇ. ನನ್ನ ಸಾಹಿತ್ಯ ಕೃತಿಗಳಲ್ಲಿ ಆಸಕ್ತಿ ವಹಿಸಿ, ಅವರು ಯಾವಾಗಲೂ ನನಗೆ ನೆರಳಾಗಿ ನಿಂತಿದ್ದಾರೆ. ಈ ಕಾದಂಬರಿಯನ್ನು ಆಕರ್ಷಕ ಮುಖ ಚಿತ್ರದಿಂದ ಪ್ರಕಟಗೊಳಿಸಿದ ಶ್ರೀ. ಭಾಲಚಂದ್ರ ಘಾಣೇಕರ ಅವರಿಗೆ ನಾನು ಕೃತಜ್ಞನಾಗಿರುವೆ.

ಕಾದಂಬರಿಯಲ್ಲಿ ಬರುವ ವ್ಯಕ್ತಿಗಳನ್ನು ಯಾರನ್ನೂ ಉದ್ದೇಶಿಸಿ ಬರೆದಿಲ್ಲವೆಂದು ಸ್ಪಷ್ಟವಾಗಿ ಹೇಳಬಯಸುತ್ತೇನೆ.

ಸಾಧನಕೇರಿ
೫—೯—೧೯೫೪.

—ವರದರಾಜ ಹುಯಿಲಗೋಳ

## ಅ ರ್ಪ ಣೆ.

ಅಂತಃಕರಣದ ಮಾತೋಶ್ರೀಗೆ

೧

ಮಧ್ಯ ರಾತ್ರಿ ಮೀರಿ ಹೋಗಿದೆ! ಗಾಳಿ ಬಾಳಿನ ಗೋಳನ್ನೆ ಹುಯ್ದುಕೊಳ್ಳುವಂತೆ ಬೀಸುತ್ತಿದೆ!! ಮೋಡಗಳು ಮುಗಿಲಿನಲ್ಲಿ ತಾಂಡವವಾಡುತ್ತಿವೆ!

ಈ ಮಧ್ಯರಾತ್ರಿಯಲ್ಲಿಯೂ ಸಂಜೀವರಾಯರ ಮನೆಯ ತಲೆಬಾಗಿಲು ತೆರೆದಿದೆ. ಮೊದಲೇ ಭೀತಿಗೊಂಡ ಸಂಜೀವರಾಯರ ಹೃದಯವು ಈ ಹೊರಗಿನ ವಾತಾವರಣವನ್ನು ನೋಡಿ ಮತ್ತಿಷ್ಟು ಗಾಬರಿಗೊಂಡಿತು. ಬಾಗಿಲಲ್ಲಿ ನಿಂತು ಆತುರತೆಯಿಂದ ನೋಡಿದರು. ಯಾರ ಸುಳಿವೂ ಕಂಡುಬರಲಿಲ್ಲ!

"ಅಯ್ಯೋ........ ಅಯ್ಯೋ........!" ಒಳಗಿನಿಂದ ನರಳುವ ಧ್ವನಿ ಕೇಳಿಸಿತು. ಆ ಧ್ವನಿಯಲ್ಲಿ ವೇದನೆ ತುಂಬಿಕೊಂಡಿತ್ತು. ಅದನ್ನು ಕೇಳುತ್ತಿರುವ ಸಂಜೀವರಾಯರ ಕಿವಿಗಳಿಗೆ ಅಸಾಧ್ಯ ನೋವಾಗುತ್ತಿತ್ತು. ಮತ್ತೆ ಕೆಮ್ಮು! ಜೋರಾಗಿ ಕೆಮ್ಮು! ಸಂಜೀವರಾಯರ ಕರುಳನ್ನು ಹಿಂಡಿದಂತಾಯಿತು. ಅವರು ಒಳಗೆ ಧಾವಿಸಿದರು.

ಹಲವು ನಿಮಿಷಗಳಲ್ಲಿ ಅವರು ತಿರುಗಿ ಬಂದು ಬಾಗಿಲು ತೆರೆದಾಗ ದೂರದಲ್ಲಿ ದೀಪ ಕಂಡಿತು. ದೀಪದ ಮಿಣಿಮಿಣಿ ಬೆಳಕಿನಲ್ಲಿ ಇಬ್ಬರು ವ್ಯಕ್ತಿಗಳು ಕಂಡರು. ಗಾಳಿಯು ಜೋರಾಗಿ ಬೀಸುತ್ತಿದ್ದುದರಿಂದ, ತಂಪು ಹವೆ ಇದ್ದುದರಿಂದ ಅವರು ತಲೆಯ ಮೇಲೂ ಮುಸುಕು ಹಾಕಿಕೊಂಡಿದ್ದರು. ಅವರ ಗುರುತು ಒಮ್ಮೆಲೇ ಹತ್ತುವಂತಿರದಿದ್ದರೂ, ಅವರು ತಮ್ಮವರೇ ಇರಬೇಕೆಂದು ಸಂಜೀವರಾಯರಿಗೆ ಅನಿಸಿತು. ವ್ಯಕ್ತಿಗಳು ಸಮೀಪ ಬರುತ್ತಲೆ ಅವರ ಭಾರ ಒಮ್ಮೆಲೆ ಇಳಿದಂತೆ ಭಾಸವಾಯಿತು.

ಅವರಿಬ್ಬರನ್ನೂ ಸಂಜೀವರಾಯರು ಆದರದಿಂದ ಬರಮಾಡಿಕೊಂಡು ಒಳಗೆ ಕರೆದುಕೊಂಡು ಹೋದರು. ಸಂಜೀವರಾಯರ ಮುಖ ಬೆವರೊಡೆದಿತ್ತು. ವೈ ಕೈ ನಡುಗುತ್ತಿದ್ದವು.

ಮತ್ತೆ ಕೆಮ್ಮು ಜೋರಾಗಿ ಬಂದಿತು. ಸಂಜೀವರಾಯರ ಹೆಂಡತಿ ಗೋದಾವರಿ ಹಾಸಿಗೆಯಲ್ಲಿ ಒಂದೇಸವನೆ ನರಳುತ್ತಿದ್ದರು. ವೈದ್ಯರು ಸಾವಧಾನವಾಗಿ ಅವರ ಹಾಸಿಗೆಯ ಬಳಿ ಕುಳಿತುಕೊಂಡು, ಅವಳ ನಾಡಿ ಪರೀಕ್ಷೆ ಮಾಡಿ ನೋಡಹತ್ತಿದರು. ಗೋದಾವರಿಯ ನರಳುವ, ಕೆಮ್ಮುವ ಧ್ವನಿಯೊಂದನ್ನು ಬಿಟ್ಟರೆ ಎಲ್ಲೆಡೆಯಲ್ಲಿಯೂ ಅತ್ಯಂತ ನೀರವ. ಸಂಜೀವರಾಯರು ತಮ್ಮ ಮಿತ್ರರಾದ ಶೀನಪ್ಪನವರೊಂದಿಗೆ ವೈದ್ಯರ ಮುಖವನ್ನೆ ನೋಡುತ್ತ ಕುಳಿತಿದ್ದರು.

" ವೈದ್ಯರೆ ಹೇಗೆ ಇದೆ? ಹೇಗೆ ಇದೆ ? " ಸಂಜೀವರಾಯರು ಉಕ್ಕೇರುವ ಆತುರತೆಯಿಂದ ಕೇಳಿದರು.

ವೈದ್ಯರು ಮೊದಲು ಸ್ವಲ್ಪ ಸುಮ್ಮನೇ ಇದ್ದರು. ತರುವಾಯ ಅವರು ಶಾಂತರೀತಿಯಿಂದ ಸಂಜೀವರಾಯರಿಗೆ ಹೇಳಿದರು. " ಹೆದರಬೇಡಿರಿ ಸಂಜೀವರಾವ........ನಾಡಿ ಸರಿಯಾಗಿದೆ........ಬೇಗ ಗುಣವಾಗಬಹುದು."

" ಒಂದು ವಾರವಾಗಿ ಹೋಯಿತು ಈ ಕೆಮ್ಮು ಬಂದು. ಈ ದಿನವಂತೂ ವಿಲಕ್ಷಣ ಕೆಮ್ಮು ಇದೆ. ಶ್ವಾಸ ಚೆನ್ನಾಗಿ ಬರುವದಿಲ್ಲ. ಬಹಳ ಹಣ್ಣಾಗಿ ಹೋಗಿದ್ದಾಳೆ. ಈ ಬೇನೆ ಬಂದು ಇಷ್ಟು ದಿವಸಗಳಾದರೂ ಇಂಥ ಕೆಮ್ಮು ಮಾತ್ರ ಇರಲಿಲ್ಲ ! "

" ಬೇನೆ ಅಂದ ಮೇಲೆ ಸ್ವಲ್ಪ ಹೆಚ್ಚುಕಡಿಮೆ ಇರುವುದೇ. ಸಂಜೀವರಾವ, ಗಾಬರಿಯಾಗುವ ಕಾರಣವಿಲ್ಲ. ರಾತ್ರಿಯಲ್ಲಿ ಈ ಕೆಮ್ಮು ತ್ರಾಸಕೊಡುವುದು, ಬೆಳಗಾದ ಮೇಲೆ ಮತ್ತೆ ಹಗುರೆನಿಸುವುದು. "

ವೈದ್ಯರ ಈ ಮಾತು ಕೇಳಿ ಸಂಜೀವರಾಯರು ನಿಟ್ಟುಸಿರು ಬಿಟ್ಟರು. ಏನೋ ಸಮಾಧಾನವೆನಿಸಿತು. ವೈದ್ಯರು ತಮ್ಮ ಜೊತೆಗೆ ತಂದಿದ್ದ ಔಷಧದ ಪೆಟ್ಟಿಗೆ ತೆರೆದು, ಔಷಧದ ಚೀಟಿಗಳನ್ನು ಮಾಡಹತ್ತಿದರು.

" ವೈದ್ಯರೆ, ಮತ್ತೇನಾದರೂ ವಿಶೇಷ ಕಾಳಜಿ ತೆಗೆದುಕೊಳ್ಳಬೇಕೇ ? " ಎಂದು ಅವರ ಜೊತೆಗೆ ಬಂದಿದ್ದ ಶೀನಪ್ಪನವರು ಕೇಳಿದರು.

"ಏನೂ ಇಲ್ಲ. ಹವೆ ಬಹಳ ತಂಪು ಇದೆ. ಆದ್ದರಿಂದ ಎದೆ ಬೆಚ್ಚಗೆ ಇಡಬೇಕು. ಮೇಲಿಂದ ಮೇಲೆ ಕಷಾಯ ಕೊಡಿರಿ" ಎಂದು ಸಮಾಧಾನದ ಮಾತುಗಳನ್ನು ಹೇಳಿ ವೈದ್ಯರು ಎದ್ದು ನಿಂತರು.

ಗೋದಾವರಿ ಮತ್ತೆ ಕೆಮ್ಮಲು ಆರಂಭಿಸಿದಳು. ಸಂಜೀವರಾಯರು ಅವಳ ಎದೆಯ ಮೇಲೆ ಕೈಯಾಡಿಸಿದರು. ಐದು ನಿಮಿಷ ಕೆಮ್ಮು ಹಾಗೆಯೆ ಇತ್ತು. ಆಮೇಲೆ ಸಾವಧಾನವಾಗಿ ಕಡಿಮೆಯಾಯಿತು.

"ಸಂಜೀವರಾವ, ಅರ್ಧ ತಾಸಿಗೊಮ್ಮೆ ಈ ಚೀಟಿಗಳಲ್ಲಿಯ ಔಷಧ ವನ್ನು ಬಿಸಿನೀರಿನಲ್ಲಿ ಹಾಕಿ ಕೊಡಿರಿ. ಬೆಳಗಾಗುವುದರೊಳಗಾಗಿ ಕಫ ಬಿದ್ದು, ಕೆಮ್ಮು ಕಡಿಮೆಯಾಗುವುದು." ಎಂದು ವೈದ್ಯರು ಸಂಜೀವರಾಯರ ಕಡೆಗೆ ಔಷಧ ಕೊಟ್ಟು ಹೊರಡಲನುವಾದರು.

"ಇಲ್ಲ ವೈದ್ಯರೆ, ಈ ರಾತ್ರಿ ಇಲ್ಲಿಯೆ ಇದ್ದು ಬಿಡಿರಿ. ಅಂದರೆ ನಮಗೆ ಚಿಂತೆ ತಪ್ಪುವುದು."

"ಅಷ್ಟೇಕೆ ಗಾಬರಿ? ನೀವು ಕರೆದಾಗ ನಾನು ಬರುತ್ತೇನೆ. ನಮ್ಮ ಮನೆ ಏನು ದೂರವಿದೆಯೆ?"

ವೈದ್ಯರು ಹೊರಹೊರಟರು. ಅವರ ಸಂಗಡ ಶೀನಪ್ಪನವರೂ ಹೋದರು.

ದಾರಿಯಲ್ಲಿ ವೈದ್ಯರು ಶೀನಪ್ಪನವರಿಗೆ ಹೇಳಿದರು. "ಬೇನೆ ಜೋರಾ ಗಿಯೇ ಇದೆ. ರಾತ್ರಿ ಸ್ವಲ್ಪ ಕಾಳಜಿ ತೆಗೆದುಕೊಳ್ಳಬೇಕು." ಈ ಮಾತು ಕೇಳಿ ಶೀನಪ್ಪನವರಿಗೆ ಮೈಯಲ್ಲಿ ನಡುಕ ಹುಟ್ಟಿತು!

ಗೋದಾವರಿಗೆ ಸ್ವಲ್ಪ ಜೊಂಪು ಹತ್ತಿದಂತೆ ಅನಿಸಿತ್ತು. ಸಂಜೀವ ರಾಯರೂ ಶೀನಪ್ಪನವರೂ ಹೊರಗಿನ ಪಡಸಾಲೆಯಲ್ಲಿ ಕುಳಿತು ಮೆಲ್ಲಗೆ ಒಳ ಗಿನ ಧ್ವನಿಯಲ್ಲಿ ಮಾತನಾಡುತ್ತಿದ್ದರು. ಅವರ ಸನಿಹದಲ್ಲಿಯೆ ಹನ್ನೆರಡು ವರ್ಷದ ಮಗಳು ಲಕ್ಷ್ಮಿ ಶಾಂತಚಿತ್ತಳಾಗಿ ಮಲಗಿದ್ದಳು.

"ಸಂಜೀವರಾವ, ನಿಮ್ಮ ಕುಟುಂಬದ ಸುದ್ದಿ ನನಗೆ ಏಕೆ ಹೇಳಲಿಲ್ಲ? ನಾನು ದೊಡ್ಡ ಊರಿಗೆ ಕರೆದುಕೊಂಡು ಹೋಗಿ, ಉತ್ತಮ ಡಾಕ್ಟರಿಗೆ ತೋರಿಸಿ, ಔಷಧ ಕೊಡಿಸುತ್ತಿದ್ದೆ."

"ಶೀನಪ್ಪ, ನೀವು ಹೇಳುವುದು ನಿಜ. ಆದರೆ ನಮ್ಮಂಥ ಬಡವರಿಗೆ

ದೊಡ್ಡ ಊರು ಹೇಗೆ? ದೊಡ್ಡ ಡಾಕ್ಟರು ಹೇಗೆ?" ಸಂಜೀವರಾಯರು ಉಸಿರು ಎಳೆಯುತ್ತಲೆ ಮಾತನಾಡಿದರು.

"ಅದಕ್ಕೇಕೆ ಕಾಳಜಿ ಮಾಡಬೇಕಿತ್ತು? ನಾನು ಇದ್ದೆ! ಹೇಗಾದರೂ ಮಾಡುತ್ತಿದ್ದೆ!" ಶೀನಪ್ಪನವರು ನುಡಿದ ಈ ಮಾತುಗಳನ್ನು ಕೇಳಿ, ಸಂಜೀವ ರಾಯರಿಗೆ ತಮ್ಮ ಜೀವನದ ಹಿಂದಿನ ಘಟನೆಗಳು ಮಿಂಚಿನಂತೆ ಸುಳಿದು ಹೋದವು. ತಮ್ಮ ಸಂಕಟಗಳಲ್ಲಿ ನೆರವಿನ ಕೈ ನೀಡಿದ ಶೀನಪ್ಪನವರ ಚಿತ್ರ ವನ್ನು ಸ್ಮರಿಸಿದರು. "ಶೀನಪ್ಪ, ನಿಮ್ಮಂಥ ಧೈರ್ಯವಂತರು ಕಡಿಮೆ! ನಿಮ್ಮಂಥ ಮಿತ್ರರೂ ಕಡಿಮೆ!" ಎಂದು ಉಸಿರ್ಗರೆದರು.

"ಅದೇನೆ ಇರಲಿ ಸಂಜೀವರಾವ. ಈ ವೈದ್ಯರ ಔಷಧ ನಂಬಲಿಕ್ಕೆ ಆಗದು. ಏನಾದರೂ ಚೂರ್ಣ ಕೊಟ್ಟುಬಿಡುತ್ತಾರೆ. ಅರ್ಥವೇ ಇರುವುದಿಲ್ಲ. ನೋಡಿರಿ ಈಗ...........?" ಶೀನಪ್ಪ ಮುಂದೆ ಮಾತನಾಡಲಿಲ್ಲ. ವೈದ್ಯರು ಆ ಸುದ್ದಿಯನ್ನು ಸಂಜೀವರಾಯರಿಗೆ ತಿಳಿಸದೇ ಇರಲು ಹೇಳಿದ್ದರು.

"ಮುಂದೆ ಏನಾಯಿತೆಂದಿರಿ?" ಸಂಜೀವರಾಯರು ಕತೂಹಲದಿಂದ ಕೇಳಿದರು.

ಅಷ್ಟರಲ್ಲಿ ಒಳಗೆ ನರಳುವ ಧ್ವನಿ ಕೇಳಬಂದಿತು. ಇಬ್ಬರೂ ಗೋದಾ ವರಿಯ ಹತ್ತಿರ ಹೋದರು. ಕೆಮ್ಮು ಜೋರಾಗಹತ್ತಿತು. ಶೀನಪ್ಪ ಔಷಧ ಪುಡಿಯನ್ನು ನೀರಲ್ಲಿ ಹಾಕಿ, ಔಷಧವನ್ನು ತಯಾರಿಸತೊಡಗಿದರು. ಸಂಜೀವ ರಾಯರು ಮೈಮೇಲೆ ಕೈಯಾಡಿಸಹತ್ತಿದರು. ಕೆಮ್ಮು ಹೆಚ್ಚಾಗುತ್ತಲೆ ಇತ್ತು.

"ಅವ್ವ ಎಷ್ಟು ಕೆಮ್ಮುತ್ತಾಳಲ್ಲ!" ಲಕ್ಷ್ಮಿ ಕಣ್ಣು ಒರಸಿಕೊಳ್ಳುತ್ತ ಬಂದು ಗೋದಾವರಿಯ ಹತ್ತಿರ ಕುಳಿತಳು.

"ನೀನು ಏತಕ್ಕೆ ಎದ್ದು ಬಂದೆ ಲಕ್ಕೂ? ಮಲಗಿಕೊಳ್ಳವಾ ಹೋಗು" ಎಂದು ಶೀನಪ್ಪನವರು ಅವಳನ್ನು ಎಬ್ಬಿಸ ಹೋದರು. ಆದರೆ ಗೋದಾವರಿ ಅವಳ ಕೈಹಿಡಿದು ಕೂಡಿಸಿಕೊಂಡಳು.

ಸ್ವಲ್ಪ ಸಮಯದ ನಂತರ ಕೆಮ್ಮು ಕಡಿಮೆಯಾಗುತ್ತಿರುವಾಗ ಗೋದಾ ವರಿ ನರಳಹತ್ತಿದಳು. "ಬಾರವಾ.........ಲಕ್ಕೂ.........ಇಲ್ಲೇ ಕೂಡು......... ಅಯ್ಯೋ ಽ........." ಗೋದಾವರಿ ಅತ್ತ ಇತ್ತಕಡೆ ಉರುಳಿದಳು. ಸಂಜೀವ ರಾಯರು ಕೊಟ್ಟ ಔಷಧವನ್ನು ಸಂಕಟಬಡುತ್ತ ಕುಡಿದಳು. "ಆಹಾ.........

ನಾನು....ಬ....ದು....ಕು....ವು....ದು ಸಾಧ್ಯ ಇ....ಲ್ಲ.... ”

“ ಏನಾದರೂ ಅನ್ನಬಾರದು. ಸುಮ್ಮನೆ ಮಲಗಿರಿ. ಬೇಗ ಗುಣವಾಗುವುದು.” ಶೀನಪ್ಪನವರು ಸಮಾಧಾನಪಡಿಸಿದರು.

“ ಯಾರಿಗೆ ಗೊತ್ತು ? ಆದರೂ........ ? ” ಗೋದಾವರಿ ಹೀಗೆ ಮಾತನಾಡುವಾಗ ಸಂಜೀವರಾಯರು ಅವಳ ದೇಹವನ್ನೆಲ್ಲ ನಿರೀಕ್ಷಿಸುತ್ತಿದ್ದರು. ಮೈ-ಕೈಗಳೆಲ್ಲ ಬಡಕಲಾಗಿದ್ದವು. ದೇಹದಲ್ಲಿ ಏನೂ ಕಾಂತಿ ಇರಲಿಲ್ಲ. ಕಣ್ಣು ಒಳಸಿಕ್ಕಿಕೊಂಡು ಭಯವನ್ನು ಸೂಚಿಸುತ್ತಿದ್ದವು. ಅದರಲ್ಲಿಯೂ ಎದೆಯಲ್ಲಿಯ ಕಫದಿಂದ ಬರುವ ಶ್ವಾಸವು, ಅವಳು ಇನ್ನು ಮುಂದೆ ಬಾಳುವ ಆಶ್ವಾಸನವನ್ನು ನಾಶ ಮಾಡುವಂತಿತ್ತು. ಇದನ್ನೆಲ್ಲ ನೆನೆದು ಸಂಜೀವರಾಯರ ಕಣ್ಣುಗಳಲ್ಲಿ ನೀರೊಡೆದುವು.

ಗೋದಾವರಿ ತನ್ನ ನಿಶ್ಶಕ್ತ ಕಣ್ಣುಗಳನ್ನು ಅರ್ಧ ಮುಚ್ಚುತ್ತ ಅರ್ಧ ತೆರೆಯುತ್ತ ಸುತ್ತಲಿದ್ದವರನ್ನು ನೋಡಿದಳು. ಅವಳಿಗೆ ಬಹಳ ಮಾತನಾಡಬೇಕೆಂಬ ಇಚ್ಛೆ. ಆದರೆ ನಾಲಗೆಗೆ ಆ ಸಾಮರ್ಥ್ಯವಿರಲಿಲ್ಲ. “ ನನಗೆ ಏನೂ ಚಿಂತೆ ಇಲ್ಲ........ಆದರೆ ಲಕ್ಷ್ಮೊಳದು ಒಂದೇ........ ” ಮಾತು ತಡವರಿಸುತ್ತ ಬರುತ್ತಿದ್ದವು.

ಸಂಜೀವರಾಯರಾಗಲಿ, ಶೀನಪ್ಪನವರಾಗಲಿ ಗೋದಾವರಿಯ ಮಾತುಗಳಿಗೆ ಅಡ್ಡಿಯನ್ನು ಮಾಡಲಿಲ್ಲ. ಅವಳು ಹೇಳುವ ಮಾತುಗಳನ್ನು ಸಾವಧಾನವಾಗಿ ಮೂಕಚಿತ್ತರಾಗಿ ಕೇಳಿದರು. ಗೋದಾವರಿ ಮಗಳನ್ನು ತಬ್ಬಿಕೊಂಡಳು. “ ನಮ್ಮ ಜೀವನ ಬಡತನದಲ್ಲೆ ಹೋಯಿತು. ಉಣಲಿಕ್ಕೆ ಇಲ್ಲ.... ಉಡಲಿಕ್ಕೆ ಇಲ್ಲ....ಲಕ್ಷ್ಮೊ ಅವಳಾದರೂ ಸುಖದಿಂದ ಇದ್ದರೆ........ ? ?........ ಶ್ರೀಮಂತ ಮನೆತನ ಸಿಕ್ಕರೆ........? ?........ ಉಶ್ಶ್ಯಾ !........ ಅವಳ ನಸೀಬ ಏನಿದೆನೋ ಏನೋ ? ”

“ ಅವಳ ಮದುವೆಯ ಕಾಳಜಿ ಮಾಡಬೇಡಿರಿ. ಅವಳು ಸುಖವಾಗಿ ಇರುವಂತೆ ನಾನು ನೋಡಿಕೊಳ್ಳುತ್ತೇನೆ ! ”

“ ನಿಜವಾಗಿಯೂ........? ?........ ನಿಜವಾಗಿಯೂ........? ?........ ” ಗೋದಾವರಿ ಉಬ್ಬುಬ್ಬಿ ಶೀನಪ್ಪನವರ ಕಡೆಗೆ ನೋಡಿದಳು. ಆ ಮರಣೋನ್ಮುಖ ಕಣ್ಣುಗಳಲ್ಲಿಯೂ ಮಿಂಚಿನ ಬೆಳಕೊಂದು ಸಂಚರಿಸಿದಂತಾಯಿತು.

ಸಂಜೀವರಾಯರೂ ಅದನ್ನು ಗುರುತಿಸಿದರು. ಗೋದಾವರಿ ಇನ್ನೂ ಏನೇನೋ ಮಾತನಾಡಬೇಕೆಂದಿದ್ದಳು. ಆದರೆ ಒಮ್ಮೆಲೆ ಕೆಮ್ಮು ಮತ್ತೆ ಆರಂಭವಾಯಿತು. ಅವಳನ್ನು ಸಮಾಧಾನ ಮಾಡುವುದಕ್ಕಾಗಿ ಎಲ್ಲರೂ ತ್ವರಿತದಿಂದ ಓಡಾಡಿದರು. ಆದರೆ........? ಅವಳ ಕೊನೆಯುಸಿರನ್ನು ತೆಗೆದುಕೊಂಡೆ ಈ ಕೆಮ್ಮು ಹೋಯಿತು.

ಹೊರಗೆ ಬಾಳಗೋಳನ್ನೆ ಹೊತ್ತುಕೊಂಡು ಬೀಸುವ ಗಾಳಿ, ಸಂಜೀವರಾಯರ ಮನೆಯೊಳಗೂ ಸುಳಿಯಿತು !

## ೨

" ಆಗರ್ಭ ಶ್ರೀಮಂತರು !........ಜಾಗೀರದಾರರು !! " ಈ ವಿಚಾರ ಸಂಜೀವರಾಯರಿಗೆ ಅತ್ಯಂತ ಅಚ್ಚರಿಯನ್ನುಂಟು ಮಾಡಿತು.

" ಹೂಂ ! ಸಂಜೀವರಾವ ! ಈ ವಿಷಯದ ಬಗ್ಗೆ ನಾನು ಎಲ್ಲ ಕೂಲಂಕಷ ವಿಚಾರಿಸಿದ್ದೇನೆ " ಶೀನಪ್ಪನವರು ನಸ್ಯವನ್ನು ಏರಿಸುತ್ತ ನುಡಿದರು.

ಗೋದಾವರಿ ತೀರಿಕೊಂಡು ಮೂರು ವರುಷಗಳ ನಂತರ ಸಂಜೀವರಾಯರೂ ಶೀನಪ್ಪನವರೂ ಅದೇ ಸ್ಥಳದಲ್ಲಿ ಕುಳಿತುಕೊಂಡು ಲಕ್ಷ್ಮಿಯ ಮದುವೆಯ ಬಗ್ಗೆ ಯೋಚಿಸುತ್ತಿದ್ದರು. ಗೋದಾವರಿ ಸಾಯುವಾಗ ಆಡಿದ ಮಾತುಗಳೂ, ತಾವು ಕೊಟ್ಟ ವಚನವೂ ಶೀನಪ್ಪನವರಿಗೆ ಮೇಲಿಂದ ಮೇಲೆ ನೆನಪಾಗುತ್ತಿದ್ದವು. ಆ ವಚನವನ್ನು ಪೂರೈಸುವ ಯೋಗವೂ ಈಗ ಕೂಡಿಬಂದಿತ್ತು.

ಸಂಜೀವರಾಯರಿಗೆ ಈ ಆಶ್ಚರ್ಯದ ಸುದ್ದಿಯಲ್ಲಿ ಒಂದು ಸಂಶಯವೂ ಬರುತ್ತಿತ್ತು; " ಅಂಥ ಶ್ರೀಮಂತ ಮನೆತನದವರು ತಮ್ಮ ಬಡವರ ಹೆಣ್ಣನ್ನು ಸ್ವೀಕರಿಸಲು ಒಪ್ಪಿರುವರೆ ? " ಎಂದು ಶೀನಪ್ಪನವರಿಗೆ ಕೇಳಿದರು.

" ಅದರಲ್ಲಿ ಏನು ? ಶ್ರೀಮಂತ, ಬಡವ ಇದನ್ನು ನೋಡಿ ಏನು ಮಾಡಬೇಕಾಗಿದೆ ? ಮುಖ್ಯ ರೂಪ ಇರಬೇಕು. ನಿಮ್ಮ ಲಕ್ಷ್ಮಿ ರೂಪದಲ್ಲಿ ರಂಭೆಯನ್ನು ಮೀರಿದ್ದಾಳೆ. ಸಂಜೀವರಾವ, ಅವಳ ಬಗ್ಗೆ ನಾನು ಚಾಚೂ ಬಿಡದೆ ಎಲ್ಲವನ್ನು ಹೇಳಿದ್ದೇನೆ. ಜಾಗಿರದಾರ ರಾಯರು ಒಪ್ಪಿಕೊಂಡು ಬಿಟ್ಟಿದ್ದಾರೆ.

ಹುಡಿಗೆಯನ್ನು ತೋರಿಸಿ ಬೇಗನೆ ಲಗ್ನ ಮುಗಿಸಿ ಬಿಡೋಣ."

ಶೀನಪ್ಪನವರ ಈ ಮಾತುಗಳು ಹರ್ಷದ ಹನಿಗಳನ್ನು ತೂರಿದಂತಾಯಿತು. ಆ ಹನಿಗಳಿಂದ ಸಂಜೀವರಾಯರ ಹೃದಯವು ಆನಂದಸಾಗರವಾಯಿತು. "ಶೀನಪ್ಪನವರೆ, ನನ್ನ ಹೆಂಡತಿ ಎಲ್ಲವನ್ನೂ ನಿಮಗೆ ಒಪ್ಪಿಸಿಬಿಟ್ಟಿದ್ದಾಳೆ. ನೀವು ಏನು ಮಾಡಿದ್ದಕ್ಕೂ ನನ್ನ ಸಮ್ಮತಿ. ಲಕ್ಕೂ ನಿಮ್ಮ ಮಗಳೆ!"

"ಅಹುದು ಸಂಜೀವರಾವ, ನೀವು ಹೇಳಿದ್ದನ್ನು ಒಪ್ಪಿಕೊಳ್ಳುವೆ. ನಿಮ್ಮಷ್ಟೆ ಕಾಳಜಿ ನನಗೂ ಇರುವದೆಂದೇ ನಾನು ಈ ಕಾರ್ಯದಲ್ಲಿ ಕೈಹಾಕಿದ್ದೇನೆ. ಮುಖ್ಯ ಸ್ವರ್ಗ ಲೋಕದಲ್ಲಿರುವ ಗೋದಾವರಿಬಾಯಿಯವರಿಗೆ ಆನಂದವಾಗಬೇಕು. ಅವರ ಹೃದಯಕ್ಕೆ ಶಾಂತಿ ಸಿಗಬೇಕು. ಇದೇ ನನ್ನ ಉದ್ದೇಶ. ಆದರೂ ಸಂಜೀವರಾವ, ನನ್ನೊಬ್ಬನ ಮೇಲೆಯೆ ಭಾರ ಹಾಕಿದರೆ ಹೇಗೆ? ನೀವು ಸಹ ಇದರಲ್ಲಿ ವಿಚಾರ ಮಾಡಬೇಕಾಗುತ್ತದೆ. ನೋಡಿರಿ, ವರ ಬಹಳ ಅಪರೂಪ. ಅವರ ಫೋಟೊ ಸಹ ತಂದಿದ್ದೇನೆ." ಶೀನಪ್ಪ ತಮ್ಮ ಕೈಯಳತೆಯಲ್ಲಿ ಇಟ್ಟಿದ್ದ ತಮ್ಮ ಕೈಚೀಲವನ್ನು ಸಮೀಪ ಸರಿಸಿಕೊಂಡರು. ಅದರಲ್ಲಿ ಹಾಳೆಯಲ್ಲಿ ಸುತ್ತಿ ಇಟ್ಟಿದ್ದ ಒಂದೊಂದೆ ಫೋಟೊ ಹೊರಗೆ ತೆಗೆಯಹತ್ತಿದರು.

"ಇದೇನು? ಎಷ್ಟು ಫೋಟೊ ತಂದಿರುವಿರಿ? ಯಾವುದಾದರೂ ಒಂದು ತಂದಿದ್ದರೆ ಸಾಕಾಗುತ್ತಿತ್ತು." ಸಂಜೀವರಾಯರು ಸೌಜನ್ಯದಿಂದ ನುಡಿದರು.

"ಇರಲಿ! ನಿಮ್ಮ ಭಾವೀ ಅಳಿಯನನ್ನು ಒಂದೇ ಫೋಟೊವಿನಲ್ಲಿ ನೋಡಿದರೆ ನಿಮಗೆ ತೃಪ್ತಿಯಾಗಲಿಕ್ಕಿಲ್ಲ!!" ಶೀನಪ್ಪನವರು ಮುಗುಳುನಗೆ ನಗುತ್ತ ಹೇಳಿದರು, "ಅವರ ತಂದೆಯವರಿಗೆ ಮಗನ ಮೇಲೆ ಪ್ರೇಮ ಬಹಳ. ಒಬ್ಬನೇ ಒಬ್ಬ ಮಗ. ಹೀಗಾಗಿ ಅವನ ಅನೇಕ ಫೋಟೊಗಳನ್ನು ತೆಗೆಯಿಸಿದ್ದಾರೆ. ಕುಳಿತಾಗ, ನಿಂತಾಗ, ಓಡಾಡುವಾಗ, ಆಟವಾಡುವಾಗ.........." ಹೀಗೆ ಅನ್ನುತ್ತ ಒಂದೊಂದೆ ಫೋಟೊವನ್ನು ಸಂಜೀವರಾಯರಿಗೆ ತೋರಿಸತೊಡಗಿದರು. ಶೀನಪ್ಪನವರ ಮುಖದಲ್ಲಿ ಆನಂದ ಲಾಸ್ಯವಾಡುತ್ತಿತ್ತು. ಮೊದಲೆ ಅವರದು ಕೆಂಪು ಮುಖ. ಮೂವತ್ತು ವರುಷದ ಹರೆಯದ ವಯಸ್ಸು. ಆನಂದದಲ್ಲಿ ಇದ್ದಾಗಲಂತೂ ಅವರ ಮುಖದಲ್ಲಿ ಮತ್ತಷ್ಟು ಕಳೆ ಇರುತ್ತಿತ್ತು.

“ ಈ ಫೋಟೊ ಬಹಳ ಚೆನ್ನಾಗಿದೆ........” ಸಂಜೀವರಾಯರು ಒಂದು ಫೋಟೊವನ್ನು ಎತ್ತಿ ಹೇಳಿದರು “ ಉತ್ತಮ ಜಾತಿಯ ಕುದುರೆಯ ಮೇಲೆ ಹೇಗೆ ಕುಳಿತಿದ್ದಾರೆ ನೋಡಿರಿ ! ಅಂತೂ........ ”

“ ರಾಜಕುಮಾರನಂತೆ ಇದ್ದಾರೆ ” ಶೀನಪ್ಪನವರು ಮಾತು ಪೂರ್ಣಗೊಳಿಸಿದರು. “ ರಾಜಪಿಂಡ ಅದು ! ಸುಖದ ಮೈ ಚೆನ್ನಾಗಿ ಇರದೆ ಹೇಗೆ ಇದ್ದೀತು!! ನೋಡಿರಿ ಸಂಜೀವರಾವ. ಮದುವೆಯ ಮೆರವಣಿಗೆ ನಡೆದಿದೆ. ಅಳಿಯ ದೇವರನ್ನು ಸ್ವೀಕಾರ ಮಾಡಿರಿ. ಕುದುರೆಯ ಮೇಲೆ ಕುಳಿತು ಬಂದಿದ್ದಾರೆ ನಿಮ್ಮ ಕಡೆಗೆ........! ” ಶೀನಪ್ಪನವರು ಚೇಷ್ಟೆಯಿಂದ ನಗಹತ್ತಿದರು. ಆ ನಗೆಯಲ್ಲಿ ಸಂಜೀವರಾಯರ ನಗೆಯೂ ಸಂಗಮವಾಯಿತು.

“ ಇನ್ನು ನಾನು ಹೆಚ್ಚಿಗೇನು ಮಾತನಾಡುವುದು ಶೀನಪ್ಪ ! ವರನನ್ನು ನೋಡುವ ಕಾರಣವೇ ಇಲ್ಲ. ಮದುವೆ ನಿಶ್ಚಯ ಮಾಡಿ ಬಿಡೋಣ.”

“ ಹಾಗೆಂದರೆ ಹೇಗೆ? ” ಶೀನಪ್ಪನವರು ನಗೆಯನ್ನು ತಡೆದು, ನಸ್ಯವನ್ನು ಏರಿಸುತ್ತ ಗಂಭೀರವಾಗಿ ಕೇಳಿದರು.

“ ಫೋಟೊದಲ್ಲಿ ನೋಡಿದ ಮೇಲೆ ಆಯಿತಲ್ಲ ! ಮನುಷ್ಯ ಬೇರೆ, ಫೋಟೊ ಬೇರೆ ಆಗಿರುತ್ತದೆಯೆ ? ”

“ ಏನೇ ಆಗಲಿ. ಹಿಂದುಗಡೆ ನನ್ನ ಮೇಲೆ ಶಬ್ದಗಳು ಬರಬಾರದು. ಅದಕ್ಕೆ ನಾನು ಈಗ ಮೊದಲೇ ಹೇಳುವುದು. ನೀವೇನೋ ದೂರ ಇಲ್ಲಿಯೆ ಉಳಿಯಬಹುದು. ಆದರೆ ನಿಮ್ಮ ಮಗಳು............? ಅವಳದು ಮುಖ್ಯ. ಅವಳನ್ನು ಕೇಳಿರಿ. ”

“ ಶೀನಪ್ಪ, ನೀವು ಒಳ್ಳೇ ಸಂಶಯ ತೆಗೆದುಕೊಳ್ಳುವವರು !! ನನ್ನ ಮಗಳ ಸ್ವಭಾವ ನಿಮಗೆ ಗೊತ್ತಿಲ್ಲವೆ? ಆಕಳಿನಂಥವಳು............ ಮತ್ತೆ ನೀವೇನು ಹೊರಗಿನವರೆ? ನಮ್ಮ ಸುಖ ದುಃಖ ನಿಮಗೆ ಗೊತ್ತಿಲ್ಲವೇ ?.... ನೀವು ನುಡಿದದ್ದೆ ವೇದವಾಕ್ಯ. ನಿಮ್ಮ ಒಪ್ಪಿಗೆಯಿದೆಯೆಂದ ಮೇಲೆ ನಮ್ಮದೂ ಒಪ್ಪಿಗೆ. ನನ್ನದೂ ಅಂದರೆ ಲಕ್ಕೂಳದೂ ಒಪ್ಪಿಗೆ. ”

“ ಸಂಜೀವರಾವ, ಇದೆಲ್ಲ ನನ್ನ ಮೇಲಿನ ವಿಶ್ವಾಸ ! ಆದರೂ ಲಕ್ಕೂನ ಕಿವಿಯ ಮೇಲೆ ಇದನ್ನೊಮ್ಮೆ ಹಾಕಿ ಬಿಡಿರಿ. ಒಮ್ಮೆ ಅವಳು ತನ್ನ ಪತಿಯನ್ನು ನೋಡಲಿ. ”

" ಶೀನಪ್ಪ, ನೀವು ಬಹಳ ಧೂರ್ತರು. ಆಗಲಿ, ನಿಮ್ಮಂತೆಯೆ ಆಗಲಿ. "

" ಸಂಜೀವರಾವ, ಈ ಲಗ್ನವೊಂದು ನಿಶ್ಚಿತವಾದರೆ. ನಿಮ್ಮ ಮಗಳ ದೈವ ತೆರೆಯಿತೆಂದೇ ಹೇಳಬೇಕು. ಮನೆಯಲ್ಲಿ ಏನು ಆರ್ಭಾಟ ! ಏನು ದುಡ್ಡು ! ಏನು ಭಂಗಾರ ! ಯಾವುದಕ್ಕೂ ಕೊರತೆ ಇಲ್ಲ. ದಿನಾಲು ಕೂಡಿ ಬೀಳುವ ಹಣವನ್ನು ನನಗೆ ಸರಿಯಾಗಿ ಎಣಿಸಲು ಆಗುವುದಿಲ್ಲ........ "

ಸಂಜೀವರಾಯರ ಹೃದಯವು ಆನಂದದಿಂದ ಉಕ್ಕೇರಿತು. ಅವರಿಗೆ ಈಗ ನಾಲ್ವತ್ತೇ ವರ್ಷವಾಗಿದ್ದರೂ, ತಾವು ಮುದುಕರೆಂದೇ ಭಾವಿಸಿದ್ದರು. ಅವರ ಸಂತೋಷದ ಕಣ್ಗೊಂಬೆ ಲಕ್ಷ್ಮಿಯೊಬ್ಬಳೇ ಆಗಿದ್ದಳು. ಅವಳ ಭವಿತವ್ಯ ಉಜ್ವಲವಿರುವದನ್ನು ನೆನೆದು, ಅವರಿಗೆ ಹೇಳಲಾರದಷ್ಟು ಹಿಗ್ಗು ಉಂಟಾಯಿತು ಸ್ವಲ್ಪ ಸಮಯ ಅವರ ಬಾಯಲ್ಲಿ ಮಾತುಗಳೇ ಹೊರಡಲಿಲ್ಲ. " ಶೀನಪ್ಪ, ಇದೆಲ್ಲ ನಿಮ್ಮ ಪುಣ್ಯ ! " ಎಂದು ಆನಂದದಿಂದ ಉಸಿರ್ಗರೆದು ಹೇಳಿದರು. " ಹೂಂ ! ಇಷ್ಟೆಲ್ಲ ಮಾತನಾಡಿ ಲಗ್ನವನ್ನೆ ನಿಶ್ಚಯ ಮಾಡಿಯಾಯಿತು. ಆದರೆ ಅವರ ಹೆಸರನ್ನೆ ಕೇಳಲಿಲ್ಲ........? ನನ್ನ ಉಬ್ಬಿನಲ್ಲಿ ಅದನ್ನೆ ಮರೆತೆ ! ಏನ್ರಿ ಶೀನಪ್ಪ ಅವರ ಹೆಸರು ? "

" ಅವರ ಹೆಸರು ಏನು ? ನಿಮ್ಮ ಅಳಿಯಂದಿರ ಹೆಸರು ಎಂದು ಕೇಳಲು ನಾಚಿಕೆ ಏಕೆ ? ಹೆಸರು ನಾರಾಯಣರಾವ. ಆದರೂ ಮನೆಯಲ್ಲಿ ಎಲ್ಲರೂ ಅವರಿಗೆ ನಾನಾಸಾಹೇಬ ಎಂದು ಕರೆಯುತ್ತಾರೆ. ಸಂಜೀವರಾವ, ನಿಜವಾಗಿಯೂ ಸಾಹೇಬರೇ ಇದ್ದಾರೆ ಅವರು ! " ಸಂಜೀವರಾವ ಗಹಗಹಿಸಿ ನಕ್ಕರು.

ಶೀನಪ್ಪ ಮತ್ತು ಸಂಜೀವರಾವ ಇಬ್ಬರೂ ಕೂಡಿಕೊಂಡು ಆಡುವ ಈ ಮಾತುಗಳನ್ನು ಅಡುಗೆಯ ಮನೆಯಲ್ಲಿ ಲಕ್ಷ್ಮಿ ಮತ್ತು ಶಾಂತಾ ಇಬ್ಬರೂ ಕುತೂಹಲದಿಂದ ಕೇಳುತ್ತಿದ್ದರು. ಶಾಂತಾ ಲಕ್ಷ್ಮಿಯ ಜೀವದ ಗೆಳತಿ. ಮೊದಲಿನಿಂದಲೂ ಕೂಡಿ ಆಡಿದವರು. ಅವರು ಒಳಗೆ ಫಲಾಹಾರದ ಸಿದ್ಧತೆಯಲ್ಲಿ ತೊಡಗಿದ್ದರು. ಶೀನಪ್ಪನವರಿಗೆ ಅವಲಕ್ಕಿಯ ಮೇಲೆ—ಅದರಲ್ಲಿಯೂ ರುಚಿರುಚಿಯಾಗಿ ಹಚ್ಚಿದ ಮಸಾಲೆ ಅವಲಕ್ಕಿಯ ಮೇಲೆ ಬಹಳ ಪ್ರೇಮ. ಅದನ್ನು ಎಷ್ಟು ತಿಂದರೂ ಕಡಮೆಯೆ. ಅಂತೆಯೆ ಒಂದು ಪರಾತದ ತುಂಬ ಅವಲಕ್ಕಿ ಹಾಕಿಕೊಂಡು, ಅದರಲ್ಲಿ ಬೇರೆ ಬೇರೆ ಪದಾರ್ಥಗಳ ಜೋಡಣೆ ಮಾಡುತ್ತ

ಲಕ್ಷ್ಮಿ ಕುಳಿತುಕೊಂಡಿದ್ದಳು. ಶಾಂತಾ ಒಲೆಯ ಮೇಲೆ ಒಗ್ಗರಣೆಯನ್ನಿಟ್ಟಿದ್ದಳು. ಶೀನಪ್ಪನವರು ನಾನಾಸಾಹೇಬರನ್ನು ಹೊಗಳುವ ಮಾತುಗಳನ್ನು ಕೇಳಕೇಳುತ್ತ, ಶಾಂತಾಳಿಗೆ ಒಮ್ಮೆಲೆ ಸ್ಫೂರ್ತಿ ಬಂದಿತು. ಓಡಿ ಹೋಗಿ ಲಕ್ಷ್ಮಿಯ ಕೈಗಳನ್ನು ಗಟ್ಟಿಯಾಗಿ ಹಿಡಿದು, ಅವಳ ಕಿವಿಯಲ್ಲಿ ಕೇಳಿದಳು—" ಯಾರ ಸಾಹೇಬರು ಅವರು ?? " ಎಂದು.

ಲಕ್ಷ್ಮಿ ನಾಚಿಕೆಯಿಂದ ತಲೆ ಬಾಗಿಸಿದಳು. ಅವಳ ಮುಖ ಮುದ್ರೆ ಬದಲಿಸಿತು. ಶಾಂತಾ ಗಟ್ಟಿಯಾಗಿ ಹಿಡಿದ ಕೈಗಳನ್ನು ಕೊಸರಿಕೊಳ್ಳುತ್ತ "ಕೈಬಿಡು ........ಕೈ ಬಿಡು........ಶಾಂತಾ........ !" ಎಂದು ಒಳಗಿನ ಧ್ವನಿಯಲ್ಲಿ ಒದರಿಕೊಂಡಳು.

" ಹೂಂ ! ಬಿಟ್ಟೇ ಬಿಡುತ್ತೇನೆ ಇನ್ನು ಮೇಲೆ ! ನಿನ್ನ ಕೈ ಹಿಡಿಯುವವರು ಬೇರೆಯವರೆ ಇದ್ದಾರೆಂದ ಮೇಲೆ........?? " ಚೇಷ್ಟೆಯಿಂದ ಗೋಣು ಕೊಂಕಿಸಿ ಶಾಂತಾ ಮಾತನಾಡಿದಳು.

" ಈಗಾಗಲೆ ನಿನ್ನ ಚೇಷ್ಟೆ ಆರಂಭವಾಯಿತು. ಇನ್ನೂ ಯಾವುದೂ ನಿಶ್ಚಿತವಿಲ್ಲ........"

" ಏನು ನಿಶ್ಚಿತವಿಲ್ಲ ಅನ್ನುವಿ ? ಶುಭದ ಕಾರ್ಯ ಬೇಗನೆ ಆಗಿ ಬಿಡುವವು. ಇವೊತ್ತು ಮಾತು, ನಾಳೆ ಮದುವೆ. "

" ಶಾಂತಾ, ಅಂತೂ ನನ್ನ ಮದುವೆಯನ್ನು ನೀನು ಮಾಡಿಬಿಡುವೆಯಲ್ಲ! ಇಂದೇ ಗೋಧೂಳಿ ಮುಹೂರ್ತದಲ್ಲಿ ಎಲ್ಲವೂ ಆಗಲಿ ! "

ಲಕ್ಷ್ಮಿಯ ಚೇಷ್ಟೆಯ ಮಾತುಗಳನ್ನು ಶಾಂತಾ ತಿಳಿದುಕೊಂಡಳು. " ಆಗಲಿ ಏಕೆ ? ಆಗಿಯೇ ಬಿಡುತ್ತದೆ. ಶೀನಪ್ಪನವರು ಸಾಮಾನ್ಯರೆ ? ಅವರದು ಏಡಿ ಹಿಡಿತ. ಒಂದು ಕೆಲಸ ಆರಂಭಿಸಿದರೆ ಮುಗಿಯುವವರೆಗೂ ಅದನ್ನು ಬಿಡುವದಿಲ್ಲ. ಮೇಲಾಗಿ ಅದೇ ಮನೆಯಲ್ಲಿ ಅವರು ಇರುವವರು. ಅವರಿಗೆ ಎಲ್ಲವೂ ಗೊತ್ತಿದೆ. ಅಂತೆಯೇ ಈ ದಿನ ಇಷ್ಟೆಲ್ಲ ಹೇಳಿದ್ದಾರೆ........ನೋಡು ಲಕ್ಕು, ಇನ್ನು ಮೇಲೆ ನೀನು........"

ಶಾಂತಾ ಮತ್ತೆ ಮತ್ತೆ ತನ್ನ ಮದುವೆಯ ಮಾತನ್ನು ಎತ್ತುವಳೆಂದು ಲಕ್ಷ್ಮಿಗೆ ಅನಿಸಿತು. ಅವಳ ಹಿಡಿತದಿಂದ ಕೈ ಕೊಸರಿಕೊಳ್ಳಬೇಕೆಂದಳು. " ಶಾಂತಾ ನನ್ನ ಕೈ ಬಿಡು. ಮದುವೆ ಮಾಡುವವರು ಮಾಡುತ್ತಾರೆ. ನಾನೇನು

ವಿಚಾರ ಮಾಡುವುದು ? ನನಗೆ ಈಗ ಇಲ್ಲಿ ಕೆಲಸವಿದೆ. "

"ಲಕ್ಶ್ಮೀ, ಇನ್ನೇನು ನೀನು ಕೆಲಸ ಮಾಡುವ ಹಾಗಿಲ್ಲ. ನೀನು ಇನ್ನು ಜಾಗಿರದಾರರ ಬಾಯಿಸಾಹೇಬ !" ಶಾಂತಾ ಕೊನೆಯ ಶಬ್ದಗಳಾದ ಜಾಗಿರದಾರ ಬಾಯಿಸಾಹೇಬ ಎಂಬ ಅಕ್ಷರಗಳನ್ನು ಬಹಳ ಒತ್ತಿ ಒತ್ತಿ ನುಡಿದಳು.

ಲಕ್ಷ್ಮಿಗೆ ಏನು ಉತ್ತರ ಕೊಡಬೇಕೆಂಬುದೇ ತಿಳಿಯಲಿಲ್ಲ. ಒಮ್ಮೆಲೆ ಒಗ್ಗರಣೆ ಹೊತ್ತ ವಾಸನೆ ಬಂದಿತು. "ನೋಡು ಶಾಂತಾ ನಿನ್ನ ಕೆಲಸ ! ಕೈಬಿಟ್ಟು ಹೋಗೆಂದು ಹೇಳಿದರೆ ಕೇಳಲಿಲ್ಲ." ಎಂದು ಇದೇ ನೆವದಿಂದ ಶಾಂತಾಳ ಮಾತಿನ ರೀತಿಯನ್ನು ಬದಲಿಸಲು ಲಕ್ಷ್ಮಿ ಹೇಳಿದಳು.

"ಅಹುದು ! ಅಹುದು ! ಲಕ್ಶ್ಮೀ. ಇನ್ನು ಮೇಲೆ ನಿನ್ನ ಮಾತನ್ನೆ ಕೇಳಬೇಕು. ಇನ್ನು ನೀನು ದೊಡ್ಡವಳು !!"

"ಶಾಂತಾ ಆ ಹರಟೆ ಬೇಡ ! ನೀನು ಸುಮ್ಮನಿರುತ್ತಿಯೋ ಇಲ್ಲವೋ?"

"ನೀನು ಜಾಗಿರದಾರಿಣಿ ಆದ ಮೇಲೆ ನಮ್ಮನ್ನು ಎಲ್ಲಿ ಮಾತನಾಡಿಸುತ್ತಿಯೋ ಇಲ್ಲವೋ !"

ಶಾಂತಾಳ ಮಾತಿಗೆ ಅದರಂತೆಯೆ ಉತ್ತರ ಕೊಡಬೇಕೆಂದು ಮಾಡಿ, ಲಕ್ಷ್ಮಿ ಜೋರಿನಿಂದ ಹೇಳಿದಳು "ಇಲ್ಲ, ಇಲ್ಲ. ಮಾತನಾಡಿಸುವದಿಲ್ಲ" ಎಂದು.

"ಏನು ಅದು ಮಾತನಾಡಿಸುವದಿಲ್ಲ ಅನ್ನುವುದು ?" ಸಂಜೀವರಾಯರು ಒಮ್ಮೆಲೆ ಪ್ರವೇಶಿಸಿ ಕೇಳಿದರು. "ಲಕ್ಶ್ಮೀ, ಏನಾದರೂ ಜಗಳವೇನು....?"

ಶಾಂತಾ, ಲಕ್ಷ್ಮಿ ಇಬ್ಬರೂ ಮುಗುಳುನಗೆ ನಕ್ಕರು. ಯಾರೂ ಏನೂ ಉತ್ತರ ಕೊಡಲಿಲ್ಲ. ಸಂಜೀವರಾಯರೂ ಮುಂದೆ ಆ ಮಾತನ್ನು ಬೆಳೆಯಿಸದೆ "ಏನು ಒಗ್ಗರಣೆ ಹೊತ್ತ ವಾಸನೆ ಇಡಿಗಿಬಿಟ್ಟದೆ ! ಎಷ್ಟು ತಡ ಮಾಡಿದಿರಿ ಫಲಾಹಾರ ಕಳಿಸಲು ? ಶಾಂತಾ ಬೇಗ ಕಳಿಸವ್ವಾ."

ಅವಲಕ್ಕಿಯ ಫಲಾಹಾರದ ಕಾರ್ಯಕ್ರಮು ಆ ದಿನ ಮುಗಿಯಿತು. ಮುಂದೆ ಹೋಳಿಗೆಯ ಕಾರ್ಯಕ್ರಮುದ ಸಿದ್ಧತೆ ನಡೆಯಿತು. ಶೀನಪ್ಪನವರಿಗೆ ಯಾವ ಕೆಲಸವನ್ನು ಹೇಗೆ ಮಾಡಬೇಕೆಂಬುದು ಬಹಳ ಚೆನ್ನಾಗಿ ಗೊತ್ತು. ಲಕ್ಷ್ಮಿಯನ್ನು ಕರೆದುಕೊಂಡು ಹೋಗಿ ತೋರಿಸಿ ಬರುವ ಭಾರವನ್ನು ತಾವೇ ವಹಿಸಿಕೊಂಡರು. ಸಂಜೀವರಾಯರಿಗೆ ಒಂದೆರಡು ಬಾರಿ ಜುಲುಮೆ ಮಾಡುವಂತೆ ಮಾಡಿದರು. ಕೊನೆಗೆ ತಾವೇ ಹೇಳಿದರು "ಬೇಕಾದರೆ ಬಿಟ್ಟುಬಿಡಿರಿ.

ಮುದುಕರು ಮುದುಕರು ಎಂದು ನೀವೇ ಕರೆದುಕೊಳ್ಳುತ್ತೀರಿ. ನಿಮಗೆ ಏಕೆ ತ್ರಾಸ? ಲಗ್ನ ಮಾಡಿಕೊಳ್ಳುವವಳು ಲಕ್ಕು. ಅವಳು ನೋಡಿದರಾಯಿತು."

ಲಕ್ಷ್ಮಿ ಮತ್ತು ಶೀನಪ್ಪನವರು ಹೋಗಿ ಬಂದುದು ಆಯಿತು. ಮದುವೆಯ ಮುಹೂರ್ತವೂ ನಿಶ್ಚಿತವಾಯಿತು. ತಿರುಪತಿ ವೆಂಕಟೇಶನ ಸಾನ್ನಿಧ್ಯದಲ್ಲಿ ಮದುವೆ. ಇಬ್ಬಣದವರೂ ಅಲ್ಲಿಗೇ ಹೋಗುವುದಾಯಿತು. ಎಲ್ಲ ಖರ್ಚನ್ನು ಜಾಗಿರದಾರರೆ ವಹಿಸಿಕೊಂಡರು.

ಆ ಉತ್ತುಂಗ ಪರ್ವತದ ಶಿಖರದ ಮೇಲೆ, ಪವಿತ್ರ ಕ್ಷೇತ್ರದಲ್ಲಿ ಲಕ್ಷ್ಮೀ ನಾರಾಯಣರಿಗೆ ಕೂಡಿದ ಜನರು ಮಂಗಲಾಕ್ಷತೆಯ ಮಳೆಗರೆದರು! ದೇವರೆದುರಿಗೆ ಕಣ್ಣುಮುಚ್ಚಿ ಬಾಗಿ ನಮಸ್ಕರಿಸಿ ಹೊಸ ದಂಪತಿಗಳಿಗೆ ಸಂಜೀವರಾಯರು ಅಕ್ಷತೆ ಹಾಕಿದರು.

## ೩

ಕಳಸಾಪೂರ ಗ್ರಾಮದಲ್ಲಿ ಜಾಗಿರದಾರರದೆ ದೊಡ್ಡ ಮನೆ. ಅದಕ್ಕೆ ಎಲ್ಲರೂ ವಾಡೆಯೆಂದು ಕರೆಯುವರು. ಬಹಳ ದಿನಗಳಿಂದ ಈ ವಾಡೆಯು ಆ ಹಳ್ಳಿಯಲ್ಲಿ ಇದೆ. ಹೊರಗಿನಿಂದ ನೋಡುವವರಿಗೆ ಅದು ಒಂದು ಭವ್ಯವಾದ ಕೋಟೆಯಂತೆಯೆ ಕಂಗೊಳಿಸುವುದು. ಎತ್ತರವಾದ ಗೋಡೆಗಳು ಈ ವಾಡೆಗೆ ಇರುವುದರಿಂದ, ತುಸು ಎತ್ತರವಾದ ಸ್ಥಳದಲ್ಲಿ ಅದು ಕಟ್ಟಲ್ಪಟ್ಟಿದ್ದುದರಿಂದ, ಬಹು ದೂರದವರೆಗೆ ಈ ವಾಡೆಯು ಎದ್ದು ಕಾಣುವುದು.

ವಾಡೆಯ ಹಿಂದೆ ಎತ್ತರವಾದ ದಿನ್ನೆಯಿದೆ. ಬಲಗಡೆಗೆ ಒಂದು ಮಾವಿನ ತೋಪು ಇದೆ. ಸುತ್ತುಮುತ್ತಲೂ ಅಲ್ಲಲ್ಲಿ ಹಸುರು ಗಿಡಗಳು ಶೋಭಿಸುತ್ತವೆ. ಇವೆಲ್ಲವುಗಳಿಂದ ಆ ವಾಡೆಯು ನಿಸರ್ಗ ಸೌಂದರ್ಯದ ಹಿನ್ನೆಲೆಯಲ್ಲಿ ರಂಜಿಸುವುದು.

ಜಾಗಿರದಾರರ ಮನೆಯ ತಲೆಬಾಗಿಲು ಅಗಸೆಯ ಬಾಗಿಲವಿದ್ದಂತೆ ಇದೆ. ಅದನ್ನು ದಾಟಿದ ಕೂಡಲೆ ಇರುವ ಬಲಭಾಗದ ಕಟ್ಟೆಯ ಮೇಲೆ ಒಬ್ಬ ಆಳುಮಗ ಇರುವನು. ಅವನು ಜಗಜಟ್ಟಿ! ಕೈಯಲ್ಲಿ ಒಂದು ದಪ್ಪವಾದ

ಕೋಲನ್ನು ಹಿಡಿದುಕೊಂಡು ಸದಾ ಬಾಗಿಲದ ಹತ್ತಿರವೇ ಇರುವನು. ಹೊಸದಾಗಿ ಒಳಗೆ ಬರುವವರನ್ನೆಲ್ಲ ಸಾಮಾನ್ಯವಾಗಿ ಹೆದರಿಸಿಕೊಂಡೇ ಒಳಗೆ ಬಿಡುವನು. ಅವನ ಹತ್ತಿರ ನಿಂತ ನಾಯಿಯೂ ಜನರನ್ನು ಹೆದರಿಸಿಕೊಳ್ಳುವುದು.

ಒಳಗೆ ವಿಸ್ತಾರವಾದ ಒಳಅಂಗಳ. ವಿಸ್ತಾರವಾದ ಪಡಸಾಲೆ ಮತ್ತು ನಡುಮನೆ! ಸ್ಥಳಕ್ಕೆ ಏನೂ ಕೊರತೆ ಇರಲಿಲ್ಲ. ರಾಜರ ದಿವಾಣಖಾನೆಯಲ್ಲಿ ಇರುವಂತೆ ದೊಡ್ಡ ದೊಡ್ಡ ಕಂಬಗಳು ಪಡಸಾಲೆಯಲ್ಲಿ ಇವೆ. ಆದರೆ ಇಲ್ಲಿ ಯಾರು ಯಾರು ಓಡಾಡುತ್ತಿರುವರೊ ಯಾರಿಗೂ ತಿಳಿಯುವ ಹಾಗಿಲ್ಲ. ಹರಟೆ ಹೊಡೆಯುವ ಜನರೂ ಇರುತ್ತಾರೆ. ಕೆಲಸ ಮಾಡುವ ಆಳುಗಳೂ ಇರುತ್ತಾರೆ. ಹೊಸದಾಗಿ ಬಂದವರಿಗೆ ಯಾವುದೋ ವಿಚಿತ್ರ ಜಗತ್ತಿನಲ್ಲಿ, ಸಂತೆ ನಡೆದ ಮನೆಯಲ್ಲಿ ಕಾಲಿಟ್ಟಂತೆ ಭಾಸವಾಗುವುದು! ಹಲವು ಸಲ ದಿಗ್ಭ್ರಮೆಯೂ ಆಗ್ರುವುದು! ಒಳಒಳಗೆ ಹೋದರಂತೂ ಯಾವ ಕೋಣೆ ಎಲ್ಲಿ ಇದೆ? ಎಲ್ಲಿ ಯಾರು ಇರುವರು? ದಾರಿ ಎಲ್ಲಿ ಇರುವುದು? ಇವು ಯಾವೂ ತಿಳಿಯದ ಹಾಗಾಗುತ್ತದೆ. ಕೆಳಗಿನ ಮನೆಯೆಲ್ಲ ಹಳೆಯ ಮಾದರಿಯಲ್ಲಿ ಕಟ್ಟಿಸಿದ ವಾಡೆ.

ಆದರೆ ಇತ್ತಿತ್ತಲಾಗಿ ಪದ್ಧತಿ ಬದಲಾದುದರಿಂದ ಅಟ್ಟದ ಮೇಲೆ ಹೊಸ ರೀತಿಯಿಂದ ಕಟ್ಟಿಸಿದ ಕೋಣೆಗಳು ಇವೆ. ಹಿಂಬದಿಯಲ್ಲಿ ಸಿಮೆಂಟನಿಂದ ಕಟ್ಟಿಸಿದ ಹಲವು ಕೋಣೆಗಳು ಇವೆ. ನಡುವೆ ಸ್ವಲ್ಪ ಅಂತರ ಬಿಟ್ಟು ಮುಂಬದಿಯಲ್ಲಿಯೂ ಅಂಥ ಕೋಣೆಗಳು ಇವೆ. ಹಿಂಬದಿಯ ಕೋಣೆಗಳಮೇಲೆ 'ಗಚ್ಚಿ' ಇರುವುದರಿಂದ ಬೇಸಗೆಯ ದಿನಗಳಲ್ಲಿ ಬೆಳುದಿಂಗಳ ರಾತ್ರಿಗಳಲ್ಲಿ ಅಲ್ಲಿ ವಿರಾಮ ತೆಗೆದುಕೊಳ್ಳಲು ಅತ್ಯಂತ ಸುಖದಾಯಕವಾಗಿದೆ.

ಲಕ್ಷ್ಮಿ ಇಂಥ ದೊಡ್ಡ ವಾಡೆಯನ್ನು ಎಂದಿಗೂ ನೋಡಿರಲಿಲ್ಲ. ಅಂಥ ವಿಶಾಲವಾದ ಮನೆಯಲ್ಲಿ ಎಂದಿಗೂ ಕಾಲಿಟ್ಟಿರಲಿಲ್ಲ. ಗೂಡಿನಲ್ಲಿರುವ ಗುಬ್ಬಿಯ ಮರಿ ಆಗಿದ್ದಳು. ಈಗ....? ಒಬ್ಬ ಕುರುಬನನ್ನು ಅರಮನೆಯಲ್ಲಿ ಕರೆದೊಯ್ದಾಗ ಗಾಬರಿಯಾಗುವಂತೆ ಅವಳು ಸುತ್ತುಮುತ್ತಲೂ ನೋಡುತ್ತಿದ್ದಳು.

ಅದಲ್ಲದೆ ಅವಳು ಸೊಸೆ; ಅತ್ತೆಯ ಮನೆಗೆ ಬಂದ ಸೊಸೆ! ಸುಮ್ಮಗೆ ಕುಳಿತರೆ ಲತ್ತೆ ಬರಬಹುದು ಎಂಬ ಭೀತಿ! ಸೋಮಾರಿಯಾಗಿ ಕುಳಿತುಕೊಳ್ಳುವ ಸ್ವಭಾವವೂ ಅವಳದಲ್ಲ. ಬೆಳಗಿನಲ್ಲಿ ಮುಖಮಾರ್ಜನೆಗಾಗಿ ನೀರು ತೆಗೆದುಕೊಳ್ಳಲು ಹೋದರೆ, ಯಾರೋ ಅವಳನ್ನು ಬಿಡಿಸಿ ತಣ್ಣೀರ ಬದಲು

ಬಿಸಿನೀರು ತಂದುಕೊಡುತ್ತಿದ್ದರು. ಕಸಗೂಡಿಸಬೇಕೆಂದು ಕಸಪೊರಿಕೆ ತೆಗೆದು ಕೊಳ್ಳಲು ಹೋದರೆ, ಒಮ್ಮೆಲೆ ಆಳು ಬಂದು ಅದನ್ನು ಬಿಡಿಸುತ್ತಿದ್ದನು. ಅಡು ಗೆಯ ಮನೆಯಲ್ಲಿ ಏನಾದರೂ ಕೆಲಸ ಮಾಡಬೇಕೆಂದರೆ ಅಲ್ಲಿ ಅಡುಗೆಯವನು ಲಕ್ಷ್ಮಿಗೆ ಏನು ಮಾಡಬೇಕೊ ತಿಳಿಯುತ್ತಲೆ ಇರಲಿಲ್ಲ. "ಉಶ್ಶ್" ಎಂದು ಉಸಿರ್ಗರೆಯುತ್ತ ಶಾಂತಾಳ ಕಡೆಗೆ ಬಂದುಬಿಡುತ್ತಿದ್ದಳು.

ಮನೆ ತುಂಬಿಸುವುದರ ಸಲುವಾಗಿ ಲಕ್ಷ್ಮಿಯ ಜೊತೆಗೆ ಶಾಂತಾಳೆ ಬಂದಿ ದ್ದಳು. ತಾಯಿಯಿಲ್ಲದ ಹೆಣ್ಣುಮಗಳಿಗೆ ಗೆಳತಿಯೇ ಗತಿ! ಅವಳೇ ತಾಯಿ. ಅವಳೂ ಸಹ ಈ ಮನೆಯ ವಾತಾವರಣವನ್ನೆಲ್ಲ ನೋಡಿ ಚಕಿತಚಿತ್ತಳಾಗಿ ದ್ದಳು. ಲಕ್ಷ್ಮಿಗಿಂತ ಶಾಂತಾಳಿಗೆ ಅನುಭವ ಹೆಚ್ಚು. ಅವಳು ವಯಸ್ಸಿನಲ್ಲಿ ಹಿರಿಯಳು. ಲಗ್ನವಾಗಿ ಆಗಳೆ ಎರಡು ವರ್ಷವಾಗಿತ್ತು. ಲಕ್ಷ್ಮಿಗೆ ಹೇಳಿದಳು "ಲಕ್ಕು, ನೀನಾದರೂ ಏಕೆ ಕೆಲಸ ಮಾಡಲು ಹೋಗುವೆ? ಸುಮ್ಮಗೆ ಕುಳಿ ತುಕೊ. ಬೇಕಾದ ಹಾಗೆ ನಮಗೊಂದು ಕೋಣೆ ಕೊಟ್ಟಿದ್ದಾರೆ. ಯಾವಾಗ ಕರೆದಾಗ ಹೋಗೋಣ. ನೀನು ಈಗ ಜಾಗಿರದಾರಿಣಿ! ನಾನು ಹೇಳಿದ್ದಿಲ್ಲವೆ ಮೊದಲೆ?"

ಗೆಳತಿಯರಿಬ್ಬರೂ ನಕ್ಕರು!!

"ಆಗಲಿ!" ಎಂದಳು ಲಕ್ಷ್ಮಿ. ತನ್ನ ಭಂಗಾರದ ಪಾಟಲಿ, ಬಿಲವಾರ ಗಳನ್ನು ತಿರುತಿರುವಿಕೊಳ್ಳುತ್ತ, ಮುಗುಳುನಗೆ ನಗುತ್ತ ಸುಮ್ಮನೆ ಕುಳಿತು ಬಿಟ್ಟಳು. ಶಾಂತಾಳೂ ಆ ಆಭರಣಗಳ ಮೇಲೆ ಕೈಯಾಡಿಸುತ್ತಿದ್ದಳು.

"ಲಕ್ಕೂ, ನಾನು ಹೇಳಲೆ ನೀನು ಈಗ ಹೇಗೆ ಕಾಣುತ್ತೀಯೆಂದು?" ಶಾಂತಾ ಕೇಳಿದಳು.

"ಹೇಗೆ ಏನು? ಒಬ್ಬ ತ್ರಾಟಿಕಿಯ ಹಾಗೆ!" ಲಕ್ಷ್ಮಿ ಒಮ್ಮೆಲೆ ನಗುತ್ತ ಉತ್ತರ ಕೊಟ್ಟಳು.

"ಹೂಂ! ಹೂಂ!" ಶಾಂತಾ ಕಣ್ಣು ಹೊರಳಿಸುತ್ತ ಕೇಳಿದಳು "ಬೇಕೆಂತಲೆ ಅನ್ನುವಿಯಾ?"

"ಬೇಕಂತಲೆ ಏನು? ಇವೆಲ್ಲ ಯಾರಿಗೆ ಬೇಕಾಗಿದ್ದವು? ಅತ್ತೆಯವ ರಿಗೆ ಹೇಳಿದರೆ ಕೇಳಲಿಲ್ಲ."

"ಅಹುದು ಸೊಸೆಗೆ ಹಾಕದೆ ಇನ್ನು ಯಾರಿಗೆ ಆಭರಣ ತೊಡಿಸಬೇಕು?

ನೋಡು ಲಕ್ಷ್ಮೊ, ನೀನು ಈಗ ಸಾಕ್ಷಾತ್ ಲಕ್ಷ್ಮಿಯ ಹಾಗೆ ಕಾಣುತ್ತೀ. ”

ಕಳಸಾಪೂರ ಗ್ರಾಮದಲ್ಲಿ ಎಲ್ಲರೂ ಲಕ್ಷ್ಮಿಯಬಗ್ಗೆ ಇವೇ ಮಾತುಗಳನ್ನು ಹೇಳುವವರು. ಅವಳ ಮೈಬಣ್ಣ ಕೆಂಪಗಾಗಿತ್ತು. ದೇಹದ ಆಕಾರವು ಮಾಟಾಗಿ ಚೆಲುವಾಗಿತ್ತು. ಎಳೆಬಳ್ಳಿಯಂತೆ ನಳನಳಿಸುವ ಅವಳ ಅಂಗಾಂಗ ಗಳ ಮೇಲೆ ಆಭರಣಗಳು ಮಿನುಗುತ್ತಿದ್ದವು. ಸೊಸೆಯ ಸೊಬಗಿನ ರೂಪ ವನ್ನು ಅತ್ತೆಯವರಾದ ಸುಬ್ಬಕ್ಕ ಎಲ್ಲರ ಎದುರೂ ಬಣ್ಣಿಸುತ್ತಿದ್ದರು. ಅವಳನ್ನು ಎಷ್ಟು ಹೊಗಳಿದರೂ ಅವರಿಗೆ ಸಾಕಾಗುತ್ತಿರಲಿಲ್ಲ. ಅತ್ತೆಯಂತೆಯೆ ಇರುವ ಮಾವಂದಿರಾದ ಕೃಷ್ಣರಾಯರ ರೀತಿಯೂ ಹಾಗೆಯೆ.

ಕೃಷ್ಣರಾಯರಿಗೆ ಆಗಳೆ ಐವತ್ತೈದು ವರ್ಷವಾಗಿ ಹೋಗಿದ್ದವು. ತಮ್ಮ ಗೋರಿಯ ದಿನಗಳು ಸಮೀಪಿಸಿವೆಯೆಂದು ಅವರು ಭಾವಿಸಿದ್ದರು. ಇಂಥ ವಯ ಸ್ಸಿನಲ್ಲಿ ಹೊಸ ಸೊಸೆ ಮನೆಗೆ ಬರುವುದನ್ನು ನೋಡಿ ಅವರಿಗೆ ಅಭಿಮಾನವೆನಿ ಸಿತ್ತು ! ಆನಂದವುಂಟಾಗಿತ್ತು ! ಸೊಸೆಗೆ ಬೇಕಾಗುವ ಎಲ್ಲ ಅನುಕೂಲತೆ ಗಳನ್ನು ಮಾಡಿಕೊಡಲು ಸಿದ್ಧರಾಗಿದ್ದರು. ತಿರುಪತಿಯಲ್ಲೆ ಮದುವೆಯ ಸಮಾ ರಂಭ ನಡೆದಿರುವಾಗಲೆ, ಕೃಷ್ಣರಾಯರು ನೀರಿನ ಹನುಮಪ್ಪನನ್ನು ಕರೆದು “ ಇಕೋ ಹನುಮಪ್ಪ, ಇನ್ನು ಊರಿಗೆ ಹೋದ ಮೇಲೆ ನೀರು ಜಗ್ಗಬೇಡ. ನಮ್ಮ ಸೊಸೆ ಏನು ಹೇಳುತ್ತಾಳೆ, ಎಲ್ಲ ಕೆಲಸ ಮಾಡಿಕೊಡಬೇಕು. ಇಪ್ಪತ್ತು– ನಾಲ್ಕು ತಾಸು ಅದೇ ಕೆಲಸ” ಎಂದು ಆಜ್ಞಾಪಿಸಿದ್ದರು. ನೀರಿನ ಹನುಮಪ್ಪ ನಿಗೆ ನೀರು ಜಗ್ಗುವುದನ್ನು ಬಿಟ್ಟರೆ ನೆಮ್ಮದಿಯಾಗುತ್ತಿದ್ದಿಲ್ಲ. ಅವನು ರಾಯರ ಮಾತುಗಳನ್ನು ಒಪ್ಪಿಕೊಂಡನು. ಆದರೂ ಹೇಳಿದ “ ರಾಯರ, ಎರಡೂ ಕೆಲಸ ಮಾಡುತ್ತೇನೆ. ನೀರನ್ನು ಜಗ್ಗುವೆ. ಬಾಯರ ಕೆಲಸವನ್ನೂ ಮಾಡುವೆ.”

ಕೃಷ್ಣರಾಯರು ಹೊಸ ಸೊಸೆ ಮನೆಗೆ ಬಂದ ಮೇಲೆ, ಮೇಲಿಂದ ಮೇಲೆ ಅವಳಿಗೆ ಮೀಸಲಾಗಿಟ್ಟ ಕೋಣೆಗೆ ಬಂದು ಹೋಗುತ್ತಿದ್ದರು. “ ಇಕಾ, ನಮ್ಮ ಮನೆಯಲ್ಲಿ ಅಂಧೇರಿ ರಾಜ್ಯ ! ಸಿಕ್ಕವರಿಗೆ ಸಿಕ್ಕಿತು, ಇಲ್ಲದವರಿಗೆ ಇಲ್ಲ. ಆದ್ದ ರಿಂದ ನಿನಗೆ ಏನು ಬೇಕೊ ಎಲ್ಲವನ್ನೂ ಆ ಹನುಮಪ್ಪನಿಗೆ ತಿಳಿಸು. ಇಲ್ಲವಾ ದರೆ........ಇವಳಿಗೆ ಹೇಳು. ಸಂಕೋಚಪಟ್ಟುಕೊಳ್ಳಬೇಡ. ಸುಮ್ಮನೆ ಇದ್ದರೆ ಈ ಮನೆಯಲ್ಲಿ ನಡೆಯುವದಿಲ್ಲ........” ರಾಯರು ಏನೇನೊ ಹೇಳುವ ನಾಲಗೆ ಯನ್ನು ಬಿಗಿ ಹಿಡಿಯುತ್ತಿದ್ದರು. ಹೊಸ ಸೊಸೆಯ, ಮಮತೆಯ ಸೊಸೆಯ

ಜೊತೆಗೆ, ತಮ್ಮ ಮನೆತನದ ಪರಿಸ್ಥಿತಿಯ ಅರಿವು ಉಂಟಾಗುತ್ತಿತ್ತು. ಅದ
ಭುಗಿಲನೆ ಹೆಡೆಯಾಡಿಸಿದಾಗ, ಮಾತಿಗೆ ಕಡಿವಾಣವನ್ನು ಕೃಷ್ಣರಾಯರು ಉ
ಯೋಗಿಸುತ್ತಿದ್ದರು.

ಹೊಸದಾಗಿ ಮನೆಗೆ ಬಂದ ಲಕ್ಷ್ಮಿ, ಶಾಂತಾ, ಸಂಜೀವರಾಯರಿ
ಯಾವುದಕ್ಕೂ ಕೊರತೆ ಇರಲಿಲ್ಲ. ಎಲ್ಲರೂ ಊಟಕ್ಕೆ ಕೂಡುವ ದೊ
ಕೋಣೆಯಲ್ಲಿ ಅವರ ಊಟವಾಗುತ್ತಿರಲಿಲ್ಲ. ಅವರ ಊಟ ಒಂದು ಸ್ಪೆಶಲ
ಕೋಣೆಯಲ್ಲಿ. ಅವರಿಗೆ ಸ್ಪೆಶಲ್ ಪದಾರ್ಥಗಳೇ ಬರುತ್ತಿದ್ದವು. ಕೆನೆಮೊಸರು
ಹಾಲು, ತುಪ್ಪ ಎಲ್ಲ ಪೌಷ್ಟಿಕ ಪದಾರ್ಥಗಳು ಒಳಕಪಾಟಿನಲ್ಲಿ ತೆಗೆದಿಟ್ಟವುಗಳ
ಇರುತ್ತಿದ್ದವು. ವಿಶೇಷ ಸಂಬಂಧಿಕರಿಗೆ ಇಂಥ ಏರ್ಪಾಟು ಆ ವಾಡೆಯ
ಮೊದಲಿನಿಂದಲೂ ಇತ್ತು. ಉಳಿದವರಿಗೆ ಮಠದ ಪಂಕ್ತಿ ಇದ್ದಂತೆ!

ಸಂಜೀವರಾಯರು ಕಳಸಾಪೂರದಲ್ಲಿ ಬಹಳ ದಿನ ನಿಲ್ಲಲಿಲ್ಲ. ಎರಡ
ಎರಡು ದಿನ ಅಲ್ಲಿ ವಾಸವಾಗಿದ್ದರು. ಆಗ ಶೀನಪ್ಪನವರು ಅವರನ್ನು ಹೋ
ಗೆಯ ತುಪ್ಪದಲ್ಲಿ ಮುಣುಗಿಸಿದರು. ಅವರಿಗೆ ಬೇಕಾಗುವ ಸಮೀಚೀನ ಊ
ವನ್ನು, ಫಲಾಹಾರವನ್ನು ಒದಗಿಸಿಕೊಟ್ಟರು. ಎರಡನೆಯ ದಿನ ರಾತ್ರಿ ಒಂದ
ಸಂಗೀತ ಕಚೇರಿಯನ್ನು ಏರ್ಪಡಿಸಿದ್ದರು. ಅಂಥ ಸುಖಮಯವಾದ ವಾತಾ
ರಣವನ್ನು ನೋಡಿ, ಸಂಜೀವರಾಯರ ಹೃದಯ ಆನಂದದಿಂದ ಉಕ್ಕೇರಿತ್ತು
ಎರಡು ದಿನ ಈ ಭೂಲೋಕವನ್ನೇ ಮರೆತು ಬಿಟ್ಟಿದ್ದರು. ಮೂರನೆಯ ದಿ
ತಮ್ಮ ಕೆಲಸಕ್ಕಾಗಿ ಮರಳಿ ಊರಿಗೆ ಹೋಗಬೇಕಾದುದರಿಂದಲೇ ಅಲ್ಲಿಂ
ಕಾಲ್ದೆಗೆಯಬೇಕಾಯಿತು. ಸಂಜೀವರಾಯರು ಊರಿಗೆ ಹೊರಡುವರೆಂದ
ನಿಶ್ಚಿತವಾದ ಕೂಡಲೆ, ಶೀನಪ್ಪನವರು ಕೃಷ್ಣರಾಯರನ್ನು ಭೆಟ್ಟಿಯಾಗಿ, ಎ
ವನ್ನು ಮಾತನಾಡಿ ಸಂಜೀವರಾಯರ ಕಡೆಗೆ ಬಂದರು. ಸಂಜೀವರಾಯರನ
ದೇವರಮನೆಯಲ್ಲಿ ಕರೆದುಕೊಂಡು ಹೋಗಿ ಮಣೆ ಹಾಕಿ ಕೂಡಿಸಿದರು. ಸ್ವತ
ಕೃಷ್ಣರಾಯರೆ ಅಲ್ಲಿಗೆ ಬಂದು, ಅವರಿಗೆ ಜರತಾರಿ ಶೆಲ್ಲೆಯನ್ನು, ಬೆಳ್ಳಿಯ
ತಾಬಾಣ, ವಾಟಗ ಮುಂತಾದವುಗಳನ್ನು ಪ್ರೀತಿಯ 'ಆಹೇರ' ಎಂದ
ಕೊಟ್ಟರು. ಸಂಜೀವರಾಯರ ಮನಸ್ಸು 'ಒಲ್ಲೆ, ಒಲ್ಲೆ' ಅಂದರೂ, ಶೀನಪ್
ನವರ ಒತ್ತಾಯದ ಮೂಲಕ ಎಲ್ಲವನ್ನು ಸ್ವೀಕರಿಸಲೆ ಬೇಕಾಯಿತು.

ಶಾಂತಾ ತಾನೂ ಬೇಗ ಹೊರಡಬೇಕೆಂಬ ಮನಸ್ಸಿನಿಂದ ಏನೋ ಮಾತ

ನಾಡಬೇಕೆಂದು ಬಯಸಿ ಬಾಗಿಲಲ್ಲಿ ನಿಂತುಕೊಂಡಿದ್ದಳು. ಅವಳ ಮುಖ ಮುದ್ರೆಯಿಂದ ಅವಳ ಮನಸ್ಸನ್ನು ತಿಳಿದುಕೊಂಡು ಸಂಜೀವರಾಯರೆ ಹೇಳಿದರು "ಶಾಂತಕ್ಕ, ನಮ್ಮ ಲಕ್ಕೂಳ ಜೊತೆಗೆ ಇನ್ನು ಕೆಲವು ದಿನ ಇದ್ದು ಬಾ. ಇನ್ನು ಮೂರು ದಿನಗಳಲ್ಲಿಯೆ ಪ್ರಸ್ತದ ಮುಹೂರ್ತವಿದೆ. ಅಲ್ಲವೆ?" ಸಂಜೀವ ರಾಯರು ಶೀನಪ್ಪ ಮತ್ತು ಕೃಷ್ಣರಾಯರ ಕಡೆಗೆ ನೋಡಿದರು. "ಅಹುದು! ಅಹುದು! ಎಲ್ಲ ನಿಶ್ಚಿತವಾದಂತೆ!" ಎಂದು ಅವರು ಉತ್ತರ ಕೊಟ್ಟರು. ಸಂಜೀವರಾಯರು ಮತ್ತಿಷ್ಟು ಉತ್ಸಾಹಗೊಂಡು ನುಡಿದರು— "ಶಾಂತಕ್ಕ, ಲಕ್ಕೂಗೆ ಎಲ್ಲ ಅನುಕೂಲವಾಗುವವರೆಗೆ ಇಲ್ಲೆ ಇದ್ದು ಬಿಡು. ಎಲ್ಲ ಅವಳಿಗೆ ಹೊಂದಿಸಿಕೊಟ್ಟು ಬಾ."

"ಆದರೆ............?" ಶಾಂತಾ ಸಂಶಯವನ್ನು ವ್ಯಕ್ತಪಡಿಸುತ್ತ ಕೇಳಿದಳು.

"ಏನೂ ಹೆದರಬೇಡ. ನಿನ್ನ ಯಜಮಾನರಿಗೆ ನಾನು ಎಲ್ಲ ತಿಳಿಸುತ್ತೇನೆ. ಅವರೇನು ನನಗೆ ಅರಿಯದವರೆ? ಬೇಕಾದರೆ ಇಲ್ಲಿಂದಲೆ ಕೃಷ್ಣ ರಾಯರ ಕಡೆಯಿಂದ ಅಥವಾ ಶೀನಪ್ಪನವರ ಕಡೆಯಿಂದ ಪತ್ರ ಬರೆಯಿಸುತ್ತೇನೆ. ಹಾಗೆ ಮಾಡಲೇನು?" ಸಂಜೀವರಾಯರ ಆತ್ಮವಿಶ್ವಾಸದ ಈ ಮಾತು ಕೇಳಿ, ಶಾಂತಾ ಸುಮ್ಮಗಾದಳು,

ಲಕ್ಷ್ಮಿ ಸಂಜೀವರಾಯರ ಕಡೆಗೇ ನೋಡುತ್ತಿದ್ದಳು. ತಂದೆಯನ್ನು ಅಗಲುವ ವಿಚಾರವು ಅವಳಿಗೆ ವೇದನೆ ಕೊಡಹತ್ತಿದ್ದಿತು. ತಂದೆಯನ್ನು ಅಗಲಿ ಇರುವುದು ಅವಳಿಗೆ ಗೊತ್ತೇ ಇರಲಿಲ್ಲ. ಪಾಪ! ಅನೇಕ ಜನರು ಸುತ್ತುಮುತ್ತಲು ನಿಂತಿದ್ದರೂ ಕಂಬನಿ ಕಣ್ದುಂಬಿ ಬಂದವು. ಆ ಹನಿಗಳನ್ನು ನಿಗ್ರಹಿಸುವುದು ಅವಳಿಂದ ಸಾಧ್ಯವಾಗಲಿಲ್ಲ. ದೊಡ್ಡ ದೊಡ್ಡ ಹನಿಗಳು ತಟಕ್ಕನೆ ಕಣ್ಣುಗಳಿಂದ ಹೊರಬಂದವು.

"ಛೀ ಹುಚ್ಚಿ, ಹೀಗೆ ಅಳಬಾರದು" ಸಂಜೀವರಾಯರು ಮಗಳ ಕಂಬನಿಗಳನ್ನು ಒರೆಸುತ್ತ ಹೇಳಿದರು. "ನಿನಗೇನು ಕಡಿಮೆಯಾಗಿದೆ? ಸಿರಿವಂತರ ಉಡಿಯಲ್ಲಿ ಬಿದ್ದಿರುವಿ. ಈ ಎಲ್ಲ ಜನರು ಹೊರಗಿನವರೆ? ಎಲ್ಲರೂ ನಿನ್ನವರು! ನಿನ್ನನ್ನು ಪ್ರೇಮದಿಂದ ನೋಡಿಕೊಳ್ಳುವವರು. ಲಕ್ಕಮ್ಮ, ಕಣ್ಣು ಒರಸಿಕೋ. ನಿನ್ನ ಬಾಸಿಂಗ ಬಲ ಶ್ರೇಷ್ಠವಿದೆ!"

ತಮ್ಮ ಮಗಳು ಲಕ್ಷ್ಮಿಯು ಕೃಪಾಛತ್ರದ ನೆರಳಲ್ಲಿ ಇರುವುದು ಸಂಜೀ
ರಾಯರಿಗೆ ಅತ್ಯಂತ ಆನಂದವನ್ನು ಕೊಟ್ಟಿತು. ಮಗಳ ಆಶಾದಾಯಕವಾ
ಭವಿಷ್ಯತ್ತಿನ ಈ ಸುಂದರ ಚಿತ್ರವನ್ನು ನೆನೆಸುತ್ತ ತಮ್ಮ ಊರಿಗೆ ಹೊರಟಾ
ದಾರಿ ಹೇಗೆ ಹೋಯಿತೋ ಎಂಬುದು ಸಂಜೀವರಾಯರಿಗೆ ತಿಳಿಯಲೇ ಇಲ್ಲ

೪

ಢಣ್! ಢಣ್! ಢಣ್!

ಲಕ್ಷ್ಮಿ ಸರಿಯಾಗಿ ಎಣಿಸುತ್ತಿದ್ದಳು. ಹೊರಗಿನ ಆವಾರದಲ್ಲಿರು
ದೊಡ್ಡ ಗಡಿಯಾರ ಹನ್ನೆರಡು ಬಾರಿಸಿತು! ರಾತ್ರಿ ಮನೆ ಕಾಯುವ ಆಳ
ಹನ್ನೆರಡು ಬಾರಿಸಿ ಕೂಗಿಕೊಂಡನು.

ಎಲ್ಲೆಡೆಗೂ ನಿಶ್ಶಬ್ದವಿತ್ತು! ಆರತಿ ಮಾಡಿದ, ಹಾಡುಗಳನ್ನು ಹಾಡಿ
ಅನೇಕ ಚೇಷ್ಟೆ ಮಾಡಿದ ಹೆಂಗಳೆಯರೆಲ್ಲರೂ ಮರೆಯಾಗಿದ್ದರು. ಲಕ್ಷ್ಮಿ ಒಬ್ಬ
ಪಲಂಗದ ಒಂದು ತುದಿಯಲ್ಲಿ ಕುಳಿತುಕೊಂಡಿದ್ದಳು. ತಲೆ ಕೆಳಗೆ ಮಾ
ಕೊಂಡು ಸುಮ್ಮನೆ ಕುಳಿತಿದ್ದಳು. ಮುಖವನ್ನು ಮೇಲೆ ಸಹ ಎತ್ತಿರಲಿಲ್ಲ
ತನ್ನ ಬೆನ್ನ ಹಿಂದೆ ಆಚೆಗೆ ಮಲಗಿರುವ ತನ್ನ ಪತಿಯಾದ ನಾರಾಯಣರಾಯ
ರನ್ನು ಕಣ್ಣೆತ್ತಿ ನೋಡಿರಲಿಲ್ಲ. ಒಮ್ಮೊಮ್ಮೆ ಮುಖ ಬೆವರೊಡೆಯುತ್ತಿತ್ತು
ತನ್ನ ಕೈಯಲ್ಲಿರುವ ವಸ್ತ್ರದಿಂದ ಅದನ್ನು ಒರಸಿಕೊಂಡು ಮತ್ತೆ ಮೊದಲಿನಂ
ಕುಳಿತುಬಿಡುತ್ತಿದ್ದಳು.

ನಾರಾಯಣರಾಯರು ಸ್ವಸ್ಥವಾಗಿ ಹಾಸಿಗೆಯ ಮೇಲೆ ಒರಗಿಕೊಂ
ಡ್ದರು. ಕುತನಿಯ ತಲೆಗಿಂಬಿನ ಮೇಲೆ ತಮ್ಮ ತಲೆ ಇಟ್ಟುಕೊಂಡು, ಮೇ
ಏನನ್ನೋ ನಿರೀಕ್ಷಿಸುವಂತೆ ನೋಡುತ್ತಿದ್ದರು. ಮೇಲೆ ಆಕಾಶದಲ್ಲಿರುವ ನಕ್ಷತ್ರ
ಗಳು ಇರಲಿಲ್ಲ. ನಿರೀಕ್ಷಿಸಲೇ ಬೇಕಾದ ಯಾವ ಸುಂದರವಾದ ಚಿತ್ರಗಳ
ಇರಲಿಲ್ಲ. ಬರೀ ಮಚ್ಛರದಾನಿಯ ಪರದೆ ಜೋತು ಬಿದ್ದಿದ್ದಿತು! ಆದರು
ಏನೋ ವಿಚಾರದಲ್ಲಿರುವವರಂತೆ ಅತ್ತಕಡೆಗೇ ನೋಡುತ್ತಿದ್ದರು. ಅವರ ಲಕ್ಷ್ಯ
ತಮ್ಮ ಪ್ರೇಮದ ಸತಿಯ ಕಡೆಗೆ ಇರಲಿಲ್ಲ. ತಮ್ಮ ಕಾಲಬಳಿ ಕುಳಿತ ಲಕ್ಷ್ಮಿ

ತಮ್ಮ ಜೀವನದ ಸಂಗಾತಿಗೆ 'ಬೆನ್ನು ನೋಯಿಸೀತು, ಮಲಗಿಕೋ' ಎಂದು ಪ್ರೀತಿಯಿಂದ ಹೇಳಲಿಲ್ಲ. ಹಾಗೆಯೆ ಕಣ್ಣು ತೆರೆದು ಹಾಸಿಗೆಯ ಮೇಲೆ ಒರಗಿಕೊಂಡಿದ್ದರು.

ಅವರ ತಲೆಯ ಕಡೆ, ದೊಡ್ಡ ಪಲಂಗದ ತುದಿಗೆ ಒಂದು ದುಂಡು ಮೇಜಿನ ಮೇಲೆ ಅನೇಕ ಪದಾರ್ಥಗಳು ಇದ್ದುವು. ಜೀವನದ ದೀಪವನ್ನು ಹೊತ್ತಿಸಿದಂತೆ ಸಮೆಯಲ್ಲಿಯ ದೀಪವು ಬೆಳಗುತ್ತಿತ್ತು. ಎರಡು ಆನೆಗಳು ಪ್ರೇಮಮತ್ತಪಾಗಿ ತಮ್ಮ ತಮ್ಮ ಸೊಂಡಿಲುಗಳನ್ನು ಜೋಡಿಸಿರಲು ಅಲ್ಲಿ ಗುಲಾಬದಾನಿಯ ಮುಖವಿತ್ತು. ನಲ್ಲನನ್ನು ಪ್ರಥಮಸಲ ಕಂಡಾಗ ಅತ್ಯಾನಂದವಾಗಿ ಪ್ರೀತಿಯ ಅಸಂಖ್ಯ ಗರಿಗಳನ್ನು ನವಿಲು ಹರಹಿದಾಗ ಅಲ್ಲಿ ಅತ್ತರದಾನಿಯ ರಚನೆಯಿತ್ತು. ಎಲ್ಲವೂ ಬೆಳ್ಳಿಯ ವಸ್ತುಗಳಿದ್ದರೂ ಜೀವನದ ಬೆಳಕನ್ನೇ ತುಂಬಿದಂತೆ ಅವು ಪ್ರಕಾಶಿಸುತ್ತಿದ್ದವು. ಒಂದು ಬೆಳ್ಳಿಯ ತಾಟಿನ ಮೇಲೆ ತರತರದ ಹಣ್ಣುಹಂಪಲಗಳು ಕಂಗೊಳಿಸುತ್ತಿದ್ದವು. ಊದುಬತ್ತಿ, ಸುಗಂಧ ಮುಂತಾದವುಗಳ ಪರಿಮಳ ಕೋಣೆಯ ತುಂಬ ಪಸರಿಸಿತ್ತು. ಯಾವ ಪ್ರೇಮಿಗೂ ಇಂಥ ವಾತಾವರಣ ಉನ್ಮಾದವನ್ನು ಮಾಡದೇ ಇರುವುದು ಶಕ್ಯವೇ ಇರಲಿಲ್ಲ! ಆದರೂ ನಾರಾಯಣರಾಯರಿಗೆ ಇಂಥ ಯಾವ ಭಾವನೆಯೂ ಬರಲಿಲ್ಲವೋ ಏನೋ!

ಲಕ್ಷ್ಮಿ ಏನೊ ಮಾತನಾಡಬೇಕೆಂದಳು. ಅವಳಿಗೆ ಧೈರ್ಯವಾಗಲಿಲ್ಲ. ನಾರಾಯಣರಾಯರೆ ಏನಾದರೂ ಕೇಳಿದರೆ ಉತ್ತರ ಕೊಡಬೇಕೆಂದು ದಾರಿ ಕಾದಳು. ಅವರು ಏನೂ ಕೇಳಲಿಲ್ಲ. ಇಷ್ಟೇ ಅಲ್ಲ, ಲಕ್ಷ್ಮಿಯ ಕಡೆಗೆ ನೋಡಲೂ ಇಲ್ಲ. ಎಷ್ಟು ಹೊತ್ತು ಹೀಗೆಯೆ ಕುಳಿತುಕೊಳ್ಳಬೇಕು? ಎಷ್ಟು ಹೊತ್ತು ನಾಲಿಗೆ ಬಿಗಿ ಹಿಡಿಯಬೇಕು? ಲಕ್ಷ್ಮಿಗೆ ಏನೂ ತೋಚಲಿಲ್ಲ. ಅವಳ ಬೆನ್ನು ಸ್ವಲ್ಪ ಹೊಡೆಯಲು ಆರಂಭಿಸಿತು. ನಾರಾಯಣರಾಯರ ಮಾತಿನ ದಾರಿಯನ್ನು ನೋಡದೆಯೆ, ಅವಳು ತಾನಾಗಿಯೆ ಪಲಂಗದ ಆನಿಕೆಗೆ ಆತುಕೊಂಡು ಕುಳಿತಳು. ಲಕ್ಷ್ಮಿ ಹೀಗೆ ಹೊರಳಿದುದನ್ನು ನೋಡಿ, ಒಮ್ಮೆಲೆ ನಾರಾಯಣರಾಯರು ನಿದ್ದೆ ಹತ್ತಿದವರಂತೆ ಕಣ್ಣುಮುಚ್ಚಿಕೊಂಡರು. ಲಕ್ಷ್ಮಿ ಪಲಂಗದ ಕಟ್ಟಿಗೆಯ ಫಳಿಯನ್ನು ತಲೆಗಿಂಬನ್ನಾಗಿ ಮಾಡಿಕೊಂಡು, ತನ್ನ ತಲೆಯನ್ನು ಅದರ ಮೇಲೆ ಆಸರಿಸಿ ಒರಗಿಕೊಂಡಳು.

ಇರುಳಿನ ಶಾಂತತೆಯನ್ನು ಸೀಳಿ ಗಡಿಯಾರದ ಗಂಟೆಯ ಸಪ್ಪಳ ಕೇ
ಬರುತ್ತಿದ್ದವು. ಲಕ್ಷ್ಮಿ ಅವುಗಳನ್ನು ಎಣಿಸುತ್ತಿದ್ದಳು. ಬೆಳಗಿನ ಜಾವ
ತಂಗಾಳಿ ಬೀಸುವವರೆಗೂ ಲಕ್ಷ್ಮಿ ಹಾಗೆಯೆ ಆತುಕೊಂಡು ಕುಳಿತಳು. ನಿದ್ದೆಯ
ನಟನೆಯನ್ನು ಮಾಡುವಾಗ ನಾರಾಯಣರಾಯರಿಗೆ ಅಲ್ಲಿಯೆ ನಿದ್ದೆ ಹತ್ತಿಬಿ
ದ್ದಿತು! ಅವರೊ ಕುತನಿಯ ಗಾದಿಯ ಮೇಲೆ! ಲಕ್ಷ್ಮಿಯೊ........??

ಮೊದಲ ರಾತ್ರಿಯ ಅನುಭವದಿಂದ ಲಕ್ಷ್ಮಿಯ ಮನದಲ್ಲಿ ಯಾವುದೊ
ಚಿಂತೆಯೊಂದು ಮನೆಮಾಡಿತು. ಅವಳಿಗೆ ಮನಸ್ಸಿನಲ್ಲಿ ಏನೂ ಸೌಖ್ಯವಿರಲಿಲ್ಲ
ಹಗಲಿನಲ್ಲಿ ಸಂತೆ ನೆರೆದಿರುವಂತೆ ಇರುವ ಆ ದೊಡ್ಡ ಮನೆಯಲ್ಲಿ ನಾರಾಯಣ
ರಾಯರ ದರುಶನವೇ ವಿರಳ. ಅವರ ಭೆಟ್ಟಿ ರಾತ್ರಿಯಷ್ಟೆ. ಅವರ ಯೋಗ
ಕ್ಷೇಮ ಕೇಳಿಕೊಳ್ಳುವುದು ಆ ವೇಳೆಯಲ್ಲಷ್ಟೆ. ಆ ಸುಯೋಗ ಒದಗಿ ಬರಲಿ
ವಾದ್ದರಿಂದ, ಅವಳ ಒಳಮನಸ್ಸು ಬೇಗುದಿಗೊಂಡಿತ್ತು.

ಮತ್ತೆ ರಾತ್ರಿ! ನಾರಾಯಣರಾಯರು ಬಾಗಿಲ ಇಕ್ಕಿಕೊಂಡು ಒಳ
ಬಂದರು! ಲಕ್ಷ್ಮಿ ಕಣ್ಣಲ್ಲಿ ಕಣ್ಣಿಟ್ಟು ಅವರನ್ನು ನೋಡಿದಳು. ಒಂದು ದಿನ
ದಲ್ಲಿ ಅಷ್ಟು ಧೈರ್ಯ ತಂದುಕೊಂಡಿದ್ದಳು. ಏನೇ ಆದರೂ ಆ ರಾತ್ರಿ ಅ
ರನ್ನು ಮಾತನಾಡಿಸಿಯೇ ಬಿಡಬೇಕೆಂದು ತನ್ನ ಮನಸ್ಸಿನಲ್ಲಿ ನಿರ್ಣಯಿಸಿಕೊಂ
ದ್ದಳು. ನಾರಾಯಣರಾಯರು ಮೊದಲ ರಾತ್ರಿಯಂತೆ ನೇರವಾಗಿ ಹಾಸಿಗೆಯ
ಮೇಲೆ ಹೋಗಿ ಬಿದ್ದುಕೊಂಡರು.

ಲಕ್ಷ್ಮಿ ಪಲಂಗದ ತುದಿಯಲ್ಲಿ ಕುಳಿತುಕೊಂಡು ಅವರನ್ನು ನಿರೀಕ್ಷಿಸುತ್ತಿ
ದ್ದಳು. ನಾರಾಯಣರಾಯರನ್ನು ಮೊದಲ ಸಲ ನೋಡಿದ್ದು ಭಾವಚಿತ್ರದಲ್ಲಿ
ಕುದುರೆಯ ಮೇಲೆ ರಾಜಕುಮಾರನಂತೆ ಎದೆಸೆಟೆಸಿ ಕುಳಿತ ಭಾವಚಿತ್ರ. ತನ
ಊರಲ್ಲಿರುವಾಗ ಆ ಭಾವಚಿತ್ರವನ್ನು ಅವಳು ಕದ್ದುನೋಡಿದ್ದು. ತರುವಾಯ
ಅವಳು ಕಣ್ಣೆತ್ತಿ ಅವರನ್ನು ನೋಡಿರಲಿಲ್ಲ. ಮದುವೆಯ ಸಮಯದಲ್ಲಿ
ಉಳಿದ ಸಂಭ್ರಮಗಳಲ್ಲಿ ಅವಳ ದೃಷ್ಟಿ ನೆಲದ ಕಡೆಗೇ ಇರುತ್ತಿತ್ತು. ಇಂದೇ
ರಾತ್ರಿ ಅವಳು ಕಣ್ದೆರೆದು ನಾರಾಯಣರಾಯರನ್ನು ನೋಡಿದಳು. ಅವರು
ತೆಳುವಾಗಿದ್ದರು. ಮೈಬಣ್ಣ ಕಪ್ಪಾಗಿಯೆ ಇತ್ತು. ಮುಖದಲ್ಲಿ ಆ ರಾಜಕುಮಾ
ರನ ತೇಜವಿರಲಿಲ್ಲ. ಆ ಭಾವಚಿತ್ರವೇ ಬೇರೆ, ಇವರು ಬೇರೆ ಏನೋ ಎಂದು
ಒಮ್ಮೆ ಲಕ್ಷ್ಮಿಗೆ ಅನಿಸಿತು. ಆ ಭಾವನೆಯನ್ನು ಅವಳು ಕೂಡಲೇ ಹತ್ತಿಕ್ಕಿದಳು.

ಮುನ್ನಾ ರಾತ್ರಿಯಂತೆ ನಾರಾಯಣರಾಯರು ಏನೂ ಮಾತನಾಡಲಿಲ್ಲ. ತಮ್ಮ ಹೆಂಡತಿಯ ಕಡೆಗೆ ಕಣ್ಣೆತ್ತಿಯೂ ನೋಡಲಿಲ್ಲ. ಯಾವುದೋ ಭಾರವಾದ ಕೆಲಸವನ್ನು ಮಾಡಿ ದಣಿದು ಬಂದವರಂತೆ ನಟಿಸುತ್ತ ಹಾಸಿಗೆಯಲ್ಲಿ ಉರುಳಿಕೊಂಡಿದ್ದರು. ಲಕ್ಷ್ಮಿಯೂ ಮತ್ತೆ ಆವರ ಕಾಲು ಬಳಿ! ಮೂರು ನಾಲ್ಕು ಸಲ ಅವರ ಕಡೆಗೆ ನೋಡಿದಳು. ಅವಳ ಕಣ್ನೋಟದಲ್ಲಿಯಾದರೂ ದೃಷ್ಟಿಸಂಗಮವಾಗುವುದೇನೋ ಎಂದು ನಿರೀಕ್ಷಿಸಿದಳು. ಹಾಗೆ ಯಾವುದೂ ಕೂಡಿ ಬರಲಿಲ್ಲ. ಹಲವು ಕ್ಷಣ ಮತ್ತೆ ಮೌನವಾಗಿಯೇ ಕುಳಿತಳು. ಅವಳಿಗೆ ಮುನ್ನಾದಿನದ ಒಂದು ಚಿತ್ರ ನೆನಪಾಯಿತು.

ಅದೇ ಸಂಜೆಯಾಗಿತ್ತು. ತಲೆಬಾಗಿಲದ ಹತ್ತಿರವಿರುವ ಒಳಅಂಗಳದಲ್ಲಿ ಗ್ಯಾಸುಗಳು ಬೆಳಕನ್ನು ಚಿಮ್ಮುತ್ತಿದ್ದವು. ಮನೆಯ ಜನರಲ್ಲದೆ ಹೊರಗಿನ ಜನರೂ ಕೂಡಿದ್ದರು. ಕೃಷ್ಣರಾಯರು, ನಾರಾಯಣರಾಯರು, ಲಕ್ಷ್ಮಿ ಮುಂತಾದ ಪ್ರತಿಷ್ಠಿತ ಜನರು ಕೂಡಲಿಕ್ಕೆ ರತ್ನಗಂಬಳಿ ಹಾಸಿದ್ದರು. ಶಿಸ್ತಾಗಿ ಬೆಳ್ಳಬೆಳಗಿನ ದೀವಿಗೆಗಳನ್ನು ಇರಿಸಿದ್ದರು. ಈ ಎಲ್ಲ ವ್ಯವಸ್ಥೆ ಶೀನಪ್ಪನವರಿಂದಲೆ ಎಂಬುದು ಅವರ ಅಧಿಕಾರವಾಣಿಯಿಂದ ಗೊತ್ತಾಗುತ್ತಿದ್ದಿತು. ಅಲ್ಲಿ ನೃತ್ಯ ಕಾರ್ಯಕ್ರಮವಿದ್ದಿತು. ರಾಯರ ವಿಶೇಷ ಧನಸಹಾಯವನ್ನು ಅಪೇಕ್ಷಿಸಿ ಹಳ್ಳಿಯಲ್ಲಿಯ ಕೆಲವು ರಸಿಕರು ತಾವಾಗಿಯೆ ತಮ್ಮ ಕಲಾಪ್ರದರ್ಶನಕ್ಕಾಗಿ ಅಲ್ಲಿಗೆ ಬಂದಿದ್ದರು, ಅವರಿಗೆ ಶೀನಪ್ಪನವರ ಬೆಂಬಲವೂ ಇದ್ದಿತು. ಬೇರೆಬೇರೆ ವಾದ್ಯಗಳು ಬಾರಿಸಿದವು. ಹಾಡುಗಳು ಆರಂಭವಾದವು. ಕೊಳಲ ಧ್ವನಿ ಕೇಳಿಸಿತು. ರಾಧೆ ಆ ಧ್ವನಿಗೆ ಮೋಹಿತಳಾಗಿ ಓಡುತ್ತ ಬಂದಳು. ಅಲ್ಲಲ್ಲಿ ನಿಂತು ನಿಂತು ಕೇಳಿದಳು. ಆಹಾ! ಎಲ್ಲಿಂದ ಬರುತ್ತಿದೆ? ಜಗತ್ತನ್ನೆ ಸುಪ್ಪಿಗೆಯ್ಯುವ ಆ ಧ್ವನಿ ಎಲ್ಲಿಂದ ಬರುತ್ತಿದೆ? ರಾಧೆಯ ಹೃದಯ ಕೃಷ್ಣನನ್ನು ನೋಡಲು ಆತುರಬಡುತ್ತದೆ? ಅಷ್ಟರಲ್ಲಿಯೆ ಕೃಷ್ಣನ ದರ್ಶನ! ಕೃಷ್ಣ–ರಾಧೆಯರು ಮೈಮರೆತು ಕುಣಿಯುತ್ತಾರೆ!

ಒಂದು ಕ್ಷಣ ವಿಚಾರಿಸುವಷ್ಟರಲ್ಲಿಯೆ, ಕೃಷ್ಣ ರಾಧೆಯರ ಚಿತ್ರ ಅವಳ ಕಣ್ ಕಟ್ಟಿತು. ಮಾಯೆಯ ಬಲೆಯಲ್ಲಿ ಸಿಲುಕಿಸಿತು. ತನ್ನ ಕೃಷ್ಣ ಸಮೀಪದಲ್ಲಿಯೆ ಇದ್ದಾನೆ ಎಂಬ ಭಾವನೆ ಅವಳಿಗೆ ಉತ್ಸಾಹ ನೀಡಿತು. ಅವರನ್ನು ಹೇಗೆ ಮಾತನಾಡಿಸಬೇಕು? ಅವಳಿಗೆ ಒಂದು ಉಪಾಯ ಹೊಳೆಯಿತು.

ಚಟಕ್ಕನೆ ಹಾಸಿಗೆಯಿಂದ ಎದ್ದಳು.

ಲಕ್ಷ್ಮಿಯ ಕೈಬಳೆಗಳ ಸಪ್ಪಳ ನಾರಾಯಣರಾಯರಿಗೆ ಕೇಳಿಸಿತು. ಅವರ ಎದೆ ಹಾರಹತ್ತಿತು! ಲಕ್ಷ್ಮಿ ವೀಳ್ಯದೆಲೆ ಅಡಿಕೆ ಮುಂತಾದವುಗಳನ್ನು ತೆಗೆದು ಕೊಂಡು, ಒಂದು ಪಟ್ಟಿಯನ್ನು ಮಾಡಿಕೊಂಡು, ನಾರಾಯಣರಾಯರ ತಲೆಯ ಬಳಿ ಬಂದು ಕುಳಿತಳು. ನಾರಾಯಣರಾಯರು ಗಾಬರಿಯಾದರೋ ಏನೋ! ವಿಮುಖರಾಗಿ ಮಗ್ಗುಲಾದರು!........ನಾರಾಯಣರಾಯರ ಈ ಕೃತಿ ಅವಳಿಗೆ ಅಧೈರ್ಯ ಹುಟ್ಟಿಸಿತು. ಕ್ಷಣಾರ್ಧದಲ್ಲಿಯೆ ಅವಳು ಚೇತರಿಸಿಕೊಂಡಳು. ಅವರ ಕೈ ಮುಟ್ಟಿದಳು. ತಲೆಯ ಮೇಲೆ ಕೈಯಾಡಿಸಿದಳು. ಆ ಮೃದು ಕರ ಸ್ಪರ್ಶದಿಂದ ನಾರಾಯಣರಾಯರಿಗೆ ಏನೋ ಅನಿಸಿತು! ಆದರೆ ಅವರಿಗೆ ಮಾತನಾಡುವ ಮನಸ್ಸಿರಲಿಲ್ಲ. ಲಕ್ಷ್ಮಿ ವೀಳ್ಯದೆಲೆಯ ಪಟ್ಟಿಯನ್ನು ಅವರ ಬಾಯಲ್ಲಿ ಕೊಡಹೋದಳು. ಅವರು ತುಟಿ ತೆರೆಯಲಿಲ್ಲ. ಆ ತುಟಿಗಳ ಬಂಧನ ಬಿಗಿ ಮಾಡಿದರು.

"ನೀವು........?" ಲಕ್ಷ್ಮಿ ತಡವರಿಸುತ್ತ ಮಾತನಾಡಿದಳು. ಮಾತ ನಾಡಬೇಕೆಂದು ಶಬ್ದಗಳು ಹೃದಯದೊಳಗಿಂದ ಹೊರಬಂದರೂ, ಕಂಠ ಅವುಗ ಳನ್ನು ಬಿಗಿ ಹಿಡಿಯಿತು. ಅಷ್ಟು ಹೆದರಿಕೆ ಅವಳಿಗೆ! ಕೊನೆಗೆ ಧೈರ್ಯ ತಂದುಕೊಂಡು ಕೇಳಿದಳು— "ನೀವು ಹೀಗೇಕೆ ಮಾಡುವಿರಿ?"

ನಾರಾಯಣರಾಯರು ಹೊರಳಿ ನೋಡಿದರು ಲಕ್ಷ್ಮಿಯ ಕಡೆಗೆ. ಮತ್ತೆ ಮುಖ ಹೊರಳಿಸಿದರು. ಒಂದು ಕ್ಷಣದಲ್ಲಿಯೆ ಪಲಂಗದಿಂದ ಎದ್ದುಹೋಗಿ, ಕಿಡಿಕೆಯ ಬಳಿ ನಿಂತರು. ಸಾವಧಾನವಾಗಿ ಕಿಡಿಕೆಯ ಬಾಗಿಲವನ್ನು ತೆರೆ ದರು.

ವಸಂತ ಮಾಸದ ಮೋಹಕ ಗಾಳಿ ಹೂವಿನ ಸೌರಭ ಹೊತ್ತುಕೊಂಡು ಒಳಗೆ ಸುಳಿಯಿತು; ಒಮ್ಮೆಲೆ ಕೋಣೆಯ ತುಂಬ ಪಸರಿಸಿತು. ಆಹಾ! ಲಕ್ಷ್ಮಿಯ ಹೃದಯಲತೆ ಆನಂದದಿಂದ ಪಲ್ಲವಿಸಿತು! ಆ ಗಾಳಿಯಂತೆ ತಾನೂ ತನ್ನ ಇನಿಯನ ಹೃದಯದಲ್ಲಿ ಪಸರಿಸಬೇಕೆಂಬ ಆಶಾಂಕುರ ಉದ ಯವಾಯಿತು. ಅವಳು ನಾರಾಯಣರಾಯರ ಬೆನ್ನಬಳಿ ನಿಂತಳು. ಅವರ ಬೆನ್ನ ಮೇಲೆ ತನ್ನ ಕೈಗಳನ್ನಿಟ್ಟು ಮತ್ತೊಮ್ಮೆ ಕೇಳಿದಳು "ನೀವು ಏಕೆ ಮಾತನಾಡುವದಿಲ್ಲ?" ಎಂದು. ಇದೇ ಸಲ ಅವಳು ಧೈರ್ಯದಿಂದ ಈ

ಪ್ರಶ್ನೆಯನ್ನು ಪೂರ್ಣ ಮಾಡಿದಳು.

ಈ ಬಾರಿ ನಾರಾಯಣರಾಯರು ಹೆಗಲ ಮೇಲಿನ ಕೈಯನ್ನು ದೂರ ಸರಿಸಲಿಲ್ಲ. ಆ ಕೈಯ ಅರಿವೂ ಇಲ್ಲದವರಂತೆ, ಅವಳ ಮಾತುಗಳು ಏನೂ ಕೇಳಿಸದವರಂತೆ ಹೊರಗೆ ಆಕಾಶದಲ್ಲಿ ದಿಟ್ಟಿಸಿ ನೋಡುತ್ತಿದ್ದರು.

ನೀಲಿಮಯ ಆಗಸದಲ್ಲಿ ಅದೇ ಆಗ ಚಂದ್ರೋದಯ! ಮೊದಲೇ ಚಂದ್ರೋದಯ ನೋಡಲು ಬಹಳ ಚೆಂದ! ಅದರಲ್ಲಿಯೂ ನಟ್ಟಿರುಳಿನ ಕತ್ತಲೆಯಲ್ಲಿ ಚಂದಿರ ಉದಯವಾಗುವುದು ಅದಕ್ಕೂ ಮಿಗಿಲಾದ ಚೆಂದ! ಆಗಸವು ಮೊದಲು ರಾಗರಂಜಿತವಾಗಿತ್ತು! ಕೂಡಲೇ ಚಂದಿರ ಮೇಲೇರಿ ಬಂದು, ತನ್ನ ಕಿರಣಗಳ ಪ್ರೇಮದ ಮಾಯಾಬಲೆಯನ್ನು ಬೀಸಿದ! ಗಿಡ ಬಳ್ಳಿಗಳು, ಎಲೆ ಹೂಗಳು, ಮನೆ ಗುಡಿಸಲುಗಳು, ತೆಗ್ಗು ದಿನ್ನೆಗಳು ಎಲ್ಲವೂ ಆ ಬಲೆಯಲ್ಲಿ ಸಿಕ್ಕು ಆನಂದಪುಳಕಿತವಾದವು.

ಆನಂದಪುಳಕಿತಳಾದ ಲಕ್ಷ್ಮಿ, ನಾರಾಯಣರಾಯರಿಗೆ ಕೇಳಿದಳು, "ನೀವು ಏನನ್ನು ನೋಡುತ್ತಿರುವಿರಿ?"

ನಾರಾಯಣರಾಯರು ಏನೂ ಉತ್ತರ ಕೊಡಲಿಲ್ಲ. ತಮ್ಮ ದೃಷ್ಟಿಯನ್ನು ಬದಲಿಸಲಿಲ್ಲ. ಎರಡೂ ತುಟಿಗಳಲ್ಲಿ ಅಂತರಬಿದ್ದರೆ, ಎಲ್ಲಿ ಏನಾದರೂ ಮಾತು ಹೊರಡುವವೋ ಎಂಬ ಹೆದರಿಕೆಯಿಂದಲೋ ಏನೋ ತುಟಿಗಳನ್ನು ಬಿಗಿಯಾಗಿಯೇ ಹಿಡಿದಿದ್ದರು.

ಲಕ್ಷ್ಮಿ ಮೋಹಕ ಧ್ವನಿಯಿಂದ ತಾನೇ ತನ್ನ ಮಾತು ಮುಂದುವರಿಸಿದಳು: "ನೋಡಿರಿ, ಚಂದ್ರ ಎಷ್ಟು ಸುಂದರ ಕಾಣಿಸುತ್ತಾನೆ. ಅಲ್ಲವೆ? ಈ ಬೆಳುದಿಂಗಳು ಇದ್ದರೆ ಎಲ್ಲಾ ಮರೆತು ಹೋಗುತ್ತದೆ. ಅಲ್ಲವೆ?...........ಅಲ್ಲ, ಆ ಹಿತ್ತಲದ ತೋಟದಲ್ಲಿ ಹೂವಿನ ಗಿಡ ನೀವೇ ಹಚ್ಚಿರುವಿರೇನು?........... ಈಗ ಅಲ್ಲಿ ನೋಡಿರಿ, ಹೂ ಅರಳಿವೆ. ಎಷ್ಟು........ಚೆಂದ ಇವೆ ಅಲ್ಲವೆ?.... ಅಲ್ಲಿ ಆ ಗಚ್ಚಿನ ಮಾಳಿಗೆಯ ಮೇಲೆ ಬೆಳುದಿಂಗಳು ಚೆನ್ನಾಗಿ ಇರಬೇಕು!.... ನಾವು ಅಲ್ಲಿಗೇ ಹೋಗೋಣವೇನು?..........." ಲಕ್ಷ್ಮಿಯ ಹೃದಯದಲ್ಲಿ ಯಾವುದೋ ಉತ್ಸಾಹವಿತ್ತು! ಒಂದು ವಾಕ್ಯದಿಂದ ಮತ್ತೊಂದು ವಾಕ್ಯಕ್ಕೆ, ಒಂದು ಸಂಗತಿಯಿಂದ ಮತ್ತೊಂದು ಸಂಗತಿಗೆ ಸಂಬಂಧವಿರಲಿ ಅಥವಾ ಇಲ್ಲದೆ ಇರಲಿ ಅವಳು ಹಾಗೆಯೆ ೫-೬ ವಾಕ್ಯಗಳನ್ನು ನುಡಿದಳು. ಅವಳ ಮಾತು

ಗಳನ್ನು ಕೇಳುತ್ತ ನಾರಾಯಣರಾಯರು ಸುಮ್ಮನೇ ಇದ್ದರು.

"ನೀವು ಏಕೆ ಮಾತನಾಡುವದಿಲ್ಲ? ಏನಾದರೂ ಮಾತನಾಡಿರಿ. ನನ್ನನ್ನು ಬಯ್ದರೂ ಚಿಂತೆ ಇಲ್ಲ. ಏನಾದರೂ ಮಾತನಾಡಿರಿ." ಬಹಳ ದೈನಾಸಬಿಟ್ಟು ಲಕ್ಷ್ಮಿ ನಾರಾಯಣರಾಯರಿಗೆ ಮೊರೆಯಿಟ್ಟಳು.

ನಾರಾಯಣರಾಯರು ವಿಚಿತ್ರ ಮುಖ ಮಾಡಿದರು !!

"ಏಕೆ? ನಾನು ನಿಮಗೆ ಬೇಡವಾಗಿರುವೆನೆ? ಹೀಗೇಕೆ ಮುಖಮಾಡು ವಿರಿ? ನಾನು ನಿಮ್ಮನ್ನು ಲಗ್ನವಾದುದು ತಪ್ಪೆ?" ಲಕ್ಷ್ಮಿ ಮತ್ತೆ ನಾರಾಯ ಣರಾಯರಿಗೆ ಕೇಳಿದಳು.

ನಾರಾಯಣರಾಯರ ವಿಚಿತ್ರ ಮುಖಮುದ್ರೆ ಹಾಗೆಯೆ ಇತ್ತು. ಮಾತ ನಾಡಲು ಹೆದರುತ್ತಲೆ, ತುಟಿ ಅಗಲಿದವು—"ಏಕೆ? ನೀನು ನನ್ನನ್ನು ಏಕೆ ಮದುವೆಯಾದೆ?" ಇದೊಂದೇ ಮಾತನಾಡಬೇಕಾದರೆ ಅವರ ಮುಖದಲ್ಲಿ ಬೆವರೊಡೆಯಿತು.

"ಏಕೆ ಮದುವೆಯಾದೆ?" ಲಕ್ಷ್ಮಿ ತನ್ನಷ್ಟಕ್ಕೆ ತಾನೇ ಈ ಪ್ರಶ್ನೆಯನ್ನು ಕೇಳಿಕೊಂಡಳು. ಅವಳು ಎಂದೂ ಇಂಥ ಪ್ರಶ್ನೆ ಕೇಳಿಕೊಂಡಿರಲಿಲ್ಲ. ಇದರ ಬಗ್ಗೆ ಎಂದೂ ಅವಳು ವಿಚಾರಿಸಲಿಲ್ಲ. ಕುರಿ ಕಾಯುವವನ ಬೆಂಬತ್ತಿ ಹೋ- ಗುವ ಕುರಿಯಂತೆ, ಅವಳು ಯಾವಾಗಲೂ ತಂದೆಯ ಮಾತುಗಳನ್ನು ಕೇಳಿ ದ್ದಳು. ಎಂದಿಗೂ ಅವಳ ಮನಸ್ಸಿನಲ್ಲಿ ಇಂಥ ಭಾವನೆ ಸುಳಿದಿರಲಿಲ್ಲ. ಇಂದೆ ಅವಳು ಇದರ ಬಗ್ಗೆ ಆಲೋಚಿಸಬೇಕಾಯಿತು. ಇದರ ಗೂಢಾರ್ಥವು ಅವಳಿಗೆ ಏನೂ ತಿಳಿಯದ ಹಾಗಾಯಿತು. "ಏಕೆ ಲಗ್ನವಾದೆನೆ?" ತನ್ನ ಆಲೋಚನೆ ಯಲ್ಲಿಯೆ ಅವಳು ಅದೇ ವಾಕ್ಯವನ್ನು ಪುನರುಚ್ಚರಿಸಿದಳು.

ನಾರಾಯಣರಾಯರು ತಮ್ಮ ಕಣ್ಣುಗಳನ್ನು, ವಿಚಿತ್ರ ನೋಟದಿಂದ ಲಕ್ಷ್ಮಿಯ ಕಡೆಗೆ ನೋಡುತ್ತ, "ಹೂಂ! ಏಕೆ ಲಗ್ನವಾದೆ?............ ನೀನು ಹುಚ್ಚಿ! ನೀನು ಹುಚ್ಚಿ!.........ಹ್ಹಿ.........ಹ್ಹಿ........." ಎಂದು ಬಿದ್ದುಬಿದ್ದು ನಗಹತ್ತಿದರು.

ಒಮ್ಮೆ ವಿಚಿತ್ರವಾದ ನೋಟ! ಒಮ್ಮೆ ಮುಖದ ಮೇಲೆ ಬೆವರು!! ಮಗುದೊಮ್ಮೆ ವಿಕ್ಷಿಪ್ತವಾದ ನಗೆ!!!

ಒಮ್ಮೆಲೆ ಲಕ್ಷ್ಮಿಗೆ ವಿಚಿತ್ರ ಸಂಕಟವಾಯಿತು! ಬೆಳುದಿಂಗಳಲ್ಲಿ ಕಟ್ಟಿದ

ಆ ಆಶಾಗೋಪುರ ಕಳಚಿ ಬಿದ್ದಂತಾಯಿತು!

ಗಹಗಹಿಸಿ ನಗುತ್ತ ನಾರಾಯಣರಾಯರು ಹೇಳಿದರು "ನೋಡು ನಾನು ಹುಚ್ಚ! ನಾನು ಹುಚ್ಚ!!.... ಅಂದಮೇಲೆ ನೀನು ಹುಚ್ಚಿ! ಹ್ಹ! ಹ್ಹ.... ನೀನೂ ಹುಚ್ಚಿ........" ನಾರಾಯಣರಾಯರು ಒಮ್ಮೆಲೆ ನಾಲಿಗೆ ಕಚ್ಚಿಕೊಂಡರು. "ಅಯ್ಯೋ ಮರೆತೆ........ನಾನು ಮಾತನಾಡಬಾರದು........ ತಪ್ಪಾತು....ತಪ್ಪಾತು........" ಹೀಗೆ ಮಾತನಾಡುತ್ತಲೆ ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡರು. ಚಾದರವನ್ನು ಎಳೆದುಕೊಂಡು ತುಂಬಾ ಹೊದ್ದುಕೊಂಡು ಮುಸುಕು ಹಾಕಿಕೊಂಡರು.

ತನ್ನ ಪತಿಯ ಈ ಮಾತುಗಳನ್ನು ಕೇಳಿ ಈ ಕೃತಿಗಳನ್ನು ನೋಡಿ ಲಕ್ಷ್ಮಿಯ ಮನಸ್ಸು ಶೂನ್ಯವಾಯಿತು. ಯಾವ ವಿಚಾರವೂ ಅವಳಿಗೆ ಹೊಳೆಯಲಿಲ್ಲ! ನಿರಾಶೆಯಿಂದ ಜರ್‍ರನೆ ಜರಿದುಹೋದಳು!

## ೫

ಬೆಳಗಿನಲ್ಲಿ ಶಾಂತಾ ಲಕ್ಷ್ಮಿಯ ಕೂದಲುಗಳನ್ನು ಬಾಚಿ, ಹೆರಳು ಹಾಕುತ್ತಿದ್ದಳು. ಬಾಚಣಿಗೆಯಿಂದ ಜೋರಾಗಿ ಬಾಚುತ್ತಿದ್ದರೂ ಆ ನೋವಿನ ಕಡೆಗೆ ಲಕ್ಷ್ಮಿಯ ಲಕ್ಷ್ಯವಿರಲಿಲ್ಲ. ಐದಾರು ದಿನಗಳಿಂದ ಅವಳ ಸ್ವಭಾವವು ಹೀಗೆಯೆ ಆಗಿತ್ತು. ಅವಳು ವಿಶೇಷವಾಗಿ ಮಾತನಾಡುತ್ತಿರಲಿಲ್ಲ. ಲಕ್ಷ್ಮಿಯ ಈ ಸ್ವಭಾವದಲ್ಲಿಯ ಬದಲಾವಣೆಯನ್ನು ಶಾಂತಾ ಗುರುತಿಸಿದ್ದಳು. ಅದರ ಕಾರಣವನ್ನೂ ಅವಳು ತರ್ಕಿಸಿದ್ದಳು. ಮದುವೆಯಾದ ಮೇಲೆ ಎಷ್ಟೋ ಹೆಂಗಸರ ಸ್ವಭಾವ ಬದಲಾಗುವುದೆಂದು ಅವಳಿಗೆ ಕೇಳಿ ಗೊತ್ತಿತ್ತು. ಆ ಅನುಭವ ಅವಳಿಗೂ ಆಗಿತ್ತು! ಆದುದರಿಂದಲೆ ಎಲ್ಲ ಸಂಗತಿಗಳನ್ನು ಶಾಂತಾ ಚೇಷ್ಟೆಯಲ್ಲಿಯೆ ಕೇಳುತ್ತಿದ್ದಳು.

"ಏನು ಲಕ್ಕು, ಈ ದಿನ ಬಹಳ ಸುಮ್ಮನೆ ಇರುವಿ? ಏಕೆ? ನನ್ನ ಮೇಲೆ ಬಹಳ ಸಿಟ್ಟಾಗಿರುವಿಯೇನು?"

"ಹೂಂ! ಸಿಟ್ಟು ಬಂದಿದೆ!" ಒಮ್ಮೆಲೆ ಎಚ್ಚರವಾದಂತಾಗಿ ಲಕ್ಷ್ಮಿ

ಉತ್ತರ ಕೊಟ್ಟಳು.

ಶಾಂತಾ ನಗೆಯಲ್ಲಿಯೇ ಕೇಳಿದಳು " ಯಾರ ಮೇಲೆ? ಅತ್ತೆಯವರ ಮೇಲೆಯೆ ?"

" ಹುಂ ! ಹುಂ ! "

" ಮಾವನವರ ಮೇಲೆಯೆ? "

" ಹುಂ ! ಹುಂ ! "

" ಶ್ರೀಮಂತ ಮನೆ ಸಿಕ್ಕಿತೆಂದೆ ? "

" ಇಲ್ಲ.... ಇಲ್ಲ "

" ಇನ್ನು ಉಳಿದವರು ಯಾರು ?........ಅವರ ಮೇಲಂತೂ ಸಾಧ್ಯವೇ ಇಲ್ಲ !........ ಹಾಗಾದರೆ ಸಿಟ್ಟು ಯಾರ ಮೇಲೆ ಬರಬೇಕು ? "

" ನನ್ನ ಹಿಂದೆ ಕುಳಿತವರ ಮೇಲೆ ! " ಸ್ವಲ್ಪ ನಗುಮುಖದಲ್ಲಿ ಲಕ್ಷ್ಮಿ ಹೇಳಿದಳು.

" ನನ್ನ ಮೇಲೆಯೇ ! ....ಹುಂ !........ ಆಗಲಿ ! ನನಗೂ ಗೊತ್ತಿದೆ. ಅದಕ್ಕೇ ಈ ದಿನ ಊರಿಗೆ ಹೊರಡುತ್ತೇನೆ ! "

" ಆಹಾ ! ಊರಿಗೆ ಬರಬೇಕೆಂದು ನಿನ್ನ ಗಂಡನ ಪತ್ರ ಬಂದದ್ದು. ಆ ಕಾರಣ ಹೇಳಬಾರದೆ? ನಾನು ಸಿಟ್ಟಿಗೆದ್ದರೆ ನೀನು ಹೋಗುವಿಯಾ ? ಹೂಂ ! ನನಗೆ ಗೊತ್ತಿಲ್ಲವೇನು ?........ಶಾಂತಾ ನೀನು ಈ ದಿನ ನನ್ನ ಮಾತು ಕೇಳದೆ ಊರಿಗೆ ಹೋಗುವಿಯೆಂದೇ ನಿನ್ನ ಮೇಲೆ ಸಿಟ್ಟು ಬಂದಿದೆ. "

" ಹಾಗಾದರೆ ಸಾಯುವ ವರೆಗೂ ಇಲ್ಲಿಯೇ ಇರಲೇನು ? "

" ಹೂಂ ! "

" ನಾನು ಸಾಯುವ ವರೆಗೂ ಹೊಟ್ಟೆಗೆ ಹಾಕುವಿಯಾ ? "

" ಹೂಂ ! "

ಅಂತೂ ಯಜಮಾನಿತಿಯ ಅಧಿಕಾರ ಈಗಾಗಳೆ ನಿನ್ನ ಕಡೆಗೆ ಬಂದಿತೇನು? ಒಂದು ವಾರದಲ್ಲಿಯೆ ಈ ದೊಡ್ಡ ಅಧಿಕಾರ ಸಿಕ್ಕಿತೇ ? " ಶಾಂತಾ ಚೇಷ್ಟೆಯಿಂದ ನಕ್ಕಳು. ಅವಳ ಜೊತೆಗೆ ಲಕ್ಷ್ಮಿಯೂ ನಗಬೇಕಾಯಿತು.

" ಶಾಂತಾ, ನೀನು ನಿಜವಾಗಿಯೂ ಇರು. ನಾನು ನಗೆಚಾಟಿಕೆಯಿಂದ ಹೇಳುವದಿಲ್ಲ. ಕೊನೆಗೆ ಹಲವು ದಿನವಾದರೂ ಇದ್ದರೆ.... ? "

"ಲಕ್ಕು, ನಿನ್ನಂತೆ ನನಗೂ ಸಂಸಾರವಿದೆ. ಹೋಗಬೇಡವೆಂದರೆ ಹೇಗೆ ನೋಡು. ಇನ್ನು ನೀನೇ ನಮ್ಮ ಮನೆಗೆ ಒಮ್ಮೆ ಬಾ. ನೀನು ಒಬ್ಬಳೇ ಅಲ್ಲ. ಇಬ್ಬರೂ ಕೂಡಿ ತಿಳಿಯಿತೆ?"

"ನಿನ್ನ ಮನೆಗೆ ಏನು ಬರುತ್ತೇನೆಯೊ ?" ನಿರಾಶೆಯ ಧ್ವನಿಯಿಂದ ನುಡಿದಳು. ಅಲ್ಲಿ ಕಳೆದ ರಾತ್ರಿಗಳ ಅನುಭವ, ಅವಳ ಹೃದಯದಿಂದ ಈ ಮಾತುಗಳನ್ನು ಹೊರಪಡಿಸಿತು. ಆ ಅನುಭವವನ್ನು ತನ್ನ ಗೆಳತಿಯ ಎದುರು ಹೇಳಲು ಮನಸ್ಸಾಗಲಿ, ಧೈರ್ಯವಾಗಲಿ ಲಕ್ಷ್ಮಿಗೆ ಬರಲಿಲ್ಲ.

ಲಕ್ಷ್ಮಿ ಆಡಿದ ಮಾತುಗಳನ್ನು ತದ್ವಿರುದ್ಧವಾಗಿಯೆ ಅರ್ಥ ಮಾಡಿಕೊಳ್ಳುತ್ತ ಶಾಂತಾ ಕೇಳಿದಳು "ಅಹುದು ಲಕ್ಕು. ಇನ್ನು ನಮ್ಮ ಮನೆಗೆ ಹೇಗೆ ಬರುವಿ? ನಾವು ಬಡವರು! ನಮ್ಮದು ಬಡವರ ಮನೆ!!"

"ಶಾಂತಾ, ಹಾಗೆನ್ನಬೇಡ.... ನೀನು ಎಲ್ಲಿದ್ದರೂ ಬರುತ್ತೇನೆ. ಇಲ್ಲಿಂದ ಪರವಾನಗೆ ದೊರತಾಗಲೆಲ್ಲ ಬರುತ್ತೇನೆ. ನಿನ್ನ ಕಡೆಗೆ ಬರದೆ, ನಾನು ಯಾರ ಕಡೆಗೆ ಹೋಗಬೇಕು? ನನಗೇನು ತಾಯಿ ಇದ್ದಾಳೆಯೆ? ನೀನೆ ನನಗೆ ಎಲ್ಲ.........." ಲಕ್ಷ್ಮಿ ಇನ್ನು ಏನನ್ನೊ ಮಾತನಾಡಬೇಕೆಂದಿದ್ದಳು. ಅಷ್ಟರಲ್ಲಿ ಆವರ ಅತ್ತೆಯವರಾದ ಸುಬ್ಬಕ್ಕ ಬಾಗಿಲಲ್ಲಿ ಕಂಡರು. ಲಕ್ಷ್ಮಿ ಹೇಳಬೇಕೆಂದು ಬಯಸಿದ ತನ್ನ ಪತಿಯ ವಿಷಯ ಹಾಗೆಯೆ ಉಳಿಯಿತು.

ಸುಬ್ಬಕ್ಕನವರು ಒಳಗೆ ಪ್ರವೇಶಿಸಿದ ಕೂಡಲೇ, ಶಾಂತಾಳನ್ನು ಕುರಿತು ಕೇಳಿದರು "ಏಕೆ ಶಾಂತಕ್ಕ, ನಮ್ಮ ಮನೆ ಬೇಗ ಬೇಸರಿಕೆ ತಂದಿತೆ? ನಮ್ಮ ಲಕ್ಷ್ಮಿಬಾಯಿ ಜೋಡಿ ಇನ್ನು ಹಲವು ದಿನ ಇದ್ದು ಹೋಗಬೇಕು. ನಾನು ಹೇಳುತ್ತೇನೆ, ಇದ್ದುಹೋಗೀಯಂತೆ!" ಅದೇನೋ ಸುಬ್ಬಕ್ಕನವರ ಸೌಜನ್ಯ! ಆತಿಥ್ಯಸತ್ಕಾರ! ಆದರೆ ಶಾಂತಾಳಿಗೆ ಇರಲು ಮನಸ್ಸಿರಲಿಲ್ಲ. ಗಂಡನ ಆದೇಶದಂತೆ ಅವಳು ಬೇಗನೆ ಹೋಗಬೇಕಾಗಿದ್ದಿತು. ಶಾಂತಾಳ ಮನಸ್ಸನ್ನು ಬದಲು ಮಾಡಬೇಕೆಂದು, ಸುಬ್ಬಕ್ಕನವರು ಮತ್ತೆ ಮತ್ತೆ ಹೇಳಿದರು—"ನಾನು ಹೇಳುತ್ತೇನೆ, ನನ್ನ ಮಾತು ಕೇಳು" ಎಂದು. ಶಾಂತಾ ಒಪ್ಪುವ ಹಾಗೆ ಕಾಣದಿದ್ದ ಮೇಲೆ, ಅವರು ಮಾತು ಬದಲಿಸಿ "ನೋಡು, ಮನೆ ಲಕ್ಷ್ಮಿಬಾಯಿ ಯದು. ಅವಳ ಪರವಾನಿಗೆ ದೊರೆತಿದ್ದರೆ ಹೋಗಬಹುದು" ಎಂದು ಮುಗುಳು ನಗೆ ನಗುತ್ತ ಹೇಳಿದರು.

ಶಾಂತಾ ಊರಿಗೆ ಹೋಗುವುದರ ಬಗ್ಗೆ ಕೇಳುವುದು ಪ್ರಾಸಂಗಿಕ ಮಾತು ಅಷ್ಟೆ. ಆದರೆ ಆ ದಿನ ಸುಬ್ಬಕ್ಕನವರಿಗೆ ಶಾಂತಾ ಮತ್ತು ಲಕ್ಷ್ಮಿಯರ ಎದುರು ಒಂದು ವಿಶೇಷ ಸುದ್ದಿ ಹೇಳಬೇಕಾಗಿತ್ತು. ಅವರ ಹತ್ತಿರ ಸುಮಾರು ಐವತ್ತು ತೊಲಿ ಬಂಗಾರವಿತ್ತು. ಬಹಳ ದಿನಗಳಿಂದ ಅದನ್ನ ಕಾದಿಟ್ಟುಕೊಂಡಿದ್ದರು. ತಮ್ಮ ಸೊಸೆ ಬಂದ ಕೂಡಲೇ, ಅವಳಿಗೆ ಆ ಬಂಗಾರದಿಂದ ಹಲವು ಸಾಮಾನುಗಳನ್ನು ಮಾಡಿಸಿಕೊಡಬೇಕೆಂದು ಅವರ ಒಳಬಯಕೆ ಇದ್ದಿತು.

ಸುಬ್ಬಕ್ಕ ಸೊಸೆಯ ಹೆರಳನ್ನು ಮುಟ್ಟಿ ಮುಟ್ಟಿ ನೋಡುತ್ತ ಕೇಳಿದರು "ಹೆರಳು ಶಾಂತಕ್ಕ ಹಾಕಿದಳೆ? ಬಹಳ ಚೆನ್ನಾಗಿದೆ! ನಾನು ಹೇಳುತ್ತೇನೆ ಬಹಳೇ ಚೆನ್ನಾಗಿದೆ! ಶಾಂತಕ್ಕ, ಇದನ್ನು ನಿನಗೆ ಯಾರು ಕಲಿಸಿದರು? ನಮ್ಮ ವಾಡೆಯಲ್ಲಿ ಯಾರಿಗೂ ಈ ರೀತಿ ಹೆರಳು ಹಾಕಲು ಬರುವದಿಲ್ಲ. ನಾನು ಹೇಳುತ್ತೇನೆ."

ಸುಬ್ಬಕ್ಕನವರ ಈ ಹೊಗಳಿಕೆಯ ಮಾತುಗಳಿಗೆ ಏನು ಪ್ರತ್ಯುತ್ತರ ಕೊಡಬೇಕೊ ಶಾಂತಾಳಿಗೆ ತಿಳಿಯಲಿಲ್ಲ. ಅವಳು ಮುಗುಳು ನಗೆಯೊಂದನ್ನು ಮುಖದಲ್ಲಿ ಸೂಸಿ ಹೇಳಿದಳು " ನಮ್ಮ ಲಕ್ಕುಳ ತಾಯಿಯವರೆ ಎಲ್ಲ ಕಲಿಸಿದ್ದು. ನಿಮ್ಮ ಸೊಸೆಗೂ ಎಲ್ಲ ಕಲಿಸಿದ್ದಾರೆ........ ಅವರು ಈಗ ಇದ್ದರೆ.... ?"

"ಪಾಪ! ಅವರು ಇದ್ದರೆ....ತಮ್ಮ ಮಗಳ ಈ ಸೌಭಾಗ್ಯ ನೋಡಿ...." ಸುಬ್ಬಕ್ಕನವರ ಕಣ್ಣುಗಳಲ್ಲಿ ನೀರೊಡೆಯಿತು.

ಶಾಂತಾ, ಲಕ್ಷ್ಮಿಯರ ಕಣ್ಣುಗಳಲ್ಲಿಯೂ ಕಂಬನಿ ಕಂಡವು. ಅವರಿಗೆ ದಿವಂಗತರಾದ ಗೋದಾವರಿಯವರ ನೆನಪೆಂದರೆ, ಹಳೆಯ ಕತೆಯ ಚಿತ್ರವೆಲ್ಲ ಕಣ್ಣಮುಂದೆ ನಿಲ್ಲುತ್ತಿತ್ತು.

ಸುಬ್ಬಕ್ಕ ಸೆರಗಿನಿಂದ ಕಣ್ಣೊರಸಿಕೊಳ್ಳುತ್ತ ಮತ್ತೆ ಹೇಳಿದರು " ನಮಗೆ ದೇವರು ಏನೂ ಕಡಿಮೆ ಕೊಟ್ಟಿಲ್ಲ. ಮನೆಯಲ್ಲಿ ಬೇಕಾದಷ್ಟು ಸಂಪತ್ತು ಇದೆ. ನಾನು ಹೇಳುತ್ತೇನೆ........ನೋಡು ಶಾಂತಕ್ಕ, ನಿನ್ನ ಎದುರಿಗೇ ಹೇಳುತ್ತೇನೆ. ಲಕ್ಷ್ಮಿಬಾಯಿಗೆ ಇನ್ನೂ ಹಲವು ಆಭರಣ ಮಾಡಿಸಿಕೊಡಬೇಕೆಂದು ಮಾಡಿದ್ದೇವೆ. ಈ ಹೆರಳಿಗೆ ದಿನಾಲು ಹೂ ಹಾಕಿಕೊಳ್ಳುವುದಕ್ಕಿಂತ, ಬಂಗಾರದ ಹೂಗಳನ್ನೆ ಮಾಡಿಸುತ್ತೇನೆ........... ಲಕ್ಷ್ಮೀಬಾಯಿ ನೀನೇ ಹೇಳು, ನಿನಗೆ

ಯಾವ ಯಾವ ಆಭರಣಗಳು ಬೇಕು? ನಾನು ಹೇಳುತ್ತೇನೆ........"

ಸುಬ್ಬಕ್ಕನವರು ಕುತೂಹಲದಿಂದ ಲಕ್ಷ್ಮಿಯ ಉತ್ತರವನ್ನು ನಿರೀಕ್ಷಿಸುತ್ತ ಅವಳ ಕಡೆಗೆ ನೋಡಹತ್ತಿದರು. 'ನಾನು ಹೇಳುತ್ತೇನೆ' ಎಂದು ಸುಬ್ಬಕ್ಕ ನುಡಿದದ್ದರಿಂದ, ಅವರೇ ಏನೋ ಹೇಳುತ್ತಾರೆಂದು ಲಕ್ಷ್ಮಿ ಸುಮ್ಮನೆ ನಿಂತು ಕೊಂಡಳು.

ಸುಬ್ಬಕ್ಕ ಸೊಸೆಯ ಮೇಲಿನ ಮಮತೆಯಿಂದ ಮತ್ತೂ ಒಮ್ಮೆ ಕೇಳಿದರು "ನಾನು ಹೇಳುತ್ತೇನೆ!........ ಹೇಳು...."

'ನಾನು ಹೇಳುತ್ತೇನೆ' ಎಂಬುದು ಅವರ ಮಾತಿನ ಚಟವೆಂದು ಶಾಂತಾ ಮತ್ತು ಲಕ್ಷ್ಮಿಯರಿಗೆ ತಟಕ್ಕನೆ ಹೊಳೆದು, ಈರ್ವರ ಓರೆನೋಟಗಳೂ ಒಮ್ಮೆಲೆ ಒಂದುಗೂಡಿದವು. ಸುಬ್ಬಕ್ಕನವರ ಪ್ರಶ್ನೆಗೆ ಲಕ್ಷ್ಮಿ ಉತ್ತರ ಕೊಡಲಿಲ್ಲವಾದ್ದರಿಂದ, ಶಾಂತಾ ಹೇಳಿದಳು "ನಮ್ಮ ಲಕ್ಕು ಏನು ಹೇಳುವುದು! ಅವಳಿಗೆ ಇದೆಲ್ಲ ಹೊಸದು. ಹೊಸ ಸಂಸಾರ! ಅವಳು ನಿಮ್ಮ ಸೊಸೆ! ನೀವು ಬೇಕಾದುದನ್ನು ಮಾಡಿಸಬಹುದು! ಇಲ್ಲಿಯೇ ನಿಮ್ಮ ಸೊಸೆಯ ಮೈಮೇಲೆ ಉಳಿಯುತ್ತವೆ........"

ಶಾಂತಾಳ ಮಾತು ಕೇಳಿ ಸುಬ್ಬಕ್ಕನವರಿಗೆ ಬಹಳ ಆನಂದವಾಯಿತು. "ಶಾಂತಕ್ಕಾ, ಬಹಳ ಜಾಣೆ ನೀನು! ನನ್ನ ಸೊಸೆಯಂತೆಯೆ ಬಹಳ ಜಾಣೆ ನೀನು!!........ ಶಾಂತಕ್ಕ ನಾಳೆ ದೀಪಾವಳಿಗೆ ಇಲ್ಲಿಗೆ ಬಾ. ನಾನು ಹೇಳುತ್ತೇನೆ. ಆಗ ಲಕ್ಷ್ಮಿಬಾಯಿನ್ನ ನೀನು ಹೀಗೆ ನೋಡುವುದು ಸಾಧ್ಯವೇ ಇಲ್ಲ. ಚೊಕ್ಕ ಬಂಗಾರದಿಂದ ಸಾಮಾನು ಮಾಡಿಸಿ ತರಿಸುತ್ತೇನೆ. ಆಗ ಸಾಕ್ಷಾತ್ ಲಕ್ಷ್ಮಿದೇವಿ ಮನೆಯಲ್ಲಿ ಇದ್ದಾಳೇನೋ ಎಂದು ನೀನು ತಿಳಿದುಕೊಳ್ಳುತ್ತೀ. ನಾನು ಹೇಳುತ್ತೇನೆ."

ಸುಬ್ಬಕ್ಕನವರಿಗೆ ಸೊಸೆಯನ್ನು ಶ್ರೀಮಂತಿಕೆಯ ಥಾಟನಲ್ಲಿ ಮೆರೆಯಿಸಬೇಕೆಂಬ ಲವಲವಿಕೆ! ಮುಂದೆ ಅವಳಿಂದ ಮೊಮ್ಮಗನನ್ನು ಕಾಣಬೇಕೆಂಬ ಹೆಬ್ಬಯಕೆ! ಅವರ ಈ ಹೊಸ ಉತ್ಸಾಹವನ್ನೂ, ಅವರ ಮಾತುಗಳನ್ನೂ ಕೇಳಿ ಶಾಂತಾ ಅಚ್ಚರಿಯಿಂದ ಬೊಟ್ಟು ಕಚ್ಚಿದಳು.

ಅದೇ ದಿನ ಸಂಜೆ ಶಾಂತಾ ಊರಿಗೆ ಹೋಗಿಬಿಟ್ಟಳು. ಹೃದಯದ ದುಃಖವನ್ನು ತನ್ನ ಗೆಳತಿಯ ಎದುರು ತೋಡಿಕೊಂಡು ಲಕ್ಷ್ಮಿ ಮನಸ್ಸನ್ನು

ಹಗುರು ಮಾಡಿಕೊಳ್ಳಬೇಕೆಂದಿದ್ದಳು. ಆದರೆ ಆ ಮಾತುಗಳು ಅವಳ ಮನ
ಸ್ಸಿನ ಆಕಾಶದಲ್ಲಿಯೆ ಉಳಿದವು. ಅಲ್ಲಿಯೆ ನಿಂತುಕೊಂಡು, ಅವು ಕಪ್ಪು
ಮೋಡಗಳಾಗಿ ಪರಿವರ್ತಿಸತೊಡಗಿದವು.

೬

ಸುಬ್ಬಕ್ಕ ಕೃಷ್ಣರಾಯರಿಗೆ ಮೂರನೆಯ ಹೆಂಡತಿ. ಕೃಷ್ಣರಾಯರು ಹದಿ
ನೆಂಟು ವರುಷದವರಿರುವಾಗಿನಿಂದಲೆ ಲಗ್ನವನ್ನು ಮಾಡಿಕೊಳ್ಳಲು ಆರಂಭಿಸಿ
ದರು. ಮೊದಲನೆಯ ಹೆಂಡತಿ ಲಗ್ನವಾದ ಒಂದು ವರ್ಷದಲ್ಲಿಯೆ ಸ್ವರ್ಗವಾಸಿ
ಯಾದಳು. ಎರಡನೆಯ ಹೆಂಡತಿ ಹಲವು ವರ್ಷ ಬಾಳಿದಳು. ಅವಳ
ಹೊಟ್ಟೆಯಿಂದಲೆ ಆನಂದ ಮತ್ತು ಗೋವಿಂದ ಎಂಬ ಇಬ್ಬರು ಗಂಡುಮಕ್ಕಳು
ಹುಟ್ಟಿದರು. ಹನ್ನೆರಡು ವರ್ಷಗಳ ವರೆಗೆ ಅವಳು ಕೃಷ್ಣರಾಯರ ಜೊತೆಗೆ
ಸರಸವಾಗಿ ಬಾಳಿ ಈ ಇಹಲೋಕದ ಯಾತ್ರೆಯನ್ನು ಮುಕ್ತಾಯಗೊಳಿಸಿದಳು.
ರಾಯರಿಗೆ ಆಗ ಅಪಾರ ದುಃಖವಾಯಿತು. ವಿರಸವಾದ ಸಂಸಾರವನ್ನು
ತ್ಯಾಗಮಾಡಿ ಬಿಡಬೇಕೆಂದೂ ಅವರು ಯೋಚಿಸಿದ್ದರು. ಆದರೆ ಆ ವಿರಹ
ಭಾವನೆ ಒಂದು ನೀರುಗುಳ್ಳಿಯಾಯಿತು. ಸುಬ್ಬಕ್ಕ ಮನೆಗೆ ಬಂದು ಮತ್ತೆ ಆ
ಜೀವನವನ್ನು ಸಮರಸ ಮಾಡಿದರು. ನವಯುವತಿ ಆ ಸುಬ್ಬಕ್ಕನವರನ್ನು
ತಮ್ಮ ಹೆಂಡತಿಯೆಂದು ಸ್ವೀಕರಿಸುವ ಮುನ್ನ, ರಾಯರು ಆನಂದ ಮತ್ತು
ಗೋವಿಂದರನ್ನು ಮಲಮಕ್ಕಳೆಂದು ಕಾಣದೆ ಒಳ್ಳೇ ರೀತಿಯಿಂದ ರಕ್ಷಿಸಬೇಕಾಗಿ
ಅವರಿಂದ ವಚನವನ್ನು ತೆಗೆದುಕೊಂಡಿದ್ದರು.

ಸುಬ್ಬಕ್ಕ ನಾರಾಯಣರಾಯರನ್ನು ಹೆರುವುದಕ್ಕಿಂತ ಮೊದಲು ಎಲ್ಲವೂ
ಸುರಳಿತವಾಗಿ ಸಾಗಿತು. ಪುತ್ರರತ್ನವಾದ ಮೇಲೆ ಸಹಜವಾಗಿ ಸುಬ್ಬಕ್ಕನವರ
ವಾತ್ಸಲ್ಯಪ್ರೇಮ ವರ್ಧಿಸತೊಡಗಿತು. ಎಲ್ಲ ಮಕ್ಕಳ ಬಗ್ಗೆ ಸಮತೋಲವನ್ನು
ನೋಡಿಕೊಳ್ಳುವ ಭಾರ ಕೃಷ್ಣರಾಯರ ಮೇಲೆಯೆ ಬಿದ್ದಿತು! ಸುಬ್ಬಕ್ಕನವರಿಗೆ
ನಾರಾಯಣರಾಯರೊಬ್ಬರೇ ಮಗನಿದ್ದುದರಿಂದ, ಅವರು ತಮ್ಮ ಏಕಮಾತ್ರ
ಪುತ್ರನನ್ನು ದೇವರ ದೇಣಿಗೆ ಎಂದು ಭಾವಿಸುತ್ತಿದ್ದರು. ತಮ್ಮ ಮಗನ

ಅಭ್ಯುದಯದ ಸಲುವಾಗಿ ಸುಬ್ಬಕ್ಕನವರ ಮನಸ್ಸು ಯಾವಾಗಲೂ ವಿಚಾರಿಸುತ್ತಿತ್ತು!

ಕೃಷ್ಣರಾಯರು ಮಕ್ಕಳ ಶಿಕ್ಷಣದ ಬಗ್ಗೆ ವಿಶೇಷ ಮಹತ್ವ ಕೊಟ್ಟಿರಲಿಲ್ಲ. ಅವಕ್ಕೆ ಅವರ ಅನುಭವವೇ ಕಾರಣ. ಮಕ್ಕಳಿಗೆ ಓದು ಹೇಳಿಸಬೇಕೆಂದು ಅನೇಕ ಶಿಕ್ಷಕರನ್ನು ಮನೆಗೆ ಕರೆಯಿಸಿಕೊಳ್ಳುತ್ತಿದ್ದರು. ಮೊದಲಿನಿಂದಲೂ ಇಂಗ್ಲೀಷನ್ನು ಏಕೆ ಕಲಿಸಬಾರದು? ಹಾಗೆ ಕಲಿತರೆ ಮಕ್ಕಳು ಮುಂದೆ ಮುನ-ಸೀಫ್, ಜಜ್ಜ ಮುಂತಾದ ದೊಡ್ಡ ನೌಕರಿ ಏಕೆ ಮಾಡಲಿಕ್ಕಿಲ್ಲ? ಹೀಗೆ ವಿಚಾರಿಸಿ ಒಮ್ಮೆ ಕೃಷ್ಣರಾಯರು ದೊಡ್ಡ ಪಗಾರವನ್ನೆ ಗೊತ್ತುಮಾಡಿ ಒಬ್ಬ ಕ್ರಿಶ್ಚನ್ ಶಿಕ್ಷಕರನ್ನೆ ತಮ್ಮ ಊರಲ್ಲಿ ಇಟ್ಟುಗೊಂಡಿದ್ದರು. ಆ ಕ್ರಿಶ್ಚನ್ ಶಿಕ್ಷಕರೇನೊ ಒಂದು ವರ್ಷ ಅಲ್ಲಿ ಇರುವ ಭರವಸೆ ಕೊಟ್ಟಿದ್ದರು. ಆದರೆ ಈ ಮಕ್ಕಳ ಬುದ್ಧಿವಂತಿಕೆಯನ್ನು ನೋಡಿ, ಎರಡು ತಿಂಗಳಲ್ಲಿಯೆ ಅವರಿಗೆ ಶರಣು ಹೊಡೆದು ಊರಿಗೆ ಹೋಗಿ ಬಿಟ್ಟರು.

ಕಳಸಾಪೂರದಿಂದ ಎರಡೇ ಮೈಲುಗಳಲ್ಲಿ ಗದಗ ಪಟ್ಟಣವು ಇದೆ. ಅಲ್ಲಿ ಒಂದು ಇಂಗ್ಲೀಷ ಶಾಲೆಯೂ ಇದೆ. ಜಾಗಿರದಾರರ ಮಕ್ಕಳು ವಿರಾಜಮಾನರಾಗಿ ಒಂದು ಬಗಿಯಲ್ಲಿ ಕುಳಿತುಕೊಂಡು ಆ ಶಾಲೆಗೆ ಹೋಗುತ್ತಿದ್ದರು. ಹಲವು ಸಲ ಕುದುರೆ ಸವಾರರಾಗಿಯೂ ಹೋಗುತ್ತಿದ್ದರು. ಆಗ ಇಬ್ಬರು ಆಳುಮನುಷ್ಯರು ಕುದುರೆಯ ಹಿಂದೆಯೆ ಅಂಗರಕ್ಷಕರಾಗಿ ಓಡಿಓಡಿ ಬರುತ್ತಿದ್ದರು. ಜಾಗಿರದಾರರ ರಾಜಕುಮಾರರು ಶಾಲೆಯ ಸಮೀಪ ಬರುತ್ತಿರುವುದನ್ನು ಎಲ್ಲ ವಿದ್ಯಾರ್ಥಿಗಳೂ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಅದೊಂದು ಪ್ರತಿನಿತ್ಯದ ಮೆರವಣಿಗೆಯ ಸಂಭ್ರಮ!

ಶಾಲೆಗೆ ಹೋಗುವ ವ್ಯವಸ್ಥೆಯೇನೊ ಚೆನ್ನಾಗಿತ್ತು! ಹೇಗಾದರೂ ಮಾಡಿ ವಿದ್ಯೆಯನ್ನು ಅವರ ತಲೆಯಲ್ಲಿ ತುರುಕಬೇಕೆಂಬ ಶಿಕ್ಷಕರ ಕರಾಮತ್ತೂ ಚೆನ್ನಾಗಿತ್ತು! ಆದರೆ ಕುಮಾರರ ಅವ್ಯವಸ್ಥೆ ಹೇಳಲಾಸಲ್ಲ. ೩–೪ ವರ್ಗ ದಾಟಬೇಕಾದರೆ ಡೊಗ್ಗಾಲು ಊರಿದರು. ತಮ್ಮ ಮಕ್ಕಳು ಶಿಕ್ಷಣವನ್ನು ಅರ್ಧಕ್ಕೇ ಸಮಾಪ್ತಿ ಮಾಡಿರುವುದು ಕೃಷ್ಣರಾಯರಿಗೆ ಕೆಡುಕೇನೂ ಅನಿಸಲಿಲ್ಲ. ಏಕೆಂದರೆ ಅವರ ಶಿಕ್ಷಣವೂ ಅಷ್ಟಕ್ಕಷ್ಟೆ! "ಶಿಕ್ಷಣವು ಏತಕ್ಕೆ ಬೇಕು? ಹೊಟ್ಟೆ ತುಂಬಿಕೊಳ್ಳಲು ಅಲ್ಲವೆ? ನಮಗೇನು ದೇವರು ಕಡಿಮೆ ಮಾಡಿದ್ದಾನೆ?

ಬೇಕಾದಷ್ಟು ವರ್ಷ ಎಲ್ಲರೂ ಕುಳಿತು ತಿಂದರೂ ನಮ್ಮ ಆಸ್ತಿ ಕರಗುವ ಹಾಗೆ ಇಲ್ಲ. ಅಷ್ಟು ಸಂಪತ್ತನ್ನು ದೇವರು ಸೂರೆ ಮಾಡಿದ್ದಾನೆ. ಮಕ್ಕಳೂ ಉಪ ಭೋಗಿಸಲಿ!" ಎಂದು ನಗುನಗುತ್ತ ಎಲ್ಲರೆದುರು ಅತ್ಯಂತ ಅಹಂಭಾವದಿಂದ ರಾಯರು ಹೇಳಿಕೊಳ್ಳುತ್ತಿದ್ದರು. ತಂದೆಯವರೆ ಹೀಗೆ ಮಾತನಾಡಿದ ಮೇಲೆ ಮಕ್ಕಳಿಗೆ ಎಷ್ಟು ಆನಂದವಾಗಲಿಕ್ಕಿಲ್ಲ!!

ಶ್ರೀಮಂತರ ಮಕ್ಕಳು ಮನೆಯಲ್ಲಿ ಸುಮ್ಮನೇ ಹೇಗೆ ಕೂಡುವುದು! ಉಪಭೋಗದ ಮಹತ್ವದ ವಸ್ತು ಬೇಡವೆ? ಆನಂದ ಮತ್ತು ಗೋವಿಂದ ಇಬ್ಬರೂ ಬೆಳೆದು ಬೇಗನೆ 'ರಾಯ' ರಾದರು. ಅವರಿನ್ನೂ ತಮ್ಮ ಆಯುಷ್ಯದ ಇಪ್ಪತ್ತು ವರುಷದ ಹೊಸತಿಲವನ್ನು ದಾಟಿರಲಿಲ್ಲ, ಹರುಷದ ಮದುವೆಯ ವಾರ್ತೆ ವಾಡೆಯ ತುಂಬ ಪಸರಿಸಿತು! ಎಲ್ಲೆಲ್ಲಿಯೂ ಮಂಗಳ ವಾದ್ಯಗಳ ಧ್ವನಿ! ಕಹಳೆಗಳ ಕೂಗು! ಕಳಸಾಪುರವು ಏಳು ದಿನ ಹೋಳಿಗೆಯ ಸಾಮ್ರಾಜ್ಯದಲ್ಲಿ ಲೋಲಾಡಿತು.

ಆಗ ಸುಬ್ಬಕ್ಕ ಆ ವಾಡೆಗೆ ಬಂದು ನಾಲ್ಕೈದು ವರ್ಷಗಳಾಗಿದ್ದವು. ಮದುವೆಯ ವಿಜೃಂಭಣೆಯನ್ನು ಬಹಳ ಕುತೂಹಲದಿಂದ ನಿರೀಕ್ಷಿಸಿದ್ದಳು. ಮುಂದೆ ಬರಬಹುದಾದ ತನ್ನ ರಾಜಕುಮಾರನ ಮದುವೆಯ ಸವಿಗನಸನ್ನೂ ಕಂಡಿದ್ದಳು!

ಇದೆಲ್ಲ ಹಳೆಯ ಸಂಗತಿ. ನಾರಾಯಣರಾಯರ ಮದುವೆಯಾಗುವ ಹೊತ್ತಿಗೆ ವಾಡೆಯಲ್ಲಿ ಅನೇಕ ಸ್ಥಿತ್ಯಂತರಗಳು ಸಂಭವಿಸಿದ್ದವು. ಆನಂದರಾಯರ ಸಂಸಾರವು ಸುರಳಿತವಾಗಿ ಸಾಗಲಿಲ್ಲ. ಅವರ ಹೆಂಡತಿ ಪದ್ದಕ್ಕನಿಗೆ ಮನೆಗೆ ಬಂದ ಒಂದು ವರ್ಷದಲ್ಲಿಯೆ ಮಲೇರಿಯಾ ಜ್ವರ ಬರಹತ್ತಿದವು. ತರುವಾಯ ಹೊಟ್ಟೆನೋವಿನ ತಕರಾರುಗಳು ಆರಂಭವಾದವು. ಔಷಧೋಪಚಾರಕ್ಕಾಗಿ ಮುಂಬೈ, ಪುಣೆ, ಬೆಂಗಳೂರ ಮುಂತಾದ ದೊಡ್ಡ ಸ್ಥಳಗಳಿಗೆ ಹೋಗಿ ಬರಬೇಕಾಯಿತು. ಅಪಾರ ಹಣ ವ್ಯಯವಾಯಿತು. ಮುಂದೆ ಬೇನೆ ಗುಣವಾದ ಮೇಲೆ ಒಂದು ಹೆಣ್ಣು ಮಗು ಪದ್ದಕ್ಕನಿಗೆ ಹುಟ್ಟಿತು. ಕೃಷ್ಣರಾಯರು ಪ್ರೀತಿಯಿಂದ ಆ ಮಗುವಿಗೆ ತಮ್ಮ ಮೊದಲನೆಯ ಹೆಂಡತಿಯ ನೆನಪಿಗಾಗಿ ಅವಳ ಹೆಸರಾದ 'ಸುಂದರಾ' ಎಂಬುದನ್ನೆ ಇಟ್ಟರು. ಎರಡನೆಯ ಸಲ ಪದ್ದಕ್ಕ ಗರ್ಭಿಣಿ ಇರುವಾಗ ಮತ್ತೆ ಅವರಿಗೆ ಹೊಟ್ಟೆಯ ತಕರಾರುಗಳು ಆರಂಭವಾದವು.

ವೈದ್ಯರ ಮತ್ತು ಡಾಕ್ಟರರ ಔಷಧಗಳು ಗುಣವನ್ನು ಕೊಡಲಿಲ್ಲ. ಪದ್ದಕ್ಕನನ್ನು ಬೆಂಗಳೂರಿಗೆ ಕರೆದುಕೊಂಡು ಹೋದರು. ಜೊತೆಗೆ ಶೀನಪ್ಪನವರೂ ಹೋಗಿದ್ದರು. ೩-೪ ತಿಂಗಳುಗಳ ಮೇಲೆ ಔಷಧೋಪಚಾರಕ್ಕಾಗಿ ಹೋದ ಪರಿವಾರವೆಲ್ಲ ತಿರುಗಿ ಕಳಸಾಪೂರಕ್ಕೆ ಮರಳಿತು. ಗರ್ಭಿಣಿಯ ಪ್ರಕೃತಿ ಚೆನ್ನಾಗಿರುವುದೆಂದು ತಿಳಿದು ಎಲ್ಲರಿಗೂ ಸಂತೋಷವಾಯಿತು. ಪದ್ದಕ್ಕ ಹೆರುವ ದಿನಗಳೂ ಸಮೀಪಿಸಿದ್ದವು. ಆದರೆ ಒಂದು ದಿನ ಬೆಳಿಗ್ಗೆ, ಪದ್ದಕ್ಕ ಹಾಸಿಗೆಯಲ್ಲಿ ಮಲಗಿಕೊಂಡಲ್ಲಿಯೇ ಸತ್ತ ಸುದ್ದಿ ಎಲ್ಲರಿಗೂ ಆಶ್ಚರ್ಯವನ್ನುಂಟು ಮಾಡಿತು! ಡಾಕ್ಟರರು ಅವಳು ಹೃದಯವಿಕಾರದಿಂದ ಸತ್ತಿರುವಳೆಂದು ಘೋಷಿಸಿದರು! ಪದ್ದಕ್ಕನ ಆಕಸ್ಮಿಕ ವಿಚಿತ್ರ ಮರಣಕ್ಕಾಗಿ ಎಲ್ಲರೂ ದುಃಖಪಟ್ಟರು. ಊರ ಜನವೆಲ್ಲ ಗೊಳೋ ಎಂದು ಕಣ್ಣೀರು ಕರೆಯಿತು! ಆನಂದರಾಯರು ಶೋಕಸಾಗರದಲ್ಲಿ ಮುಣುಗಿದರು! ಹಲವು ದಿನ ಹುಚ್ಚನಂತೆಯೂ ವರ್ತಿಸಿದರು. ಅವರು ಮತ್ತೊಂದು ಮದುವೆಯಾಗುವ ಗೋಜಿಗೆ ಹೋಗಲಿಲ್ಲ. ಅದೇನೊ ಅವರಿಗೆ ಬೇಡವೆನಿಸಿತು.

ಆನಂದರಾಯರಂತೆ ಗೋವಿಂದರಾಯರ ಸಂಸಾರದಲ್ಲಿ ಯಾವ ಅಡೆತಡೆಗಳೂ ಉಂಟಾಗಲಿಲ್ಲ. ಅವರ ಬಾಳನೌಕೆ ಶಾಂತವಾದ ನೀರಿನಲ್ಲಿಯೆ ತೇಲುತ್ತ ಹೋಯಿತು. ಗೋವಿಂದರಾಯರು ನೋಡಲು ಕೆಂಪಾಗಿ, ಕುಳ್ಳಾಗಿ ಇದ್ದರು. ಅವರ ಹೆಂಡತಿ ಸೀತಕ್ಕ ಮಾತ್ರ ತೆಳ್ಳಗಾಗಿಯೂ, ಉದ್ದವಾಗಿಯೂ ಇದ್ದಳು. ನಾರಾಯಣರಾಯರ ಮದುವೆಯಾಗುವ ಹೊತ್ತಿಗೆ ಇವರಿಗೆ ಆಗಲೆ ಮೂರು ಮಕ್ಕಳಿದ್ದರು. ಮೂವರು ಹೆಣ್ಣುಮಕ್ಕಳೆ!

ನಾರಾಯಣರಾಯರೂ ತಮ್ಮ ಅಣ್ಣಂದಿರಂತೆ ಬೇಗನೆ ಶಾಲೆಗೆ ಶರಣು ಹೊಡೆದರು. ಅಣ್ಣಂದಿರು ನಾಲ್ಕೈದು ವರುಷವಾದರೂ ಶಾಲೆಯ ಆವಾರದಲ್ಲಿ ತಿರುಗಾಡಿದ್ದರು. ನಾರಾಯಣರಾಯರು ಮಾತ್ರ ಎರಡು ವರ್ಷ ಶಾಲೆಗೆ ಹೋಗುವವರಲ್ಲಿಯೆ ಬಿಟ್ಟುಬಿಡಬೇಕಾಯಿತು. ಪಾಪ! ಅವರಿಗೆ ಇಂಗ್ಲೀಷ ಶಾಲೆಯ ಕಟ್ಟಡದ ದೃಷ್ಟಿಯಾಯಿತೋ ಏನೋ! ಮೇಲಿಂದ ಮೇಲೆ ಜ್ವರ ಬರತೊಡಗಿದವು!........ "ನನ್ನ ಮಗನಿಗೆ ಶಾಲೆ ಸಾಪ ಸಾಪ ಬೇಡ. ಬೇಕಾದರೆ ಮನೆಯಲ್ಲಿಯೆ ಕಲಿಯಲಿ!" ಎಂದು ಕರುಳಿನಿಂದ ಸುಬ್ಬಕ್ಕ ಅಪ್ಪಣೆ ವಿಧಿಸಿದರು. ರಾಯರು ಅವರ ಆಜ್ಞೆಯನ್ನು ಪಾಲಿಸಿದರು.

ನಾರಾಯಣರಾಯರ ಶಾಲೆ ಮನೆಯಲ್ಲಿಯೆ ಸಾಗಿತು. ಕನ್ನಡ, ಗಣಿತ, ಇತಿಹಾಸ, ಭೂಗೋಲ, ಇಂಗ್ಲೀಷ ಎಲ್ಲ ವಿಷಯಗಳಿಗೆ ಬೇರೆ ಬೇರೆ ಶಿಕ್ಷಕರು ಮನೆಗೆ ಬರುತ್ತಿದ್ದರು. ಸರಸ್ವತಿಯ ಪ್ರಸಾದ ತಮ್ಮ ಕೇವಲ ಪ್ರೀತಿಯ ಮಗನಿಗೆ ದೊರೆಯಬೇಕೆಂದು ರಾಯರು ಪ್ರಯತ್ನಿಸಿದರು. ವಾಡಿಗೆ ಬರುವ ಶಿಕ್ಷಕರಿಗೂ ಜಾಗಿರದಾರರು ಕೊಡುವ, ಇನ್ನೂ ಹೆಚ್ಚಿಗೆ ಕೊಡಬಹುದಾದ ಹಣದ ಆಶೆಯು ಇತ್ತು. ಅವರೆಲ್ಲರೂ ಒಂದು ಕ್ಷಣದಲ್ಲಿಯೆ ಗುಣ ಬರಬೇಕೆಂದು ರಾಮಬಾಣದ ಔಷಧಗಳನ್ನೆ ಉಪಯೋಗಿಸಿದರು. ನಾರಾಯಣರಾಯರಿಗೆ ಸರಸ್ವತಿ ಪ್ರಸಾದದ ಔಷಧದ ಡೋಜು ಬಹಳಾಯಿತು. ಶಾಲೆ ಬೇಕು; ಇದು ಬೇಡವಾಯಿತು. ಮುಂಜಾನೆಯಿಂದ ಸಂಜೆಯ ವರೆಗೆ ಬೇರೆ ಬೇರೆ ಶಿಕ್ಷಕರಿಗೆ ಸಂದರ್ಶನ ಕೊಡುವ ಆ ರಾಜಕುಮಾರನ ಕೆಲಸ ಬಹಳ ತಾಪದಾಯಕವಾಯಿತು.

ಒಂದು ದಿನ ಸಂಜೆ. ಗಣಿತ ಕಲಿಸುವ ಶಿಕ್ಷಕರು ದೀಪ ಹಚ್ಚಿಕೊಂಡು ತಮ್ಮ ಶಿಷ್ಯನಿಗಾಗಿ ಕಾದು ಕುಳಿತಿದ್ದರು! ನಾರಾಯಣರಾಯರು ಆ ದಿನ ಒಳಗೆ ಚೀರುತ್ತ, ಭಯಂಕರವಾಗಿ ಚೀರುತ್ತ ಬಂದರು! ಆ ಧ್ವನಿಯನ್ನು ಕೇಳಿ ಶಿಕ್ಷಕರೂ ಸಹ ಕುಳಿತಲ್ಲಿಯೆ ಜಿಗಿದುಬಿದ್ದರು. ಮನೆಯಲ್ಲಿ ಎಲ್ಲರೂ ಗಾಬರಿಯಾಗಿ ಓಡಿಬಂದರು. ನಾರಾಯಣರಾಯರ ದೇಹ ನಡುಗುತ್ತಿತ್ತು! ಮುಖದಲ್ಲಿ ಬಹಳ ಬೆದರಿರುವ ಭಾವ! "ಏನು-ಏನಾಯಿತು?" ಎಂದು ಯಾರು ಕೇಳಿದರೂ, ನಾರಾಯಣರಾಯರು ಉತ್ತರ ಕೊಡಲಿಲ್ಲ.

"ಯಾವ ತಿಪ್ಪೆಯಲ್ಲಿ ಹಾಯ್ದು ಬಂದನೋ ಏನೋ! ಈ ಊರಲ್ಲಿ ನೂರೆಂಟು ಭೂತದ ಸ್ಥಳಗಳು!" ಎಂದು ಸುಬ್ಬಕ್ಕನವರು ದುಃಖಿಸಿದರು.

"ಏನೂ ಇಲ್ಲ. ಅವನಿಗೆ ಓದು ಬೇಡ. ಬೇಕೆಂತಲೆ ಈ ನೆವ ಹೂಡಿದ್ದಾನೆ!" ಎಂದು ಆನಂದರಾಯ ಮತ್ತು ಗೋವಿಂದರಾಯರು ತಾವು ಬಹಳ ಕಲಿತವರಂತೆ ಮಾತನಾಡಿದರು "ಶಾಲೆಯನ್ನು ಬಿಟ್ಟು, ಮನೆಯಲ್ಲಿಯೂ ಕಲಿಯುವ ಹಾಗಿಲ್ಲ. ಇಷ್ಟು ಧಡ್ಡನಾದರೆ ಹೇಗೆ?"

ಸುಬ್ಬಕ್ಕನವರಿಗೆ ಈ ಮಾತುಗಳನ್ನು ಸಹಿಸಿಗೊಳ್ಳುವುದು ಆಗಲಿಲ್ಲ. "ಧಡ್ಡ, ಧಡ್ಡ, ಧಡ್ಡ" ಎಂದು ಅವನ ಮುಂದೆ ಕೂಗಿಕೊಳ್ಳಬೇಡಿರಿ. ನನ್ನ ಮಗ ಇದ್ದ ಹಾಗೆಯೇ ಇರಲಿ. ಅವನಿಗೆ ಯಾವ ಓದೂ ಬೇಡ. ನಾನು

ಹೇಳುತ್ತೇನೆ."

ಸುಬ್ಬಕ್ಕನವರ ಈ ಮಾತುಗಳನ್ನು ಕೇಳಿ ಶಿಕ್ಷಕರು ಪಲಾಯನ ಮಾಡಿಬಿಟ್ಟರು. ಮುಂದೆ ಯಾವ ಶಿಕ್ಷಕರೂ ಅವರ ಮನೆಯಲ್ಲಿ ಕಾಲಿಡಲಿಲ್ಲ !!

ಆದರೆ ಆ ದಿನದ ಸನ್ನಿವೇಶದ ಪರಿಣಾಮ ನಾರಾಯಣರಾಯರ ಮನಸ್ಸಿನ ಮೇಲೆ ಬಹಳಾಯಿತು. ಅವರು ಹಾಗೇಕೆ ಮಾಡಿದರೊ ಯಾರಿಗೂ ತಿಳಿಯಲಿಲ್ಲ. ಬಹುತರವಾಗಿ ಅತಿ ವಿದ್ಯೆಯ ಸೇವನೆಯಿಂದ ಪಿತ್ತವಾಯಿತೋ ಏನೋ ! ಏಕೆಂದರೆ ಆ ದಿನ ರಾತ್ರಿ "ಒಲ್ಲೆ, ಒಲ್ಲೆ ಒಲ್ಲೆ..........." ಎಂದು ಬಡಬಡಿಸುತ್ತಿದ್ದರು. ಹಲವು ಸಲ "ಬಿತ್ತು ಬಿತ್ತು ! ಕಲ್ಲು ಬಿತ್ತು........" ಎನ್ನುತ್ತಿದ್ದರು.

ಅವರ ಈ ಮಾತು ಕೇಳಿ, ಆನಂದರಾಯ ಮತ್ತು ಗೋವಿಂದರಾಯರು ನಗುತ್ತಿದ್ದರು. ಆ ಮನಸ್ಸಿನ ರೋಗ ಇನ್ನೂ ಗುಣವಾಗುವುದಕ್ಕಿಂತ ಮೊದಲೆ ಅವರು ಚಿಕ್ಕವರಿದ್ದ ನಾರಾಯಣರಾಯರನ್ನು ಪೀಡಿಸತೊಡಗಿದರು. "ಏನು ಹುಚ್ಚಪಾ ! ಸುಮುಸುಮ್ಮನೆ ಹೆದರುವಿ. ಥಡ್ಡ ! ನೀನೇನು ಹೆಂಗಸೆ ಹೆದರಲಿಕ್ಕೆ ?" ನಾರಾಯಣರಾಯರು ಇದಕ್ಕೆ ಏನೂ ಉತ್ತರ ಕೊಡುತ್ತಿರಲಿಲ್ಲ. ಕೃಷ್ಣರಾಯರ ಮತ್ತು ಸುಬ್ಬಕ್ಕನವರ ಬೆಂಬಲ ಅವರಿಗಿತ್ತು !

ಓದಿನ ಹಣೆಬರಹವಂತೂ ಈ ರೀತಿಯಾಗಿ ಇತಿಶ್ರೀ ಆಯಿತು. ನಾರಾಯಣರಾಯರು ದೇಹದಲ್ಲಿಯೂ ಸದೃಢರಾಗಿರಲಿಲ್ಲ. ಹುಟ್ಟನಿಂದ ಅವರು ಆರೋಗ್ಯವಂತರಾಗಿದ್ದರೂ, ತರುವಾಯ ಅವರಿಗೆ ಒಂದಿಲ್ಲೊಂದು ರೋಗ ಬರತೊಡಗಿದವು. ಆನಂದರಾಯ ಮತ್ತು ಗೋವಿಂದರಾಯರಂತೆ ಅವರಿಗೆ ಆರೋಗ್ಯ ಬಲವಿರಲಿಲ್ಲ. ಅವರ ಅಣ್ಣಂದಿರು ನಾರಾಯಣರಾಯರಿಗೆ "ಬ್ಯಾನಿ ಕೊಳಕ" ಎಂದೇ ಕೂಗುತ್ತಿದ್ದರು. ಅವರು ಹೀಗೆ ಏನಾದರೂ ಅಂದಕೂಡಲೆ ನಾರಾಯಣರಾಯರು ಅಳುವುದಕ್ಕೆ ಆರಂಭಿಸುತ್ತಿದ್ದರು. ಆಗ ಸುಬ್ಬಕ್ಕನವರೇ ಬಂದು ರಮಿಸಬೇಕಾಗುತ್ತಿತ್ತು.

ಇಂಥ ಅನೇಕ ಪ್ರಸಂಗಗಳಿಂದ ಸುಬ್ಬಕ್ಕನವರ ಮನಸ್ಸು ಆನಂದರಾಯ ಮತ್ತು ಗೋವಿಂದರಾಯರ ಬಗ್ಗೆ ಬದಲಾಗತೊಡಗಿತು. ಹೊರಗೆ ಏನೂ ಅನ್ನಲು ಬರುವಂತಿರಲಿಲ್ಲ. ಏಕೆಂದರೆ ಅವರು ಮದುವೆಯಾಗಿದ್ದರು. ಸುಮ್ಮಸುಮ್ಮನೆ ಏನಾದರೂ ಒಳಜಗಳ ಆರಂಭವಾಗ

ಬಹುದೆಂದು ಅವರು ಎಣಿಸಿದರು. ಆದರೆ ಒಳಗೊಳಗೇ ಅವರ ಬಗ್ಗೆ ಒಮ್ಮೊಮ್ಮೆ ಸಿಟ್ಟಿನಿಂದ ಕುದಿಯುತ್ತಿದ್ದರು. ತಮ್ಮ ಹೊಟ್ಟೆಯಿಂದ ಹುಟ್ಟಿದ ನಾರಾಯಣರಾಯ ಹೇಗೇ ಇರಲಿ, ಅವನ ವಿರುದ್ಧ ಚಕಾರ ಶಬ್ದವನ್ನು ಯಾರಾದರೂ ಮಾತನಾಡಿದರೆ, ಅವರ ಬಗ್ಗೆ ಬಹಳ ಜುಗುಪ್ಸೆ ಸುಬ್ಬಕ್ಕನವರಿಗೆ ಹುಟ್ಟುತ್ತಿತ್ತು.

ಶೀನಪ್ಪನವರು ಸುಬ್ಬಕ್ಕನವರ ಇಂಥ ಸ್ವಭಾವವನ್ನು ಸಂಪೂರ್ಣ ಅರಿತುಕೊಂಡಿದ್ದರು. ಜಾಗಿರದಾರರ ವಾಡೆಯಲ್ಲಿ ಅವರು ಬಹಳ ದಿನಗಳಿಂದ ಓಡಾಡಿದವರು. ಸಣ್ಣಪುಟ್ಟ ಕೆಲಸಗಳನ್ನು ಅವರು ಮೊದಲು ನೋಡಿಕೊಳ್ಳುತ್ತಿದ್ದರು. ಎಲ್ಲರ ಸ್ವಭಾವವನ್ನು ಬಹುಬೇಗ ತಿಳಿದುಕೊಂಡು ಅವರ ಮನಸ್ಸಿಗೆ ಸರಿಹೊಂದುವಂತೆ ನಡೆಯುವ ಸ್ವಭಾವ ಶೀನಪ್ಪನವರದು. ಸುಬ್ಬಕ್ಕನವರು ತಮ್ಮನ್ನು ಮೆಚ್ಚುವ ಹಾಗೆ ಶೀನಪ್ಪನವರು ಯತ್ನಿಸಿದರು. ಅವರ ಪ್ರಯತ್ನ ಸಾಫಲ್ಯ ಪಡೆಯಿತು. ಸುಬ್ಬಕ್ಕನವರು ತಮ್ಮ ಮಗನ ಯೋಗಕ್ಷೇಮವನ್ನೆಲ್ಲ ಶೀನಪ್ಪನವರಿಗೆ ಒಪ್ಪಿಸಿ ಬಿಟ್ಟರು. ನಾರಾಯಣರಾಯರಿಗೆ ಶೀನಪ್ಪನವರೆ 'ರಿಂಗ್‌ಮಾಸ್ಟರ್' ಆದರು. ನಾರಾಯಣರಾಯರಿಗೆ ಶೀನಪ್ಪನವರು ಕೂಡು ಎಂದು ಹೇಳಿದರೆ ಕೂಡುತ್ತಿದ್ದರು; ಏಳು ಎಂದು ಹೇಳಿದರೆ ಏಳುತ್ತಿದ್ದರು. ಬೆದರಿಕೆ ಹಾಕಲು ಒಂದು ಚಬಕವನ್ನು ಅವರು ಇಟ್ಟಿದ್ದರು.

ಶೀನಪ್ಪನವರು ಮುಲ್ಕಿ ಪರೀಕ್ಷೆಯನ್ನೊಂದು ಪಾಸಾದ್ದರಿಂದ ಆ ವಾಡೆಯಲ್ಲಿ ಅವರೇ ವಿದ್ಯಾಮಂತ್ರಿಯಾಗಿದ್ದರು. ಸುಬ್ಬಕ್ಕನವರಿಗೆ ಶೀನಪ್ಪನವರಲ್ಲಿ ವಿಶೇಷ ವಿಶ್ವಾಸ ಬೆಳೆಯತೊಡಗಿತು. ಅವರಿಗಿದ್ದ ವಿದ್ಯೆಯ ಸರ್ಟಿಫಿಕೇಟನ್ನೂ ಅವರ ರೀತಿ ನೀತಿಗಳನ್ನೂ ಸುಬ್ಬಕ್ಕನವರು ಯಾವಾಗಲೂ ಕೊಂಡಾಡುತ್ತಿದ್ದರು. ಕೃಷ್ಣರಾಯರ ಶ್ರಮವನ್ನೂ ಉಳಿಸಬೇಕೆಂದು ಸುಬ್ಬಕ್ಕನವರು ಮನೆತನದ ಆಸ್ತಿಯ ಕಾರಭಾರವನ್ನೆಲ್ಲ ಶೀನಪ್ಪನವರಿಗೇ ಒಪ್ಪಿಸಿದರು. ೧-೨ ವರ್ಷಗಳಲ್ಲಿಯೆ ಶೀನಪ್ಪನವರು ತಮ್ಮ ಕಾರ್ಯದಲ್ಲಿ ಬಹಳ ನಿಷ್ಣಾತರಾದರು. ಕೃಷ್ಣರಾಯರು ಪ್ರತಿಯೊಂದು ಕಾರ್ಯದಲ್ಲಿ ಶೀನಪ್ಪನವರ ಸಲಹೆ ಪಡೆಯುತ್ತಿದ್ದರು. ಶೀನಪ್ಪನವರು ಇಲ್ಲದೆ ಯಾವ ಮಹತ್ವದ ಕೆಲಸವೂ ಆಗದಷ್ಟು ಮನೆತನದ ಕೀಲಿಕೈ ಶೀನಪ್ಪನವರಿಗೆ ದೊರಕಿತು.

'ಬಾನ್ಸಿಕೊಳಕ' ಎಂದು ಅಣ್ಣಂದಿರು ನಾರಾಯಣರಾಯರನ್ನು

ಂೀಯಾಳಿಸುವದಕ್ಕೊ, ಅವರಿಗೆ ಮೇಲಿಂದ ಮೇಲೆ ಬೇನೆ ಬರುವುದಕ್ಕೊ
ಂದೇ ಆಗುತ್ತಿತ್ತು. ಆಗ ನಾರಾಯಣರಾಯರಿಗೆ ೧೬ ವರುಷ. ವಿಷಮ
ಜ್ವರಗಳೇ ಬಂದು ಬಿಟ್ಟವು. ೫-೬ ದಿನಗಳಲ್ಲಿಯೆ ಜ್ವರ ಬಹಳ ಏರತೊಡಗಿ
ದವು. ನಾರಾಯಣರಾಯರು ಏನೇನೋ ಬಡಬಡಿಸುತ್ತಿದ್ದರು. ಯಾವ
ಯಾವವೋ ಹಾಡುಗಳನ್ನು ಹಾಡುತ್ತಿದ್ದರು. ಒಬ್ಬ ದೊಡ್ಡ ಗವಯಿಯಂತೆ
ನನಿ ತೆಗೆಯುತ್ತಿದ್ದರು. ಒಮ್ಮೊಮ್ಮೆ ಚಟಕ್ಕನೆ ಏಳುತ್ತಿದ್ದರು. ಆಗ ಅವರನ್ನು
ಗಟ್ಟಿಯಾಗಿ ಹಿಡಿದು ಹಾಸಿಗೆಯಲ್ಲಿ ಮಲಗಿಸಬೇಕಾದರೆ ಎಲ್ಲರೂ ತಮ್ಮ ಶಕ್ತಿ
ಪ್ರದರ್ಶನ ಮಾಡಬೇಕಾಗುತ್ತಿತ್ತು. ಗದಗಿನಲ್ಲಿರುವ ಮಿಶನ್ ದವಾಖಾನೆ
ಯಿಂದ ಡಾ. ಏಡನ್ ಅವರು ಬಂದು ನೋಡಿದರು. 'ರೋಗಿಯನ್ನು ಬಹಳ
ಜೋಕೆಯಿಂದ ಸಂಭಾಳಿಸಿ. ಡೆಲೀರಿಯಂ' ಆಗಿದೆ. ಸದಾ ಯಾರಾದರೂ
ರೋಗಿಯ ಹತ್ತಿರ ಇರ್ರಿ" ಎಂದು ಹೇಳಿ ಹೋದರು.

ಡಾಕ್ಟರರು ಹೇಳಿದ ಡೆಲೀರಿಯಂ ಇಂಗ್ಲೀಷ ಶಬ್ದದ ಅರ್ಥ ಯಾರಿಗೂ ಆಗಲಿಲ್ಲ. ನಾರಾಯಣರಾಯರು ಏನೇನೋ ಬಡಬಡಿಸುತ್ತಿದ್ದರು. ಆದ್ದರಿಂದ 'ಡೆಲೀರಿಯಂ' ಅಂದರೆ ಹುಚ್ಚು ಎಂದು ಅರ್ಥ ಮಾಡಿಕೊಂಡರು. ಈ ಸುದ್ದಿಯನ್ನು ವಾಡೆಯಲ್ಲಿ ಎಷ್ಟು ಮುಚ್ಚಿಡಬೇಕೆಂದರೂ ಸಾಧ್ಯವಾಗಲಿಲ್ಲ. ವಾಡೆಯಿಂದ ಕಳಸಾಪೂರ ಗ್ರಾಮದಲ್ಲಿ, ಕಳಸಾಪೂರ ಗ್ರಾಮದಿಂದ ಗದಗು ಪಟ್ಟಣದಲ್ಲಿ ಹೀಗೆ ಆ ಸುದ್ದಿ ಎಲ್ಲ ಕಡೆಗೂ ಹಬ್ಬುತ್ತ ಹೋಯಿತು. ಜಾಗಿರದಾರರ ಬಂಧು ಬಳಗದವರು ಜಾಗಿರದಾರರ ಕೆಟ್ಟ ದೈವಕ್ಕಾಗಿ ದುಃಖ ವ್ಯಕ್ತ ಮಾಡಿ ಪತ್ರ ಬರೆಯತೊಡಗಿದರು.

ಜನರ ಅನೇಕ ಮಾತುಗಳು ನಾರಾಯಣರಾಯರ ಕಿವಿಯ ಮೇಲೆ ಬೀಳತೊಡಗಿ, ಅವರು ವಿಷಮಜ್ವರದಿಂದ ಒಂದು ತಿಂಗಳಾದ ಮೇಲೆ ಗುಣ ಹೊಂದುತ್ತಿದ್ದರೂ, ಅವರ ಅಶಕ್ತ ಮನಸ್ಸನ್ನು ಈ ಮಾತುಗಳು ಬಾಧಿಸತೊಡಗಿದವು. ಜ್ವರ ಬಂದಾಗ ಮಾತನಾಡುವಂತೆ ಆಗಲೂ ಮಾತನಾಡತೊಡಗಿದರು. ಬಗಿಯಲ್ಲಿ ಕುಳಿತು ಗದಗಿಗೆ ನಾರಾಯಣರಾಯರು ಹೊರಟರೆಂದರೆ "ಹುಚ್ಚ ಜಾಗಿರದಾರ ಹೊರಟಾನ ನೋಡ್ರಿ" ಎಂದು ಹುಡುಗರು ಅವರ ಕಡೆಗೆ ಕೈಮಾಡಿ ನೋಡುತ್ತಿದ್ದರು.

ಇದೇ ವೇಳೆಗೆ ಹೆಣ್ಣಿನ ಹುಚ್ಚೂ ನಾರಾಯಣರಾಯರಿಗೆ ಹಿಡಿಯಿತು.

ಪ್ರತಿ ಶುಕ್ರವಾರಕ್ಕೊಮ್ಮೆ ಕಳಸಾಪೂರದಿಂದ ಗದಗಿಗೆ ನಾರಾಯಣದೇವ ಗುಡಿಗೆ ಹೋಗುವ ರೂಢಿಯನ್ನು ಸುಬ್ಬಕ್ಕನವರು ಇಟ್ಟುಕೊಂಡಿದ್ದರು. ಆ ತಮ್ಮ ಜೊತೆಗೆ ತಮ್ಮ ಪ್ರೀತಿಯ ಮಗನಾದ ನಾರಾಯಣರಾಯರನ್ನೂ ಕರೆದ ಕೊಂಡು ಹೋಗುತ್ತಿದ್ದರು. ನಾರಾಯಣರಾಯರು ಪೌಳಿಯಲ್ಲಿರುವ ಕಟ್ಟೆಯ ಮೇಲೆ ಕುಳಿತುಕೊಂಡು ಹೆಂಗಸರ ಕಡೆಗೇ ನೋಡುತ್ತಿದ್ದರು. ಒಮ್ಮೊಮ್ ದೇವಾಲಯಕ್ಕೆ ಬಂದ ಹಲವು ಹೆಂಗಸರು ಗಾಬರಿಯಾಗಿ ಓಡಿಬಿಡುತ್ತಿದ್ದರು ಗುಳುಗುಂಪಾಗಿ ಬಂದ ಹೆಂಗಸರು ಸುಬ್ಬಕ್ಕನವರ ಪಾಡನ್ನು ನೆನೆದು, ಅವ ಬಗ್ಗೆ ತಮ್ಮ ಸಹಾನುಭೂತಿ ತೋರಿಸುತ್ತಿದ್ದರು. ಈ ವಿಚಿತ್ರ ಸಂಗತಿಯನು ಎದುರಿಸುವುದಕ್ಕೆ ಭಯಗೊಂಡು ಸುಬ್ಬಕ್ಕನವರು ದೇವಾಲಯಕ್ಕೆ ಹೋಗುವ ದನ್ನು ಕಡಿಮೆ ಮಾಡಿದರು. ತಮ್ಮ ಕಳಸಾಪೂರದಲ್ಲಿಯೆ ಇರುವ ವೆಂಕಟೇ ದೇವರ ಗುಡಿಗೆ ಹೋಗಹತ್ತಿದರು.

ನಾರಾಯಣರಾಯರ ವಿಚಿತ್ರ ಮನಸ್ಸಿನ ರೀತಿ ಬೆಳೆಯುತ್ತಲೇ ಹೋ ಯಿತು - ಕಡಿಮೆಯಾಗಲಿಲ್ಲ. ಕೆಲವು ವೇಳೆ ಎಲ್ಲರೂ ಇರುವಂತೆ ಇರುತ್ತಿ ದ್ದರು. ಹಲವು ಸಲ ಬಹಳೇ ವಿಚಿತ್ರವಾಗಿ ವರ್ತಿಸುತ್ತಿದ್ದರು. ಒಂದು ರಾತ್ ಹಾಸಿಗೆಯಿಂದ ಎದ್ದು " ಲಮಾಣಿ ಗಿಲ್ ! ಗಿಲ್ ! ನಾನು ಬರತೀನಿ ನಿಲ್ ನಿಲ್ ! " ಎಂದು ಹಾಡಿ ಕುಣಿಯಲು ಆರಂಭಿಸಿದರು. ಸುಬ್ಬಕ್ಕನವರಿ ಅತೀವ ಖೇದವಾಯಿತು. ಕರುಳನ್ನು ಕತ್ತರಿಸಿದಂತಾಯಿತು. ಏನು ಮಾಡ ಬೇಕು ಅವರಿಗೆ ತಿಳಿಯದಂತಾಯಿತು. ಶೀನಪ್ಪನವರನ್ನು ಕೂಡಿಸಿಕೊಂಡ ಎಲ್ಲವನ್ನೂ ವಿವರಿಸಿ ಹೇಳಿದರು. ಶೀನಪ್ಪನವರು ಡಾ. ಏಡನ್ ಅವರಿಗ ಖಾಸಗೀ ರೀತಿಯಿಂದ ಭೆಟ್ಟಿಯಾಗಿ ರೋಗಿಯ ಬಗ್ಗೆ ಕೇಳಿದರು. ಆಗ ಡಾಕ್ಟ ರರು ಹೇಳಿದರು " ನೋಡ್ರಿ ಶೀನಪ್ಪ, ನಾರಾಯಣರಾವ ಅವರ ಬಗ್ಗೆ ನನಗ ಎಲ್ಲ ಗೊತ್ತಿದೆ. ಅದು ಮದುವೆ ಹುಚ್ಚು. ನೀವು ಯಾವ ಡಾಕ್ಟರ ಕಡೆಗೂ ಹೋಗಬೇಡಿರಿ. ಯಾವ ದೇವರ ಕಡೆಗೂ ಹೋಗಬೇಡಿರಿ. ನೀವು ಅವ ಮದುವೆ ಮಾಡಿಬಿಟ್ಟರೆ ಎಲ್ಲಾ ಕಡಮೆ ಆಗುತ್ತದೆ. "

ಡಾಕ್ಟರರು ಹೇಳಿದ ಮಾತುಗಳೇನೊ ನಿಜವಿರಬಹುದು. ಆದರೆ ಮದುವ ಆಗುವುದು ಹೇಗೆ ? ಸುಬ್ಬಕ್ಕನವರಿಗೆ ತಮ್ಮ ಮಗನಿಗೆ ಶ್ರೀಮಂತ ಕನ್ಯೆಯೊ ಆಗಬೇಕೆಂಬ ಹಟವಿತ್ತು. ಈ ಬೇನೆಯಷ್ಟು ಕಡಿಮೆಯಾದರೆ ಯಾರಾದರೂ

...ೀಮಂತರು ತಮ್ಮ ಕನ್ಯೆ ಕೊಡಬಹುದೆಂದು ಅವರು ಬಹಳ ಚಡಪಡಿಸಿದರು. ...ನಾರಾಯಣರಾಯರ ಪ್ರಖ್ಯಾತಿ ಅನೇಕ ಕಡೆ ಹಬ್ಬಿದ್ದುದರಿಂದ ಶ್ರೀಮಂತರು ...ಯಾರೂ ಜಾಗಿರದಾರರ ವಾಡೆಯಲ್ಲಿ ಕಾಲಿಡಲಿಲ್ಲ. "ಮದುವೆಯಾಗದ ...ಹೊರತು ಹುಚ್ಚು ಹೋಗುವ ಹಾಗಿಲ್ಲ. ಹುಚ್ಚು ಹೋಗದ ಹೊರತು ಮದುವೆ ...ಯಾಗುವ ಹಾಗಿಲ್ಲ" ಎಂದು ಕೃಷ್ಣರಾಯರು ಎಷ್ಟೋ ಸಲ ತಮ್ಮ ಮನಸ್ಸಿನಲ್ಲಿ ...ಂದು ನೊಂದುಕೊಳ್ಳುತ್ತಿದ್ದರು. 'ಕೊನೆಗೆ ಯಾವ ಮನೆತನದ ಕನ್ಯೆಯಾ...ದರೂ ಚಿಂತೆಯಿಲ್ಲ. ಕನ್ಯಾ ಇದ್ದರಾಯಿತು' ಎಂದು ಸುಬ್ಬಕ್ಕನವರು ನಿರ್ಣ...ಯಕ್ಕೆ ಬಂದಿರುವಾಗ, ಶೀನಪ್ಪನವರು ಆ ನಾಟಕದ ಸೂತ್ರಧಾರಿಗಳಾದರು. ... ಸುಬ್ಬಕ್ಕನವರೆ, ನಿಮಗೆ ರತಿಯಂಥ ಹುಡಿಗೆಯನ್ನು ಸೊಸೆಯಾಗಿ ತಂದು ...ಕೊಡುತ್ತೇನೆ. ದೃಷ್ಟಿಯಾಗುವಂಥ ಹುಡುಗಿ!" ಎಂದು ಹೇಳಿ ಸುಬ್ಬಕ್ಕ ...ಮತ್ತು ಕೃಷ್ಣರಾಯರನ್ನು ಹುರಿದುಂಬಿಸಿದ್ದರು.

ನಾರಾಯಣರಾಯರ ಮದುವೆ ಯಶಸ್ವಿಯಾಗಿ ಜರುಗಿದ್ದರಿಂದ ಸುಬ್ಬಕ್ಕ ...ಮತ್ತು ಕೃಷ್ಣರಾಯರಿಗೆ ಉಂಟಾದ ಸಂತೋಷ ಅಪರಿಮಿತವಾದದ್ದು. ಈ ವಿಷ...ಯದಲ್ಲಿ ಶೀನಪ್ಪನವರಿಗೆ ಏನಾದರೂ ಸಂಭಾವನೆ ಮಾಡಬೇಕೆಂದು ಅವರಿ...ಬ್ಬರೂ ನಿರ್ಣಯಿಸಿಕೊಂಡಿದ್ದರು. ನಾಲ್ಕು ಜನರ ಎದುರಿಗೆ ಇಂಥ ಸಂಭಾವನೆ ...ಮಾಡಿ, ಈ ವಿಷಯದ ಬಗ್ಗೆ ಬಬ್ಬಾಟ ಮಾಡುವುದು ಅವರಿಗೆ ಬೇಕಿರಲಿಲ್ಲ. ...ಅಂತೆಯೆ ಯೋಗ್ಯ ಸಮಯಕ್ಕಾಗಿ ಅವರು ದಾರಿ ನೋಡುತ್ತಿದ್ದರು.

ವೀರಪ್ಪನವರ ಶಾರದಾ ಪ್ರಸಾದ ನಾಟಕ ಮಂಡಲಿಯವರು ಗದಗಿಗೆ ...ಬಂದು ಒಂದು ವಾರವಾಗಿ ಹೋಗಿತ್ತು. ಈ ಒಂದು ವಾರದಲ್ಲಿಯೆ ವೀರಪ್ಪ...ನವರು ಕಳಸಾಪೂರಿಗೆ ೮-೧೦ ಸಲ ಎಡತಾಕಿ ಹೋಗಿದ್ದರು. ರಾಯರಿಗೆ ...ನಾಟಕವನ್ನು ನೋಡಲು ಬರಲಿಕ್ಕೆ ಅತ್ಯಾದರದ ಆಮಂತ್ರಣವನ್ನು ವೀರಪ್ಪನ...ವರು ಕೊಟ್ಟಿದ್ದರು. ಆನಂದರಾಯರಿಗೆ, ಗೋವಿಂದರಾಯರಿಗೆ ನಾಟಕವೆಂದರೆ ...ಬಹಳ ಪ್ರೇಮ. ಆನಂದರಾಯರಿಗೆ ನಾಟಕ ನೋಡುವ ಹುಚ್ಚು ಇದ್ದರೆ, ...ಗೋವಿಂದರಾಯರಿಗೆ ಸಂಗೀತದ ಹುಚ್ಚು ಇದ್ದಿತು. ವೀರಪ್ಪನವರ ನಾಟಕ ...ಮಂಡಲಿಯವರು ಆಡುವ 'ಸಂಪೂರ್ಣ ರಾಮಾಯಣ' ನಾಟಕದಲ್ಲಿ ನಾಟಕ ...ಕಲೆ ಮತ್ತು ಸಂಗೀತ ಇವುಗಳ ಮಧುರ ಸಮ್ಮಿಲನವಿದ್ದಿತು. ರಾಮಾಯಣ ...ಭಕ್ತಿರಸಪ್ರಧಾನವಾದ ನಾಟಕ. ಅದನ್ನು ನೋಡಲು ಸುತ್ತಮುತ್ತಲಿನ ಹಳ್ಳಿ

ಯವರೆಲ್ಲ ಭಂಡಿಗಳನ್ನು ಹೂಡಿಕೊಂಡು ಗದಗಿಗೆ ಹೋಗುತ್ತಿದ್ದರು. ವೀರ
ನವರ ನಾಟಕ ಕಂಪನಿ ಬಂದಿದೆಯೆಂದರೆ ಆನಂದರಾಯರಿಗೆ ಮತ್ತು ಗೋವಿ
ರಾಯರಿಗೆ ಬಹಳ ಉಬ್ಬು. ಸ್ವತಃ ಮಾಲಿಕರಾದ ವೀರಪ್ಪನವರೇ ಎರ
ಮೈಲು ದೂರವಿರುವ ವಾಡೆಯ ವರೆಗೆ ಬಂದು ಅವರನ್ನು ಕರೆದುಕೊಂ
ಹೋಗುತ್ತಿದ್ದರು. ತಮ್ಮ ಮಕ್ಕಳ ಪ್ರೀತ್ಯರ್ಥವಾಗಿ, ಶಾರದಾಪ್ರಸಾದ ನಾಟ
ಮಂಡಳಿಯವರಿಗೆ ರಾಯರು ಅನೇಕ ಸಲ ಧನಸಹಾಯ ಮಾಡಿದ್ದರು. ವೀರ
ನವರು ತಮಗೆ ಅಡಚಣಿ ಆದಾಗಲೆಲ್ಲ ರಾಯರ ಕಡೆಯಿಂದ ಹಣವನ್ನು ತೆಗೆ
ಕೊಂಡು ಹೋಗುತ್ತಿದ್ದರು. ಅಂತೆಯೆ ವೀರಪ್ಪನವರು ಅನೇಕ ಸಲ ವಾಡ
ಬಂದು ಹೋಗಿದ್ದರು.

ಆ ದಿನ ಮನೆಯಲ್ಲಿ ದ್ವಾದಸಿ ಇದ್ದುದರಿಂದ ಸಂಜೆ ಊಟ ಎಲ್ಲರ
ಬೇಗನೇ ತೀರಿಸಬೇಕೆಂದೂ, ಎಲ್ಲರೂ ನಾಟಕ ನೋಡಲು ಗದಗಿಗೆ ಹೋ
ಬೇಕೆಂದೂ ನಿರ್ಣಯವಾಗಿತ್ತು. ರಾಯರು ನಾಟಕಕ್ಕೆ ಹೋಗುವ ಸು
ಗೊತ್ತಾದರೆ ಸಾಕು; ಇದ್ದವರೂ ಇಲ್ಲದವರೂ ಬಳಗ ಸಂಬಂಧ ಹಚ್ಚಿ ಅವ
ಬೆನ್ನು ಹತ್ತುವರು. ಅವರ ಪರಿವಾರವು ಹನುಮಂತನ ಬಾಲದಂತೆ ಬೆಳೆಯ
ತ್ತಲೇ ಹೋಗುವುದು. ಇವರ ಜೊತೆಗೆ ಹೋದರೆ ತಮಗೂ ಖುರ್ಚಿ ದೊ
ಯುವದೆಂಬ ಉಬ್ಬು ಅವರಿಗೆ! ವೀರಪ್ಪನವರೂ ಸಹ ಆ ದಿನ ಮುಂದಿ
ಮೂರು ಸಾಲು ಕುರ್ಚಿಗಳನ್ನು ತೆರವು ಮಾಡಿಯೇ ಇಡಿಸುತ್ತಿದ್ದರು.

ಈ ಸಲ ನಾಟಕಕ್ಕೆ ಹೋಗುವುದು ಎಂದಿನಂತೆ ಅಲ್ಲ. ಹೊಸ ಸೊ
ಮನೆಗೆ ಬಂದಿದ್ದಾಳೆ. ಅವಳಿಗೆ ಮಾನ ಮರ್ಯಾದೆ ಬೇಡವೆ? ಕೃಷ್ಣರಾಯ
ಕುಲುಕುಲು ನಗುತ್ತ ಲಕ್ಷ್ಮೀಬಾಯಿಯನ್ನು ತಮ್ಮ ಕಡೆಗೆ ಕರೆಯಿಸಿಕೊಂ
" ವೀರಪ್ಪನವರೆ, ಇವಳೇ ನಮ್ಮ ಹೊಸ ಸೊಸೆ. ಯೋಗ್ಯ ವ್ಯವಸ್ಥೆ ಆ
ಬೇಕು ನೋಡಿರಿ. ಮುಂದಿನ ಕುರ್ಚಿಯಲ್ಲಿ ಕೂಡಿಸಿರಿ!" ಎಂದು ಹೇಳಿದ್ದರ
ಕೃಷ್ಣರಾಯರನ್ನು ಸಂತೋಷಗೊಳಿಸಲು ಇದೂ ಒಂದು ಸಂದರ್ಭ ಎಂ
ವೀರಪ್ಪನವರು ಒಳಗೊಳಗೇ ಉತ್ಸಾಹಿತರಾದರು.

ನೀರಿನ ಹನುಮಪ್ಪ, ಆಳು ಸಂಗಣ್ಣ, ಮನೆ ಕಾಯುವ ಪೀರ ಎಲ್ಲರ
ರಾಯರ ಪರಿವಾರದವರಾಗಿ ಹೋದರು. ದೊಡ್ಡ ವಾಡೆಯಲ್ಲಿ ಹಲವು ಜನ
ದರೂ ಇರಬೇಕೆಂದು ಶೀನಪ್ಪನವರು ಮನೆಯಲ್ಲಿಯೇ ಉಳಿದುಕೊಂಡರು. ಕೃ

ರಾಯರು ಮತ್ತು ಸುಬ್ಬಕ್ಕನವರು ತಾವು ಹಳಬರು, ಮುದುಕರು ಎಂದು ಹೇಳಿಕೊಂಡು ಹಿಂದೆ ಉಳಕೊಂಡರು. 'ಸಂಪೂರ್ಣ ರಾಮಾಯಣ' ನಾಟಕ ರಾತ್ರಿ ಹತ್ತು ಗಂಟೆಗೆ ಆರಂಭವಾಯಿತೆಂದರೆ ಸೂರ್ಯೋದಯದ ವರೆಗೂ ಮುಗಿಯುವ ಹಾಗಿಲ್ಲ. ಅಷ್ಟು ನಿದ್ದೆಗೆಡುವುದು ಸುಬ್ಬಕ್ಕನವರಿಗೂ ರಾಯರಿಗೂ ಸಾಧ್ಯವಿಲ್ಲ. ಅಂತೆಯೆ ವೀರಪ್ಪನವರು ಎಷ್ಟು ಜುಲುಮೆ ಮಾಡಿದರೂ ಅವರು ಹೋಗಲಿಲ್ಲ.

ಒಂದು ಸ್ಪೆಶಲ್ ಬಸ್ ಸರ್ವಿಸಿನಲ್ಲಿ ಎಲ್ಲರೂ ಹೊರಟು ಹೋದರು. ಆಳು ಮನುಷ್ಯ ರಾತ್ರಿ ೯ ಗಂಟೆ ಬಾರಿಸಿ, ಕಟ್ಟೆಯ ಮೇಲೆ ಹೋಗಿ ಕುಳಿತುಕೊಂಡ. ಇಷ್ಟು ಬೇಗ ಏನು ಮಲಗುವುದೆಂದು, ಶೀನಪ್ಪ ಎಲೆಯಡಿಕೆಯ ಡಬ್ಬಿಯನ್ನು ತೆಗೆದುಕೊಂಡು ರಾಯರ ಕಡೆಗೆ ಹೋದರು. ರಾಯರೂ ಅವರ ದಾರಿಯನ್ನೆ ನೋಡುತ್ತಿದ್ದರು.

ಅದು ಇದು ಮಾತನಾಡುತ್ತ ಶೀನಪ್ಪನವರು ರಾಯರಿಗೆ ಎಲೆಯಡಿಕೆಯನ್ನು ಸಜ್ಜುಗೊಳಿಸಿ ಕುಟ್ಟಿಕೊಟ್ಟರು. ರಾಯರಿಗೆ ಹಲ್ಲುಗಳು ಇರಲಿಲ್ಲ. ಅವುಗಳನ್ನು ಕಿತ್ತಿಸಿಕೊಂಡು, ಒಂದು ಕೃತ್ರಿಮ ಹಲ್ಲಿನ ಸೆಟ್ಟನ್ನು ಉಪಯೋಗಿಸುತ್ತಿದ್ದರು. ಆದ್ದರಿಂದ ಅವರಿಗೆ ಕುಟ್ಟಿ ಪುಡಿ ಮಾಡಿದ ಎಲೆಯಡಿಕೆಯೇ ಸೇರುತ್ತಿತ್ತು.

ರಾಯರು ವೀಳ್ಯವನ್ನು ಮೆಲ್ಲುತ್ತಿರುವಾಗ ಸುಬ್ಬಕ್ಕನವರು ಅಲ್ಲಿಗೆ ಬಂದು ನೇರವಾಗಿ ತಮ್ಮ ಮಾತನ್ನು ಆರಂಭಿಸಿದರು. "ನಾನು ಹೇಳುತ್ತೇನೆ. ಶೀನಪ್ಪ ಇದ್ದಿಲ್ಲವಾದರೆ ನಮ್ಮ ನಾರಾಯಣನು ಲಗ್ನನೇ ಆಗುತ್ತಿರಲಿಲ್ಲ. ನಮಗೆ ಶೀನಪ್ಪನವರ ಬಲವೇ ಬಲ!"

"ಛೀ! ಛೀ! ಎಲ್ಲಿಯದು ಸುಬ್ಬಕ್ಕನವರೆ. ಎಲ್ಲಾ ಆ ತಿರುಪತಿ ವೆಂಕಪ್ಪನದು! ಅವನ ಕೃಪೆ ಇತ್ತಂತೆ ನಾವು ಪಾರಾದದ್ದು!"

ಕೃಷ್ಣರಾಯರು ನಡುವೆ ಬಾಯಿ ಹಾಕಿ ಹೇಳಿದರು "ಅಹುದು! ಅದೂ ಅಂತೂ ಇರಲೇ ಬೇಕಲ್ಲ. ಮನುಷ್ಯ ಪ್ರಯತ್ನನೂ ಬೇಕು. ನಾನು ಎಲ್ಲಿ ಯಾರಾದರೂ ಏನಾದರೂ ಹೇಳಿ ಈ ಲಗ್ನ ಕೆಡಿಸಿ ಬಿಡುತ್ತಾರೋ ಎಂದು ಗಾಬರಿಯಾಗಿದ್ದೆ."

"ನಾನು ಹೇಳುತ್ತೇನೆ, ಶೀನಪ್ಪ ತಿರುಪತಿಯಲ್ಲೇ ಲಗ್ನ ಮಾಡೋಣ

ಎಂದು ಹೇಳಿದ್ದು ಒಳ್ಳೆಯದಾಯ್ತು. ಇಲ್ಲಾಂದರೆ ಈ ಊರ ಕೆಟ್ಟ ಜ
ಬಾಸಿಂಗಬಲ ತಪ್ಪಿಸಿಬಿಡುತ್ತಿದ್ದರು! ನಾನು ಹೇಳುತ್ತೇನೆ!" ಸುಬ್ಬಕ್ಕನವರ
ಶೀನಪ್ಪನವರನ್ನು ಹರಸಿ ಮಾತನಾಡಿದರು.

"ರಾಯರ, ಜನರ ಬಾಯಿ ಹಿಡಿಯಲಿಕ್ಕೆ ಹೇಗೆ ಸಾಧ್ಯ? ಆ
ಜನರು ಏನು ಆಡಿಕೊಂಡರೂ ಸಂಜೀವರಾಯರಾಗಲಿ ಅಥವಾ ನಿಮ್ಮ ಸೊ
ಲಕ್ಷ್ಮಿಬಾಯಿ ಆಗಲಿ ಎಂದೂ ನನ್ನ ಮಾತು ಮೀರುವುದು ಸಾಧ್ಯವೇ ಇ
ಅದೇನೇ ಇದ್ದರೂ ಆ ಮನೆತನವೆ ಸೌಮ್ಯ ಮನೆತನ! ಒಳ್ಳೇ ಮನೆತನ
ಸಂಜೀವರಾಯರಂತೂ ಪ್ರತಿಯೊಂದು ಮಾತಿಗೆ 'ಶೀನಪ್ಪ ನೀನು ಹೇಳಿದಂತೆ
ಅನ್ನುತ್ತಿದ್ದರು. ಇಷ್ಟು ಒಬ್ಬರ ಮೇಲೆ ವಿಶ್ವಾಸ ಇದ್ದವರು ಜಗತ್ತಿನಲ್ಲಿ ಎ
ಸಿಗತಾರ?" ಶೀನಪ್ಪನವರು ತಮ್ಮ ಹೆಚ್ಚಳಿಕೆಯನ್ನು ಅಪ್ರತ್ಯಕ್ಷನಾಗಿ ಹೊಗ
ಕೊಂಡರು. "ಇನ್ನೇನು ಎಲ್ಲ ಸುರಳಿತ. ಲಗ್ನ ಆಯ್ತು! ಪ್ರಸ್ತ ಆಯ್ತು
ಅವರ ಬಂಧು ಬಳಗದವರು ಸಂತುಷ್ಟಿಯಾಗಿ ಮನೆಗೆ ಹೋದರು! ಇ
ಯಾರ ಹೆದರಿಕೇನೂ ಇಲ್ಲ. ಎಲ್ಲಾ ಆಗಿ ಬಿಟ್ಟಿತು........"

"ಎಲ್ಲಾ ಆಗಿ ಬಿಟ್ಟಿತು ಅಂತ ನೀನು ಅನ್ನುವಿ ಶೀನಪ್ಪ. ಇನ್ನು ಒಂ
ಉಳಿದಿದೆ........" ಕೃಷ್ಣರಾಯರು ಕಾಲಮೇಲೆ ಕಾಲನ್ನು ಜಗ್ಗಿಕೊಂಡು ತವ
ಬಿಳಿ ಮೀಸೆಯ ಮೇಲೆ ಕೈಯಾಡಿಸುತ್ತ ಶೀನಪ್ಪನವರ ಕಡೆಗೆ ನೋಡಿದರು.

ಅವರ ಮಾತುಗಳಿಂದ ಶೀನಪ್ಪನವರಿಗೆ ಏನೋ ಸಂಶಯ ಹುಟ್ಟಿತು
"ಏಕೆ ಏನಾಯಿತು? ನಿಮ್ಮ ಸೊಸೆ ಏನಾದರೂ ಅಂದಳೆ? ಈ ಹದಿನೈದ
ದಿನವಂತೂ ಏನೂ ಆಗಲು ಶಕ್ಯವಿಲ್ಲ. ನಾನು ನಾರಾಯಣನಿಗೆ ಆದಷ್ಟು
ಏನೂ ಮಾತನಾಡಲೇ ಬೇಡವೆಂದು ಹೇಳಿಬಿಟ್ಟಿದ್ದೇನೆ. ಎಲ್ಲ ಆಗು ಹೋಗ
ಗಳ ಮೇಲೆ ನಾನು ಕಣ್ಣು ಇಟ್ಟಿರುತ್ತೇನೆ."

"ಶೀನಪ್ಪ ನೀನು ಬಹಳ ಚಾಣಾಕ್ಷ ಎಂಬುದು ನನಗೆ ಗೊತ್ತಿಲ್ಲೇನು
ನಾನು ಹೇಳುವುದು ಈ ವಿಷಯವಲ್ಲ. ಇನ್ನೊಂದು ಇದೆ........"

"ರಾಯರು ಹೇಳುವುದು ಮತ್ತೆ ಯಾವುದು?" ಶೀನಪ್ಪ ಏನೋ ತರ್ಕಿ
ಸುವವರಂತೆ ಮುಖ ಮಾಡಿದರು.

"ನೋಡು ಯಾರಾದರೂ ಇದ್ದಾರೇನು............" ಎಂದು ರಾಯರ
ಸುಬ್ಬಕ್ಕನವರಿಗೆ ಸೊನ್ನೆ ಮಾಡಿದರು.

"ಯಾರ ಇರಬೇಕು? ಈಗ ಮನೆಯಲ್ಲಿ ಒಂದು ಪಿಳ್ಳೆಯೂ ಇಲ್ಲ. ನಾನು ಹೇಳುತ್ತೇನೆ" ಎಂದು ಸುಬ್ಬಕ್ಕನವರು ತಮ್ಮ ತಯಾರಿ ಉತ್ತರವನ್ನು ಕೊಟ್ಟರು.

ರಾಯರು ಶೀನಪ್ಪನವರನ್ನು ತಮ್ಮ ಸಮೀಪಕ್ಕೆ ಕರೆದರು. ಸುಬ್ಬಕ್ಕನವರು ರಾಯರ ಸೊನ್ನೆಯಂತೆ, ಕಪಾಟನ್ನು ತೆಗೆದು ಒಂದು ಗಂಟನ್ನು ತಂದು ಅವರಿಬ್ಬರ ಎದುರಿಗೆ ಇಟ್ಟರು. "ಶೀನಪ್ಪ, ನಿನಗೆ ಏನಾದರೂ ಕೊಡಬೇಕೆಂದು ನಾವು ಸಂಕಲ್ಪ ಮಾಡಿಕೊಂಡಿದ್ದೆವು. ಅದರ ಯೋಗಾಯೋಗ ಈಗ ಕೂಡಿ ಬಂದಿದೆ. ತಗೋ, ಈ ಗಂಟು ನಿನ್ನದು" ಎಂದು ರಾಯರು ಮಾತನಾಡುತ್ತಾ, ಆ ಗಂಟನ್ನು ಶೀನಪ್ಪನವರಿಗೆ ಕೊಟ್ಟರು.

"ರಾಯರೇ, ನಮಗೂ ನಿಮಗೂ ಕರುಳಿನ ಗಂಟು ಇರುವಾಗ ಇದೆಲ್ಲ ಏತಕ್ಕೆ?" ಎಂದು ಸ್ವಾಭಾವಿಕವಾಗಿ ನುಡಿಯುತ್ತ ಆ ಗಂಟನ್ನು ಬಿಚ್ಚಿ ನೋಡಿದರು. ಬಹಳೇ ಬೆಲೆಯ ರೇಶಿಮೆಯ ಧೋತರ ಮತ್ತು ಹೊದ್ದುಕೊಳ್ಳುವ ಬಟ್ಟೆ ಇದ್ದವು. ಭಂಗಾರದ ಒಂದು ಸರ ಮತ್ತು ಚಪಲಹಾರ ಇದ್ದವು. ಅದರ ಕೆಳಗೆ ಒಂದು ಲಕೋಟೆ ಇದ್ದಿತು. "ಲಕೋಟೆಯನ್ನು ತೆರೆದು ಓದು...." ಎಂದು ರಾಯರು ಹೇಳಿದರು. ಕಳಸಾಪೂರದಿಂದ ದಕ್ಷಿಣಕ್ಕೆ ಒಂದು ಮೈಲು ದೂರದಲ್ಲಿರುವ ೧೦ ಎಕರೆಯ ಎರಡು ಹೊಲಗಳನ್ನು ರಾಯರು ಶೀನಪ್ಪನವರ ಹೆಸರಿನಲ್ಲಿ ಮಾಡಿದ್ದರು. ಶೀನಪ್ಪನವರಿಗೆ ಆನಂದವು ಹೃದಯದುಂಬಿ ಮಾತುಗಳೇ ಹೊರಬರಲಿಲ್ಲ. ಉಪಕಾರ ಸ್ಮರಣೆಯ ಕಣ್ಣುಗಳಿಂದ ರಾಯರನ್ನು ನಿಟ್ಟಿಸಿದರು. ರಾಯರು ಅಂದರು "ಶೀನಪ್ಪ ನೀನು ನಮ್ಮನ್ನು ಹಚ್ಚಿಕೊಂಡು ಇಷ್ಟು ವರ್ಷ ಕೆಲಸ ಮಾಡಿದ್ದಕ್ಕೆ ಇದೇನು ಹೆಚ್ಚು!.... ಮುಂದೆ ನಾವು ಬದುಕಲಿ, ಬಿಡಲಿ...., ನೀನಾದರೂ ಸುಖವಾಗಿ ಬಾಳಬಹುದು."

"ಎಲ್ಲಾ ನೀವೂ ಮತ್ತು ಸುಬ್ಬಕ್ಕನವರ ಹೆಸರಿನಿಂದ ನಾವು ಬದುಕುವುದು. ನಿಮ್ಮ ಹೆಸರು ತೆಗೆದುಕೊಂಡೇ ನಾವು ಎರಡು ತುತ್ತು ಅನ್ನ ಬಾಯಲ್ಲಿ ಹಾಕಿಕೊಳ್ಳಬೇಕು!"

ಶೀನಪ್ಪನವರು ತಮ್ಮ ಮಾತು ಮುಗಿಸುವಷ್ಟರಲ್ಲಿಯೇ ಅಡುಗೆಯ ಮನೆಯಲ್ಲಿ ಥಮ್ ಎಂದು ಭಾಂಡೆಗಳು ಬಿದ್ದ ಸಪ್ಪಳವಾಯಿತು. ಸುಬ್ಬಕ್ಕನವರು ಅಡುಗೆ ಮನೆಗೆ ಧಾವಿಸಿ ಹೋದರು. ಅವರೇನೊ ಅಡುಗೆಯ ಮನೆ

ಯಲ್ಲಿ ಬೆಕ್ಕು ಇರಬೇಕೆಂದು ಮಾಡಿದ್ದರು. ಆದರೆ ಅಲ್ಲಿ ಅಡುಗೆಯ ರಾಜ
ನಿದ್ದ.

ಸುಬ್ಬಕ್ಕ ಕೇಳಿದರು " ನಾನು ಹೇಳುತ್ತೇನೆ. ರಾಜಪ್ಪ, ನೀನು ಹೇ
ಇಲ್ಲಿ ಇರುವಿ ? "

" ಗದ್ದಲೋ ಗದ್ದಲ ಬಸ್ಸಿನಲ್ಲಿ. ನಾನು ಕುಂಟ! ನನ್ನ ಯಾರ
ಒಳಗೆ ಕರಕೊಳ್ಳಲೇ ಇಲ್ಲ. ಕತ್ತಲೆಯಲ್ಲಿ ನುಗಿಸಿಬಿಟ್ಟರು. ಮತ್ತೇನು ಮಾ
ವುದು ? ಅಡುಗೆಮನೆಯಲ್ಲಿ ಇನ್ನೂ ಕೆಲಸವಿತ್ತು. ಕುಂಟುತ್ತ ಇಲ್ಲೇ ಬಂ
ಬಿಟ್ಟೆ " ಎಂದು ಅಡುಗೆರಾಜ ತನ್ನ ದುಃಖವನ್ನು ತೋಡಿಕೊಂಡನು.

" ಅಂದರೆ ನೀನು ಯಾವಾಗ ಬಂದೆ ? " ಸುಬ್ಬಕ್ಕನವರು ಕೇಳಿದರು.

" ಆಗಳೆ, ನೀವೆಲ್ಲ ರಾಯರ ಕೋಣೆಯಲ್ಲಿ ನಿಂತಿರುವಾಗಲೆ." ಸ್ವ
ಸಮಯ ನಿಂತು ರಾಜಪ್ಪ ಕೇಳಿದ " ಬಾಯರೆ, ಆ ಭಂಗಾರ ಸಾಮಾ
ಚೆನ್ನಾಗಿ ಇವೆ. ನಿಂತು ನೋಡಿದೆ. ಅವು ಶೀನಪ್ಪನವರಿಗೇನು ? ನ
ಮಗಳಿಗೂ ಅಂಥವು ಮಾಡಿಸಬೇಕೂ ಅಂತ ಮನಸ್ಸಿದೆ. ಏನೋ
ನೀವು........ ? "

ಅಡುಗೆಯ ರಾಜಪ್ಪನ ಮಾತು ಕೇಳಿ ಸುಬ್ಬಕ್ಕನವರು ಹೌಹಾರಿದರು
ಎದೆ ಹಾರುತ್ತಿತ್ತು ! ಸತ್ಯ ಸಂಗತಿಯನ್ನು ಮರೆಮಾಜಿ ಸುಬ್ಬಕ್ಕನವರು ಹೇ
ದರು "ಅವು ನನ್ನ ಸೊಸೆಗೆ - ನಾನು ಹೇಳುತ್ತೇನೆ " ಎಂದು.

೭

" ರಘುಪತಿ ರಾಘವ ರಾಜಾರಾಮ
ಪತೀತ ಪಾವನ ಸೀತಾರಾಮ........ "

" ಸಾಕು ಬಿಡೊ ಹನುಮಪ್ಪ ನಿನ್ನ ಹಾಡು. ಏನು ನಿನ್ನ ಧ್ವನಿ
ಏನು ನಿನ್ನ ಕುಣಿತ !! "

" ಸಾಹೇಬ ಚಿಕ್ಕ ಬಾಯಿಯವರೆ, ದೇವರ ಆಣೆ ಮಾಡಿ ಹೇಳುತ್ತೇನೆ
ರಾಮದೇವರ ಆಣೆ ಮಾಡಿ ಹೇಳುತ್ತೇನೆ, ಆ ವೀರಪ್ಪ ನನ್ನ ನಾಟಕದೊ

ತೆಗೆದುಕೊಳ್ಳಲಿಲ್ಲ. ಇಲ್ಲಾ ಅಂದರೆ ನಾನು ಹನುಮಂತನ ಪಾರ್ಟ ಹೀಂಗ ಮಾಡುತ್ತಿದ್ದೆ........... ರಘುಪತಿ ರಾಘವ ರಾಜಾರಾಮ । ಪತಿತ ಪಾವನ ಸೀತಾರಾಮ! ”

“ ಅಲ್ಲೋ ನೀನು ದೇವರ ಆಣೆ ಮಾಡಿದ್ದು ಏತಕ್ಕೆ? ವೀರಪ್ಪ ನಿನ್ನ ನಾಟಕದೊಳಗೆ ತೆಗೆದುಕೊಳ್ಳಲಿಲ್ಲ ಅನ್ನೂದಕ್ಕೋ ಅಥವಾ ಪಾರ್ಟ ಅರ್ಭಾಟ ಮಾಡತಿದ್ದೆ ಅನ್ನೂದಕ್ಕೋ ? ”

“ ಸಾಹೇಬ ಚಿಕ್ಕ ಬಾಯಿಯವರ, ರಾಮದೇವರ ಆಣೆ ಮಾಡಿದ್ದು ಪಾರ್ಟ ಅರ್ಭಾಟ ಮಾಡೋದಕ್ಕೆ. ಸಾಹೇಬ ಚಿಕ್ಕಬಾಯಿಯವರ........”

“ ಏ ಹನುಮಪ್ಪ ಮತ್ತೆ ಮತ್ತೆ ಸಾಹೇಬ ಚಿಕ್ಕಬಾಯಿಯವರ ಎಂದು ದೊಡ್ಡ ಬಾಯಿ ತೆರೆದು ಅನ್ನಬೇಡ. ಸುಮ್ಮನೆ ನನ್ನ ಹೆಸರು ಅನ್ನು........”

“ ನಿಮ್ಮ ಹೆಸರು ಆ ಲಕ್ಷ್ಮಿಬಾಯಿಸಾಹೇಬ, ನನಗೆ ಅನ್ನಲಿಕ್ಕೆ ಬರೋ ಬರಿ ಆಗುವದಿಲ್ಲ. ನೀವು ಚಿಕ್ಕವರು. ಈ ಸಾಹೇಬ ಚಿಕ್ಕ ಬಾಯಿಯವರ ಇದೇ ಚಲೋ. ಎರಡೂ ಬಿಟ್ಟು ಬಿಡಿರಿ. ನೀವು ಸೀತಾಬಾಯಿ ಆಗಿರಿ. ನೀವು ಸೀತಾದೇವಿ ಈ ಕಲ್ಲ ಮೇಲೆ ಕೂಡ್ರಿ. ನಾನು........? ರಘುಪತಿ ರಾಜಾರಾಮ........”

“ ಹನುಮಪ್ಪ, ನಾನು ಸೀತಾ. ನೀನು ಹನುಮಂತ! ನೀನೇನೊ ಇಲ್ಲೆ ಸುತ್ತ ಕುಣಿಯಲಿಕ್ಕೆ ಹತ್ತಿರುವಿ. ಆದರೆ ಈ ಸುಂದರಿನ್ನ ಮರೆತುಬಿಟ್ಟೆ ಯಲ್ಲ! ಅವಳೇನಾಗಬೇಕು ಈ ನಾಟಕದೊಳಗ? ”

“ ಬಾಯರ, ನನಗೆ ಗೊತ್ತಿದ್ದದ್ದು ಮೂರು ಜನ — ರಾಮ, ಲಕ್ಷ್ಮಣ, ಸೀತಾ. ನೀವು ಸೀತಾದೇವಿ ಆಗಿರುವಿರಿ ಅಂದಮೇಲೆ ಸುಂದರಾಬಾಯರು ಬೇಕಾದರೆ ಲಕ್ಷ್ಮಣ ಆಗಲಿ........”

“ ಹೋಗೋ ಹೋಗು. ನಾನೇನು ಗಂಡರಾಮಿ ಏನು ಗಂಡ ಪಾರ್ಟ ಹಾಕಲಿಕ್ಕೆ. ನೀನು ಹರಟೆಗೆ ನಿಂತಿ ಎಂದರೆ ತೀರಿತು. ನಿನ್ನ ಮಾತೇ ಮುಗಿಯುವದಿಲ್ಲ........”

“ ಹನುಮಪ್ಪ ಸಾಕು ಹೋಗು. ನನ್ನ ಕೆಲಸ ಇನ್ನೂ ಆಗಲೇ ಇಲ್ಲ. ನೀನು ಏನು ಹೇಳಿದ್ದಿ ಅವಳಿಗೆ. ಸುಮ್ಮನೆ ನಾವು ಇಲ್ಲಿ ಎಷ್ಟು ಹೊತ್ತು ಕೂಡಬೇಕು? ಸುಂದರಾ ಬಂದು ಬಹಳೇ ಹೊತ್ತಾಯ್ತು........ ”

“ ನಿಲ್ಲರಿ....ನಿಲ್ಲರಿ.... ಕೆಲಸ ಆಗುತ್ತದೋ ಇಲ್ಲೋ ನೋಡಿಕೊಂಡು
ಬರುತ್ತೇನೆ.......”

ನೀರಿನ ಹನುಮಂತ ಟಣ್ಣನೆ ಜಿಗಿದು ಕೆಳಗಡೆ ಓಡಿಹೋದನು. ಲಕ್ಷ್ಮಿ
ಮತ್ತು ಸುಂದರಾ ದಿನ್ನೆಯ ಮೇಲೆ ಅವನು ಕೆಳಗಿಳಿದು ಓಡಿ ಹೋಗುವುದನ್ನ
ನೋಡುತ್ತ ಕುಳಿತರು. ಕಳಸಾಪೂರಕ್ಕೆ ಬಂದ ಒಂದು ತಿಂಗಳಲ್ಲಿಯೆ ಸುಂದ
ರಾಳ ವಿಶೇಷ ಪರಿಚಯು ಲಕ್ಷ್ಮಿಗೆ ಆಗಿತ್ತು. ತಾಯಿಯನ್ನು ಕಳೆದುಕೊಂಡ
ಹುಡುಗಿಯವಳು ! ಹೊಸದಾಗಿ ಮನೆಗೆ ಬಂದ ತಮ್ಮ ಕಾಕೂಳನ್ನು ಬಹಳ
ಪ್ರೀತಿಸುತ್ತಿದ್ದಳು. ಗೋವಿಂದರಾಯರ ಹೆಣ್ಣುಮಕ್ಕಳಾದ ಲೀಲಾ, ಸೋನೂ,
ರಂಗೂ ಯಾರೂ ವಿಶೇಷವಾಗಿ ಲಕ್ಷ್ಮಿಯನ್ನು ಹಚ್ಚಿಕೊಂಡಿರಲಿಲ್ಲ. ಸುಂದರಾ
ಮಾತ್ರ ಲಕ್ಷ್ಮಿಯ ಕೋಣೆಗೆ ಮೇಲಿಂದ ಮೇಲೆ ಬರುತ್ತಿದ್ದಳು. ಲಕ್ಷ್ಮಿಯ
ಜೊತೆಗೆ ಮಾತನಾಡುತ್ತ ಕುಳಿತುಕೊಳ್ಳುತ್ತಿದ್ದಳು. ಲಕ್ಷ್ಮಿ ತಾನು ಎಲ್ಲಿ
ಹೋಗಬೇಕಾದರೂ ಸುಂದರಾಳನ್ನು ಕರೆದುಕೊಂಡು ಹೋಗುತ್ತಿದ್ದಳು.

ಸುಂದರಾ ಮತ್ತು ಲಕ್ಷ್ಮಿ ಕುಳಿತದ್ದು ಒಂದು ದಿಬ್ಬದ ಮೇಲೆ. ಕಳಸಾ
ಪೂರದಿಂದ ಪೂರ್ವಕ್ಕೆ ಎರಡು ಫರ್ಲಾಂಗುಗಳಲ್ಲಿಯೇ ಇದೆ. ಅದಕ್ಕೆ ಕಳಸಾ
ಪೂರ ದಿಬ್ಬವೆಂದು ಕರೆಯುವರು. ಈ ದಿಬ್ಬದ ಮೇಲೆ ಹಲವು ಹಾಸುಗಲ್ಲು
ಗಳು ಬಿದ್ದಿವೆ; ಮತ್ತು ದಿಬ್ಬದ ತುದಿಯಲ್ಲಿ ಒಂದು ಹುಣಶೇಮರ ಬಹಳ ಚಂದ
ವಾಗಿ ತನ್ನ ರೆಂಬೆಗಳನ್ನು ಹರಹಿಕೊಂಡು ನಿಂತಿದೆ. ಈ ಗಿಡದ ಬುಡ
ದಲ್ಲಿರುವ ಹಾಸುಗಲ್ಲಿನ ಮೇಲೆಯೇ ಆ ದಿನ ಸುಂದರಾ ಮತ್ತು ಲಕ್ಷ್ಮಿ ಕುಳಿ
ತಿದ್ದರು.

ಕಳಸಾಪೂರ ದಿಬ್ಬದ ಮೇಲೆ ನಿಂತರೆ ಸುತ್ತಲಿನ ದೂರ ದೂರದ
ಹೊಲಗಳು, ತೋಟಗಳು ಕಾಣುವವು. ಅದೆಲ್ಲವೂ ಬಯಲು ಸೀಮೆ. ಜಾಗಿ
ರದಾರರ ಕಬ್ಬಿನ ತೋಟಗಳು, ವೀಳ್ಯದೆಲೆ ಮತ್ತು ಪಲ್ಲೆಯ ತೋಟಗಳು
ಆರೇಳು ಸುತ್ತಲೂ ಇದ್ದುದರಿಂದ ಭೂಮಿ ಹಸುರಿನಿಂದ ಶೋಭಿಸುತ್ತಿದ್ದಿತು.
ಬೆಳೆ ಕೈಗೆ ಬಂದಾಗ ಮಾತ್ರ ಈ ಬಯಲು ಸೀಮೆ ನಿಸರ್ಗ ದೇವತೆಯ
ಶೃಂಗಾರಭೂಮಿಯಾಗಿ ಕಂಗೊಳಿಸುವುದು.

ದಿಬ್ಬದ ದಕ್ಷಿಣದ ತುದಿಯ ಸಮೀಪದಲ್ಲಿ ಒಂದು ಕೆರೆಯಿದೆ. ಆ ಕೆರೆಗೆ
ಒಡ್ಡನ್ನು ಜಾಗಿರದಾರರೆ ಕಟ್ಟಿಸಿದ್ದಾರೆ. ಇದರಿಂದ ಕೆರೆಯ ನೀರನ್ನು ತೋಟ

ಪಟ್ಟಿಗಳಿಗೆ ಉಪಯೋಗಿಸಿಕೊಳ್ಳಲು ಅನುಕೂಲವಾಗಿದೆ. ಕಳಸಾಪೂರದ ಜನರೆಲ್ಲ ಈ ಕೆರೆಗೆ ಬಂದು ನೀರನ್ನು ತುಂಬಿಕೊಂಡು ಹೋಗುತ್ತಾರೆ. ಅಲ್ಲಿ ಒಗೆಯುವ ಕೆಲಸವನ್ನೂ ಮಾಡುತ್ತಾರೆ. ಚಿಕ್ಕ ಹುಡುಗರು ತಮ್ಮ ಮೈ ಸ್ವಚ್ಛ ಮಾಡಿಕೊಳ್ಳುವುದಲ್ಲದೆ, ತಾವು ತಂದ ದನಕರುಗಳ ಮೈಯನ್ನು ತೊಳೆಸುತ್ತಾರೆ.

ಕಳಸಾಪೂರ ದಿಬ್ಬದ ಮೇಲೆ ಕುಳಿತು ನಿಸರ್ಗ ಸೌಂದರ್ಯವನ್ನು ಸವಿಯಬಹುದು. ಈ ದಿಬ್ಬದ ಮೇಲೆ ಮೊದಲನೆಯ ಸಲ ಬಂದ ಲಕ್ಷ್ಮಿಗೆ ಬಹಳ ಆನಂದವೆನಿಸಿತು! ಮನಸ್ಸೂ ಎಷ್ಟು ಹಗುರವೆನಿಸಿತು! ತನ್ನದೊಂದು ಕೆಲಸವಾದರೆ ಇನ್ನೂ ಮನಸ್ಸಿಗೆ ಉತ್ಸಾಹವೆನಿಸಬಹುದು ಎಂದು ಯೋಚಿಸಿದಳು.

ಆಗ ಸಂಜೆ ಐದು ಗಂಟೆಯಾಗಿತ್ತು. ಲಕ್ಷ್ಮಿ ಅಲ್ಲಿಗೆ ಬಂದು ಇಪ್ಪತ್ತು ನಿಮಿಷಗಳಾಗಿ ಹೋಗಿದ್ದವು. ಆದರೂ ಅವಳು ದಾರಿ ಕಾಯುತ್ತಿದ್ದ ಆ ಜೋಗತಿ ಬರಲೇ ಇಲ್ಲ! ಪಶ್ಚಿಮದಲ್ಲಿ ಸೂರ್ಯ ಕೆಳಗಿಳಿಯುತ್ತಿದ್ದ! ಜೋಗಿತಿಯು ಬರುವುದಕ್ಕಿಂತ ಮೊದಲೇ ಎಲ್ಲಿ ಕತ್ತಲೆಯಾಗಿ ಬಿಡುವುದೋ ಎಂಬ ಭಯವೂ ಲಕ್ಷ್ಮಿಗೆ ಬರುತ್ತಿತ್ತು!

ಲಕ್ಷ್ಮಿಗೆ ಜೋಗಿತಿಯ ಪರಿಚಯ ಅಕಸ್ಮಾತ್ತಾಗಿ ಆಯಿತು. ಲಕ್ಷ್ಮಿಗೆ ಹಾಲು, ಮೊಸರು, ಬೆಣ್ಣೆ ಇವುಗಳ ವ್ಯವಸ್ಥೆ ನೋಡುವುದನ್ನು ಅತ್ತೆಯವರಾದ ಸುಬ್ಬಕ್ಕ ಒಪ್ಪಿಸಿದ್ದರು. ಆ ಕೆಲಸವೆಲ್ಲ ಹಿತ್ತಲದಲ್ಲಿಯೇ ಇದ್ದ ಕೋಣೆಯಲ್ಲಿ ಇರುತ್ತಿದ್ದಿತು. ದಿನಾಲು ಮುಖ ಸಪ್ಪಗೆ ಮಾಡಿಕೊಂಡು ಅಲ್ಲಿ ಓಡಾಡುವ ಲಕ್ಷ್ಮಿಯನ್ನು ಕಂಡು ಆ ಜೋಗಿತಿ ದುಃಖಗೊಂಡಿದ್ದಳು. ಹುಚ್ಚು ಗಂಡನನ್ನೆ ಮಾಡಿಕೊಂಡದ್ದು ಅದಕ್ಕೆ ಕಾರಣವೆಂದು ಅವಳು ತಿಳಿದುಕೊಂಡಿದ್ದಳು. ನಾರಾಯಣರಾಯರ ಹುಚ್ಚಿನ ಬಗ್ಗೆ ಊರ ಜನರಿಗೆಲ್ಲ ಗೊತ್ತಿದ್ದಿತು. ಲಕ್ಷ್ಮಿಯ ಮೇಲಿನ ಮಮತೆಯಿಂದ ಆ ಜೋಗಿತಿ ತಾನಾಗಿಯೆ ಮಾತು ತೆಗೆದು, ಅವಳಿಗೆ ಕಲ್ಯಾಣವಾಗುವಂತೆ ಒಂದು ಮಂತ್ರೋಪಾಯವನ್ನು ಹೇಳಿಕೊಡುವುದಾಗಿಯೂ, ಕಳಸಾಪೂರ ದಿಬ್ಬಕ್ಕೆ ಬರಬೇಕಾಗಿಯೂ ಬೇಡಿಕೊಂಡಿದ್ದಳು. ಪ್ರತಿ ದಿನ ಬಂದು ಮಾತನಾಡುವ ಆ ಜೋಗಿತಿಯಲ್ಲಿ ಲಕ್ಷ್ಮಿ ವಿಶ್ವಾಸವಿಟ್ಟಿದ್ದಳು.

ತನ್ನ ಪತಿ ಹುಚ್ಚರಿದ್ದಾರೆಂದು ಗೊತ್ತಾದ ಕೂಡಲೆ ಲಕ್ಷ್ಮಿ ತನ್ನ
ತಾನೆ ಅತ್ತಳು, ಗೋಳಿಟ್ಟಳು. ಆದರೆ ಅವಳ ಗೋಳನ್ನು ಯಾರು ಕೇ
ಬೇಕು? ಒಮ್ಮೆ ಲಗ್ನವಾದ ಮೇಲೆ ಆ ಬ್ರಹ್ಮಗಂಟನ್ನು ಯಾರು ಬಿಡಿ
ಬೇಕು? ತನ್ನ ಪತಿ ಹೀಗೆ ಇರುವನೆಂದು ಜನರೆದುರು ಹೇಳುವುದೆ ಅವಳಿ
ಬಹಳ ನಾಚಿಕೆಯೆನಿಸಿತು. ಏನಾದರೂ ಮಾತನಾಡಬೇಕೆಂದರೂ ಅವಳ
ಯಾರ ಜೊತೆಗೆ ಮಾತನಾಡಬೇಕು? ಎಲ್ಲವೂ ಬಹು ಕಠಿಣವೆನಿಸಿತು
ತನ್ನ ದುಃಖವನ್ನು ತನ್ನಲ್ಲಿ ನುಂಗತೊಡಗಿದಳು. ರಾಮಾಯಣ ನಾಟ
ನೋಡಿ ಬಂದಂದಿನಿಂದ ಸೀತೆಯಂತೆ ಪತಿಭಕ್ತಿ ಭಾವವನ್ನು ದೃಢೀಕರಿ
ಕೊಂಡಳು. ತನ್ನ ಪತಿಯನ್ನು ಹೇಗಾದರೂ ಮಾಡಿ ಒಳ್ಳೆ ಮಾರ್ಗಕ್ಕೆ
ಹಚ್ಚುವ ಪ್ರಯತ್ನ ಮಾಡಬೇಕೆಂದು ಲಕ್ಷ್ಮಿಗೆ ಬಲವಾಗಿ ಅನಿಸಿತು
ಅಂತೆಯೆ ಲಕ್ಷ್ಮಿಯು ಜೋಗಿತಿಯ ಉಪಾಯಕ್ಕೆ ಒಪ್ಪಿಗೆ ಕೊಟ್ಟಳು. ನೀರಿ
ಹನುಮಪ್ಪ ಪ್ರತಿನಿತ್ಯ ಲಕ್ಷ್ಮಿಯ ಕೈಗೆಲಸಗಳನ್ನು ಮಾಡುತ್ತ ಓಡಾಡುತ್ತಿದ್ದ
ಅವನೇ ಈ ಕಾರ್ಯಕ್ರಮದ ಏರ್ಪಾಡಿನ ನಾಯಕನಾದ.

ಹನುಮಂತ ಕೆಳಗೆ ಹೋದಾಗ ಸುಂದರಾ ಕೇಳಿದಳು "ಕಾಕೂ
ನಿಮ್ಮ ಊರಲ್ಲಿ ನಿಮಗೆ ಏನು ಕನಸುಗಳು ಬೀಳುತ್ತಿದ್ದವು?" ಎಂದು.

ಸುತ್ತಮುತ್ತಲಿನ ನಿಸರ್ಗ ಸೌಂದರ್ಯ ನೋಡುತ್ತ ಕುಳಿತ ಲಕ್ಷ್ಮಿ
ಈ ಅನಿರೀಕ್ಷಿತ ಪ್ರಶ್ನೆ ಅಚ್ಚರಿಯನ್ನುಂಟು ಮಾಡಿತು. "ಏಕೆ ಸುಂದರಾ
ಒಮ್ಮೆಲೆ ಈ ಪ್ರಶ್ನೆ ಕೇಳಿದೆ. ಏನಾದರೂ ನಿನಗೆ ಕನಸು ಬಿದ್ದಿದ್ದವೇನು ನಿನ್ನೆ
ಇವು ನಿನಗೆ ಕನಸು ಬೀಳುವ ದಿನಗಳು."

ಸುಂದರಾಳಿಗೆ ಆಗಳೆ ಹದಿಮೂರು ವರುಷ. ಮದುವೆಯ ವಯಸ್ಸು
ಸಮೀಪಿಸಿತ್ತು, ಅಂತೆಯೆ ಲಕ್ಷ್ಮಿ ಆ ಪ್ರಶ್ನೆ ಕೇಳಿದಳು. "ಛೇ, ಏನೂ ಇಲ್ಲ
ನಾಚಿಕೆಯಿಂದ ಸುಂದರಾ ಉತ್ತರಿಸಿದಳು. "ನಿಮ್ಮ ಬಗ್ಗೆಯೇ ಕೇಳಿ
ಕಾಕೂ. ನೀವೇನೋ ದೇವರ ಸೇವಾ ಮಾಡುತ್ತಿದ್ದಿರಂತೆ........"

"ದೇವರ ಸೇವಾ!!........ಯಾರ ಸಲುವಾಗಿ?"

"ಅದೆ........ನಿಮ್ಮ ಲಗ್ನದ ಸಲುವಾಗಿ!"

"ಹೂಂ!........" ಲಕ್ಷ್ಮಿ ಉಸಿರ್ಗರೆದಳು. "ಮುಂದೆ ಏನಾಯಿತು?

"ನಿಮಗೇನೋ ಒಂದು ದಿನ ಕನಸು ಬಿದ್ದಿತಂತೆ. ಅದರಲ್ಲಿ ದೇವರ

ಪ್ರತ್ಯಕ್ಷವಾಗಿ ಬಂದು ನಿಮಗೆ ಆಶೀರ್ವಾದ ಮಾಡಿದರಂತೆ. ನಮ್ಮ ಕಾಕಾ ಬಂದು ನಿಮಗೇನೋ ಹಾರ ಹಾಕಿದನಂತೆ. ಆಮೇಲೆ ನೀವು ಲಗ್ನವಾದರೆ ನಮ್ಮ ಕಾಕಾನೇ ಆಗುತ್ತೀರಿ. ಇಲ್ಲವಾದರೆ ಇಲ್ಲವೆಂದು ಹಟ ಹಿಡಿದಿರಂತೆ. ಕಾಕು, ನಿಮಗೆ ಕನಸಿನಲ್ಲಿ ಅಷ್ಟು ವಿಶ್ವಾಸವಿದೆಯೇನು ?"

ಸುಂದರಾ ಚಿಕ್ಕವಳಿದ್ದರೂ ಅವಳಿಗೆ ಸುತ್ತಲೂ ಮನೆಯಲ್ಲಿ ನಡೆಯುವ ಸಂಗತಿಗಳ ಬಗ್ಗೆ ಬಹಳ ಲಕ್ಷ್ಯವಿತ್ತು. ಲಕ್ಷ್ಮಿಯನ್ನು ಕೊಡಲು ತಾವಾಗಿಯೆ ಸಂಜೀವರಾಯರು ಮುಂದೆ ಬಂದರೆಂದೂ, ಅವರಿಗೆ ಈ ರೀತಿಯಾಗಿ ಕನಸಿನ ಬಲವಿದ್ದಿತೆಂದೂ ಮನೆಯಲ್ಲಿಯೂ ಮತ್ತು ಊರಲ್ಲಿಯೂ ಸುದ್ದಿ ಹಬ್ಬಿಸಿದ್ದರು. ಇದರಲ್ಲಿ ಸತ್ಯವಾದುದು ಯಾವುದೂ ಇರಲಿಲ್ಲ. ಆದ್ದರಿಂದಲೆ ಸುಂದರಾ ಹೇಳಿದ ಈ ಸುದ್ದಿ, ಲಕ್ಷ್ಮಿಗೆ ಬಹಳ ವಿಚಿತ್ರವೆನಿಸಿತು. "ನಿನಗೆ ಇದೆಲ್ಲ ಯಾರು ಹೇಳಿದರು ?" ಎಂದು ಲಕ್ಷ್ಮಿ ಸುಂದರಾಳನ್ನು ಕೇಳಿದಳು.

"ಇದನ್ನು ಶೀನಪ್ಪನವರೆ ಮನೆಯಲ್ಲಿ ಮಾತನಾಡುತ್ತಿದ್ದರು !"

"ಶೀನುಕಾಕಾ !"

"ಹೂಂ !"

"ಶೀನುಕಾಕಾ ಅವರೇ ಹೇಳಿದರೆ ?"

"ಹೂಂ !"

ತನ್ನ ಮದುವೆಯ ಮುನ್ನ ನಡೆದ ನಾಟಕದ ದೃಶ್ಯಗಳನ್ನು ನೆನೆಯುತ್ತ ಲಕ್ಷ್ಮಿ ಮೂಕಚಿತ್ತಳಾಗಿ ಕುಳಿತಳು !

"ಸಾಹೇಬ ಚಿಕ್ಕಬಾಯಿಯವರ........" ತೇಕುತ್ತ ಮೇಲೇರಿ ಬಂದು ಹನುಮಂತ ಒದರಿದ "ನಿಮ್ಮ ಕೆಲಸ ಏನಾಗಬೇಕು ?"

ಹನುಮಂತನ ಧ್ವನಿಯಿಂದ ಕೂಡಲೆ ಎಚ್ಚರಾದಂತಾಗಿ ಲಕ್ಷ್ಮಿ ಹನುಮಂತನ ಮುಖವನ್ನೆ ನಿರೀಕ್ಷಿಸುತ್ತ ಕೇಳಿದಳು "ಮತ್ತೆ ನೀನು ಈವರೆಗೂ ಏನು ಮಾಡಿದೆ ?"

"ಸಾಹೇಬ ಚಿಕ್ಕಬಾಯಿಯವರ, ಅಲ್ಲೆ ಕೆಳಗೆ ಒಂದು ದೊಡ್ಡ ಗುಂಡ ಕಲ್ಲು ಇದೆ." ಹನುಮಂತ ತಾನು ಮಾತನಾಡುವಾಗ, ತನ್ನ ಅಗಲವಾದ ಬಾಯಿ ತೆರೆದು, ಪ್ರತಿಯೊಂದು ಮಾತಿಗೂ ನಟನೆ ಮಾಡಿ ತೋರಿಸುತ್ತಿದ್ದ. "ಆ ಗುಂಡಕಲ್ಲು ಎದುರಿಗೆ ನಿಲ್ಲಬೇಕು. ರಾಮು ! ರಾಮು ! ಎಂದು ದೇವರ

ಪ್ರಾರ್ಥನೆ ಮಾಡಬೇಕು. ಆಮೇಲೆ ನಮ್ಮ ಕೆಲಸ ಏನೆಂಬುವುದನ್ನು ಹೇ
ಬೇಕು........ಆಮೇಲೆ ಆ ಗುಂಡಕಲ್ಲಿಗೆ ಮೂರು ಸಲ ಪ್ರದಕ್ಷಿಣೆ ಹಾಕಿ, ನ
ಸ್ಕಾರ ಮಾಡಿ ಅದನ್ನು ಎತ್ತಬೇಕು. ಅದನ್ನು ಎತ್ತಲಿಕ್ಕೆ ಬಂದರೆ ಕೆಲಸ ಆ
ತ್ತದೆ ಎಂದು ತಿಳಿದುಕೊಳ್ಳಬೇಕು. ಇಲ್ಲಾ ಅಂದರೆ ಫಟ್........... ಹಾ
ನಾನು ಏನು ಹೇಳತಿದ್ದೆ ?........ ಹಾಂ ! ಕಲ್ಲ ಮುಂದೆ ನಿಂತುಕೊಂಡಿದ್ದೆ.
ನೀವು ಹೇಳಿದ್ದು ಏನು ಅದೇ ನೆನಪಾಗಲಿಲ್ಲ........"

"ಅಲ್ಲೋ ಕಲ್ಲೆ, ಆ ಜೋಗಿತಿ ಸುದ್ದಿ ಏನು ?"

"ಸಾಹೇಬ ಚಿಕ್ಕಬಾಯಿಯವರ, ಎಂಥಾ ಬುದ್ಧಿ ನನ್ನದು ! ಕ
ನೋಡಿರಿ. ಒಳಗೆ ಏನೂ ಹೋಗುವದಿಲ್ಲ. ಆಕಿ ಬಂದು ಅಲ್ಲೆ ನಿಂತಾ
ಬರ್ರಿ, ಬರ್ರಿ. ನಾನೇ ತಡಮಾಡಿದೆ ನಿಮಗೆ ಹೇಳಲಿಕ್ಕೆ........"

ಹನುಮಂತ, ಲಕ್ಷ್ಮಿ, ಸುಂದರಾ ಮೂವರೂ ಸಾವಧಾನವಾಗಿ ಕೆಳ
ಯುತ್ತ ಹೋದರು. ದಿಬ್ಬದ ಉತ್ತರ ಭಾಗದ ಈ ದಾರಿಯಲ್ಲಿ ಜನ
ಮೇಲಿಂದ ಓಡಾಡುತ್ತಿರುವುದರಿಂದ, ದಾರಿಯಲ್ಲಿ ಮೆಟ್ಟಲುಗಳ ರಚನೆಯ
ಗಿತ್ತು. ಮೂಲೆಯಲ್ಲಿ ಒಂದು ಹಾಳು ಕೊಂಪೆ. ಜಾಲಿ ಗಿಡಗಳ ಬೇ
ಅದೇ ಆಗ ಸಂಜೆಯಾಗುತ್ತಿದ್ದಿತು ! ಜಾಲಿ ಗಿಡಗಳಲ್ಲಿಯ ಜೀರುಂಡೆಗ
ಜಿರ್ ಜಿರ್ ಎಂದು ಒದರುತ್ತಿದ್ದವು. ಆ ಏಕಾಂತದಲ್ಲಿಯ ಸ್ಥಳದ ಒಂ
ಮೂಲೆಯಲ್ಲಿ ಹೊರಳಿ, ಮೂವರೂ ಒಳಸೇರಿದರು. ಒಂದು ದೀಪ ಹೊತ್ತಿ
ಕೊಂಡು ಆ ಜೋಗಿತಿ ಮೂವರನ್ನೂ ಒಳಗೆ ಕರೆದೊಯ್ದಳು. ಹಾದಿಯ
ಹಾಳು ಕಲ್ಲುಗಳು ಬಿದ್ದಿದ್ದವು. ಸ್ವಚ್ಛತೆ ಏನೂ ಇರಲಿಲ್ಲ. ಸ್ವಲ್ಪ ಒಳ
ಹೋದ ಕೂಡಲೆ, ತುಸು ಎತ್ತರವಾದ ಮೂರ್ತಿ ಒಂದು ಗಿಡದ ಹೊದರಿ
ಕಂದಿತು. ಅದು ದಿಗಂಬರ ಮೂರ್ತಿ ! ತಾನು ಎಲ್ಲಿ ಇದ್ದೇನೆ, ಏನು ಮಾ
ತ್ತಿದ್ದೇನೆ ಎಂಬುದನ್ನು ಲಕ್ಷ್ಮಿ ನೆನೆಯಲಾರದವಳಾದಳು. ಗಾಬರಿಯಿ
ಮುಖವೂ ಬೆವರತೊಡಗಿತು. ಅದನ್ನು ಕಂಡು ಜೋಗಿತಿ ಹೇಳಿದಳು "ಬಾ
ಯವರೆ, ಏನೂ ಹೆದರಬೇಡಿರಿ. ನಾನು ಎಷ್ಟೋ ಜನರಿಗೆ ಮಂತ್ರ ಹ
ಇದೇ ಸ್ಥಳದಲ್ಲಿ ಯಂತ್ರವನ್ನು ಕೊಟ್ಟದ್ದೇನೆ. ಎಲ್ಲರಿಗೂ ಗುಣವಾಗಿ
ಮೂರುಸಂಜೆಯ ಹೊತ್ತಿಗೆ ಈ ಮೂರ್ತಿಯ ಎದುರಿಗೆ ನಿಂತು ಮಂತ್ರ ಹ
ಈ ಯಂತ್ರ ಕೊಟ್ಟರೆ ದೇವರು ನಿಮಗೆ ಕಲ್ಯಾಣ ಮಾಡಿಯೇ ಮಾಡುವ

ನನ್ನ ಮಾತಿನಲ್ಲಿ ವಿಶ್ವಾಸವಿಡಿರಿ……..”

ಎಲ್ಲದಕ್ಕೂ ಲಕ್ಷ್ಮಿ ಸುಮ್ಮನೇ ಇದ್ದಳು. ಜೋಗಿತಿ ಅಂದ ಮಾತಿಗೆ ಅವಳು ಹೂಂಗುಟ್ಟುತ್ತಿದ್ದಳು. ಜೋಗಿತಿ ಏನೇನೋ ಮಂತ್ರ ಉಚ್ಚರಿಸಿದಳು. ಯಾವ ಯಾವ ರೀತಿಯಿಂದಲೋ ಕೈಮಾಡಿದಳು. ಆಮೇಲೆ ಒಂದು ಯಂತ್ರ ಮತ್ತು ಭಂಡಾರವನ್ನು ಲಕ್ಷ್ಮಿಯ ಕೈಯಲ್ಲಿ ಕೊಡುತ್ತ “ನಮ್ಮ ಕಳಸಾಪೂರ ದಿನ್ನಿದೇವರ ಮಹಿಮಾ ಹೆಚ್ಚಿನದು ನೋಡಿರಿ. ಹಲವು ದಿನಗಳಲ್ಲಿಯೆ ಎಲ್ಲಾ ಬದಲಾಗುವುದು…………” ಖಣ, ಎಲೆಯಡಿಕೆ, ಐದು ರೂಪಾಯಿ ದಕ್ಷಿಣೆ ಕೊಟ್ಟು ಲಕ್ಷ್ಮಿ ಇಬ್ಬರೂ ಜೊತೆಗಾರರನ್ನು ಕರೆದುಕೊಂಡು ಮೇಲೇರಿ ಬಂದಳು.



ಲಕ್ಷ್ಮಿ ಮೊದಲೆ ಎಣಿಸಿದಂತೆ ತನ್ನ ಈ ಕೃತಿಯಿಂದ ನಿಜವಾಗಿಯೂ ಸುಖವಾಗಬೇಕಿತ್ತು. ಆದರೆ ಆ ಕೊಂಪೆಯಲ್ಲಿ ಹಾಯ್ದು ಬಂದದ್ದರಿಂದ, ತನ್ನ ನಡತೆಯ ಬಗ್ಗೆ ತನಗೇ ಸಂಶಯಬರತೊಡಗಿ ಅವಳ ಮನಸ್ಸು ಅತ್ಯಂತ ಅಲ್ಲೋಲಕಲ್ಲೋಲವಾಯಿತು. ಅವಳ ಬಾಯಿಯಿಂದ ಮಾತುಗಳೇ ಹೊರಡಲಿಲ್ಲ.

“ಸಾಹೇಬ ಚಿಕ್ಕ ಬಾಯಿಯವರ…………” ಹನುಮಂತನೆ ಮಾತು ತೆಗೆದ “ನೋಡ್ರಿ ನನ್ನ ತಲೆ ಕಲ್ಲು. ಒಂದು ಮಾತು ನಾವು ಹೊರಡುವಾಗ ನೆನಪಿಗೇ ಬರಲಿಲ್ಲ. ಒಂದು ಕೆಲಸಕ್ಕೆ ಮೂರು ಮಂದಿ ಹೊರಡಬಾರದು ನೋಡ್ರಿ……..”

ಹನುಮಂತ ಅಕಸ್ಮಾತ್ತಾಗಿ ಈ ಮಾತು ಅನ್ನುವುದಕ್ಕೂ, ತನ್ನ ಕೆಲಸದ ಬಗ್ಗೆ ಬಹಳ ಭಯ ಉಂಟಾಗುವುದಕ್ಕೂ ಲಕ್ಷ್ಮಿಗೆ ಒಂದೇ ಆಯಿತು! ಹನುಮಂತನಿಗೆ ಏನೂ ಉತ್ತರ ಕೊಡಲಿಲ್ಲ. ಸೂರ್ಯನು ಮುಣುಗಿದ್ದ. ಅವನ ಬೆನ್ನುಹತ್ತಿ ಆ ಕೆಂಪು ಬಣ್ಣವೂ ಹೋಗಿದ್ದಿತು. ಲಕ್ಷ್ಮಿ ಲಗುಬಗೆಯಿಂದ ಹೆಜ್ಜೆಗಳನ್ನು ವಾಡೆಯ ಕಡೆಗಿಡಹತ್ತಿದಳು.

“ಓಹೋS……..ಓSಹೋSS……..” ದೂರದಲ್ಲಿ ಯಾರೋ ಕೂಗಿದಂತಾಯಿತು! ಆ ಧ್ವನಿಯನ್ನು ಕೇಳಿ ಗಾಬರಿಯಾಗಿ ಲಕ್ಷ್ಮಿ ಮತ್ತು ಸುಂದರಾ ತ್ವರಿತ ಗತಿಯಿಂದ ಸಾಗಹತ್ತಿದರು. ಆ ಹಾಳು ಕೊಂಪೆಯಿಂದ ಯಾವುದಾದರೂ ದೆವ್ವ ಕೂಗಹತ್ತಿದೆ ಏನೋ ಎಂದು ಆ ಸ್ತ್ರೀಯರಿಗೆ ಬಲವಾಗಿ

ಅನಿಸಿತು. ಲಕ್ಷ್ಮಿ ನೂರು ಸಲ ತನ್ನ ಕೃತಿಗಾಗಿ ತಾನೇ ತನ್ನನ್ನು ಬಯ್ದು ಕೊಂಡಳು.

"ಗಾಬರಿಯಾಗಬೇಡಿರಿ ಸಾಹೇಬ ಚಿಕ್ಕ ಬಾಯಿಯವರ. ನಾನು ಇದ್ದೇನೆ - ಹನುಮಂತ!........ಯಾರು ಬೇಕಾದವರು ಬರಲಿ. ನನ್ನ ಬಾಲ ದಿಂದ ಅವರನ್ನು ಸುತ್ತಿ ಸಮುದ್ರದಾಗ ಒಯ್ದು ಒಗಿತೀನಿ."

"ಓ ಹೋಽ........................" ಧ್ವನಿಯಗುಂಟ ಕುದುರೆಯ ಖುರ ಪುಟದ ಸಪ್ಪಳವೂ ಕೇಳಿಸಿತು. ಹನುಮಂತ ಧೈರ್ಯದಿಂದ ಹೊರಳಿ ನೋಡಿದ.

"ಓಹೋಹೋ!" ಚಪ್ಪಾಳೆ ತಟ್ಟಿದ ಹನುಮಂತ. "ನಮ್ಮ ಶೀನಪ್ಪ ನವರು! ನಮ್ಮ ಶೀನಪ್ಪನವರು........!!"

ಮೂವರು ದಿನ್ನೆಯ ಇಳಿಕೆಯನ್ನು ದಾಟಿರಲಿಲ್ಲ. ಹನುಮಂತನ ಮಾತನ್ನು ಕೇಳಿ ನಿಂತರು. ಕುದುರೆಯೂ ಸಮೀಪ ಬಂದುನಿಂತಿತು! "ಎಷ್ಟು ಒದರಬೇಕೋ ಹನುಮಂತ. ನಾನು ಆ ದಿಬ್ಬ ಏರುವಾಗ .ನಿಮ್ಮ ಮೂವ ರನ್ನು ನೋಡಿ ಒದರಿದೆ. ನಿನಗ ಕೇಳಿಸಲಿಲ್ಲೇನು?........"

"ಶೀನುಕಾಕಾ ನೀನು ಈ ಹೊತ್ತಿನೊಳಗ ಇಲ್ಲೆ ಬರುತ್ತೀ ಎಂದು ನಮಗೆ ಹೇಗೆ ಗೊತ್ತಾಗಬೇಕು?" ಲಕ್ಷ್ಮಿ ಈಗ ಧೈರ್ಯದಿಂದ ಮಾತನಾಡಿ ದಳು.

"ಏನ ಹೇಳಲಿ ಲಕ್ಕಮ್ಮಾ. ನಮ್ಮ ಕೆಲಸ ಅಂದರೇನೆ ಹೀಗೆ........" ಕುದುರೆ ಇಳಿದು ನಿಂತು ಶೀನಪ್ಪನವರು ಮಾತನಾಡತೊಡಗಿದರು. "ಈ ಕುದುರೆ ಏರುವುದು, ಹೀಗೆ ಹೊಲ, ತೋಟ, ಪಟ್ಟಿ ತಿರುಗಾಡುವುದು........ ಉಶ್ಶ್ಯಾಽ............ ಲಕ್ಕಮ್ಮಾ ಈ ದಿನ ಅಂತೂ ಬಹಳೇ ದಣಿವು. ಗದಗಿಗೆ ಹೋಗಿದ್ದೆ. ಅಲ್ಲಿಂದ ಹಾಗೆ ಅಡವಿಸೋಮಾಪೂರ ಮೇಲೆ ಹಾಸಿ, ಈಚಲ ಕೊಳ್ಳದೊಳಗಿಂದ ಹಾಯ್ದು ಬಂದೆ. ಈ ಹಿಂದಿನ ದಿಬ್ಬ ಏರಿ ಬಂದರೆ ಸಮೀ ಪದ ಹಾದಿ........" ಉಶ್ಶ್ಯಾಽ ಎಂದು ಉಸಿರ್ಗರೆದು ಒಂದು ಕ್ಷಣ ಶೀನಪ್ಪ ನವರು ನಿಂತರು. ತರುವಾಯ ಹನುಮಂತನಿಗೆ ಹೇಳಿದರು "ಏ ಹನುಮು, ಕುದುರೆ ಹಿಡಿ. ಇಲ್ಲೆ ಸ್ವಲ್ಪ ಕೂತು ಹೋಗೋಣ. ಲಕ್ಕಮ್ಮಾ, ಸುಂದರಾ ಬರ್ರಿ ಬರ್ರಿ. ಮನಿಗೆ ಹೋಗಿಯಾರೆ ಏನು ಮಾಡುವಿರಿ? ಈ ದಿನ ಶುಕ್ರವಾರ

ಈಗ ವೆಂಕಟೇಶದೇವರ ಗುಡಿಯೊಳಗೆ ಮಂಗಳಾರತಿ ಇದೆ. ಅದನ್ನು ತೀರಿಸಿ ಕೊಂಡೆ ಹೋಗೋಣ........"

ಲಕ್ಷ್ಮಿ ಮತ್ತು ಸುಂದರಾ ಒಂದು ಬಂಡೆಗಲ್ಲಿನ ಮೇಲೆ ಕುಳಿತರು. ಸಮೀಪದ ಬಂಡೆಗಲ್ಲಿನ ಮೇಲೆ ಶೀನಪ್ಪನವರು ಕುಳಿತರು. ಕುದುರೆ ಏರಿ ಬಂದದ್ದರಿಂದ ಅವರ ಮೈ ಬೆವರೊಡೆದಿತ್ತು. ಉಶ್ಯ್ ಎಂದು ಉಸಿರ್ಗರೆ ಯುತ್ತ ತಲೆಯ ಮೇಲಿನ ಟೋಪಿಯನ್ನು ತೆರೆದರು. ಸಂಸ್ಥಾನದ ಥಾಟಿನವ ರಂತೆ ಹಾಕಿದ ಆ ಉದ್ದವಾದ ಶರ್ವಾನಿ ಕೋಟಿನ ಗುಂಡಿಗಳನ್ನು ಒಂದೊಂ ದಾಗಿ ಬಿಚ್ಚತೊಡಗಿದರು. ಶೀನಪ್ಪನವರಿಗೀಗ ೩೬ ವರುಷ. ಆದರೂ ೨೫ ವರುಷದ ಹರೆಯದವರಂತೆ ಅವರು ಎಲ್ಲ ಕಡೆಗೂ ಓಡಾಡುತ್ತಿದ್ದರು. ಅವರಿಗೆ ದಣಿವೇ ಇರುತ್ತಿರಲಲ್ಲ.

"ಶೀನಪ್ಪ, ನೀವು ಗದಗಿಗೆ ಹೋಗಿದ್ದೆ ಎಂದು ಹೇಳಿದಿರಿ. ಅಲ್ಲಿ ಏನು ಕೆಲಸವಿತ್ತು?" ಎಂದು ಸುಂದರಾ ಕೇಳಿದಳು.

ಶೀನಪ್ಪನವರು ತಮ್ಮ ಕಿಸೆಯಲ್ಲಿಯ ಕರವಸ್ತ್ರವನ್ನು ತೆರೆದು ಬೀಸಿಕೊಂ ಡರು. ಒಮ್ಮೆಲೆ ಘುಗ್ಗೆಂದು ಅತ್ತರಿನ ವಾಸನೆ ಬಂದಿತು. ಸುಂದರಾ 'ಹಾ' ಎಂದು ಉಸಿರೆಳೆದುಕೊಂಡಳು. "ಸುಂದರಾ, ಈಗಲಾದರೂ ಗೊತ್ತಾಯಿತೆ ನಾನು ಎಲ್ಲಿ ಹೋಗಿದ್ದೆನೆಂದು? ನಾಟಕ ಕಂಪನಿಯವರು ಊರಿಗೆ ಹೋದರು. ಇಂದು ಮಧ್ಯಾಹ್ನ ಪಾನಸುಪಾರಿ ಮಾಡಿಸಿದ್ದರು - ನನಗೆ...."

"ಕೃಷ್ಟಣ್ಣ ಬಂದಿರಲಿಲ್ಲೇನು?"

"ಅಹುದು, ನಿಮ್ಮ ಅಜ್ಜ ಅವರೆ ನನಗೆ ಹೇಳಿದ್ದು ಹೋಗಲಿಕ್ಕೆ. ವೀರಪ್ಪ ಈ ದಿನ ಮೇಜವಾನಿ ಉತ್ತಮ ಮಾಡಿಸಿದ್ದ! ಪುರೆ, ಶ್ರೀಖಂಡ, ಶಿರ ಎಲ್ಲ ತಿಂದು ತಿಂದು ಮತ್ತೆ ಚೆಲ್ಲಬೇಕಾಯ್ತು. ಗೋವಿಂದರಾಯ ಅಲ್ಲೆ ನಿಂತ ಕೊಂಡ. ಆನಂದರಾಯ ಏನು ಮಾಡುತ್ತಾನೊ ಏನೊ! ಆ ವೀರಪ್ಪನವರ ಜೊತೆಗೆ ಹೋದರೂ ಹೋಗಬಹುದು........"

"ನಾರಾಯಣಕಾಕಾ ಬಂದಿದ್ದಿಲ್ಲೇನು?"

"ಛೀ ಹುಚ್ಚಿ! ನಾರಾಯಣಕಾಕಾ ಬರದೇ ಏನು? ಬಂದಿದ್ದರು. ಆದರ ಅವರ ಜೀವ ಅಲ್ಲೆ ಹೇಗೆ ನಿಂತೀತು ನೋಡು. ಊಟವಾದ ಕೂಡಲೆ ಮನೆಗೆ ಓಡಿ ಬಂಧರು." ವಾಕ್ಯ ಮುಗಿಸುತ್ತ ಅವರು ಲಕ್ಷ್ಮಿಯ ಕಡೆಗೆ

ನೋಡಿದರು.

ಲಕ್ಷ್ಮಿ ಶೀನಪ್ಪನವರ ಕಡೆಗೆ ಹೊರಳಿ ನೋಡಿದಳು. ಅವಳ ಕಣ್ಣುಗಳಲ್ಲಿ ಏನೋ ಮೋಹಕತೆ ಕಂಡುಬಂದಿತು. ಶೀನಪ್ಪನವರು ಹೇಳಿದರು "ಅಂತೂ ಲಕ್ಕಮ್ಮಾ. ಅತ್ತೆಯ ಮನೆಗೆ ಬಂದ ಮೇಲೆ ಸುಧಾರಿಸಿರುವಿ. ಸುಂದರಾ, ಇವಳನ್ನು ನಿನಗಿಂತ ಚಿಕ್ಕವಳಿರುವಾಗ ನೋಡಿದ್ದೇನೆ. ಇನ್ನೂ ಆಗ ಪರಕಾರ ಉಟ್ಟುಕೊಂಡು ಓಡಾಡುತ್ತಿದ್ದಳು. ಎಷ್ಟು ಬಡಕಲಾಗಿದ್ದಳು! ಅಷ್ಟೇ ಏಕೆ, ಮೊನ್ನೆ ಮೊನ್ನೆ ಲಗ್ನವಾಗುವುದಕಿಂತ ಮುಂಚೆ...........ಎಷ್ಟು ತೆಳ್ಳಗಿದ್ದಳು! ಈಗ ಹೇಗೆ ಆಗಿದ್ದಾಳೆ ನೋಡು ಒಂದು ತಿಂಗಳಲ್ಲೆ! ಮುಖ್ಯ ಹೆಂಗಸರಿಗೆ ಮೈಮೇಲೆ ಭಂಗಾರ ಬೇಕು. ಅಂದರೆ ಭಂಗಾರದಂತೆ ಕಾಣಿಸುತ್ತಾರೆ. ಎಲ್ಲೆ ನೋಡೋಣ. ಕೈಯಲ್ಲಿಯ ಆಭರಣಗಳು ಹೇಗೆ ಹೇಗೆ ಇವೆ?"

ಲಕ್ಷ್ಮಿಗೆ ಶೀನಪ್ಪನವರ ಪರಿಚಯ ಎಷ್ಟೋ ದಿನಗಳಿಂದ ಇದ್ದುದು. ಅವಳು ತನ್ನ ಎರಡೂ ಕೈ ಮುಂದೆ ಮಾಡಿದಳು. ಶೀನಪ್ಪನವರು ಅವಳ ಕೈಗಳನ್ನು ಹಿಡಿದು, ಆ ಭಂಗಾರದ ಬಿಲವಾರಗಳ ಮೇಲೆ ಕೈಯಾಡಿಸುತ್ತ ಹೇಳಿದರು "ಛೇ, ಈ ಮಬ್ಬುಗತ್ತಲಲ್ಲಿ ಏನೂ ಸ್ಪಷ್ಟ ತಿಳಿಯುವದಿಲ್ಲ. ಮನೆಯಲ್ಲಿ ಬೆಳಕಿನಲ್ಲಿ ತೋರಿಸು. ನೋಡು ಲಕ್ಕಮ್ಮಾ ಈ ವಾಡೆಯಲ್ಲಿಯ ಬಹಳ ಕೆಲಸದ ಮೂಲಕ ಇಷ್ಟು ದಿವಸವಾದರೂ, ನಿನ್ನ ಈ ಆಭರಣ ನೋಡುವುದೂ ಸಹ ನನ್ನಿಂದ ಆಗಿದ್ದಿಲ್ಲ..........." ಮತ್ತೆ ಏನೋ ನೆನಪು ಮಾಡಿಕೊಳ್ಳುವವರಂತೆ ಶೀನಪ್ಪ ತಮ್ಮ ತಲೆಯ ಮೇಲೆ ಕೈಯಾಡಿಸಿಕೊಂಡು ಕೇಳಿದರು "ಮರೆತೆ. ಲಕ್ಕಮ್ಮಾ ಈ ಸುಂದರಾಳನ್ನು ಕರೆದುಕೊಂಡು ಇಲ್ಲಿಗೆ ದಿಬ್ಬದ ಮೇಲೆ ಏಕೆ ಬಂದಿದ್ದಿ? ಈ ಪ್ರಶ್ನೆಯನ್ನು ನಾನು ಮೊದಲೇ ಕೇಳಬೇಕೆಂದಿದ್ದೆ. ತಲೆಯಲ್ಲಿ ನೂರೆಂಟು ವಿಚಾರ! ಮರೆತೇ ಬಿಟ್ಟಿದ್ದೆ. ಏಕೆ ಬಂದಿದ್ದಿರಿ?"

"ಆ ನಮ್ಮ ದಿನ್ನಿದೇವರಿಗೆ..........." ಛಟ್ಟನೆ ಹನುಮಂತ ಉತ್ತರ ಕೊಟ್ಟ. ತನ್ನ ತಪ್ಪನ್ನು ತಾನೆ ನೆನೆದು, ಮುಂದೆ ಮಾತನಾಡದೆ ಬಾಯಿಯ ಮೇಲೆ ಕೈಯಿಟ್ಟುಗೊಂಡ. ಲಕ್ಷ್ಮಿ ಯಾರ ಮುಂದೆ ಹೇಳಬಾರದೆಂದು ಅವನಿಗೆ ಮೊದಲೆ ಹೇಳಿದ್ದಳು.

"ಹಾಂ!......." ಆಶ್ಚರ್ಯದಿಂದ ಶೀನಪ್ಪನವರು ಸುಂದರಾ ಮತ್ತು ಲಕ್ಷ್ಮಿಯವರ ಕಡೆಗೆ ನೋಡಿದರು. "ಆ ಸ್ಥಳಕ್ಕೆ ಏಕೆ ಹೋಗಿದ್ದಿರಿ? ಏ ಹನುಮ, ನೀನಾದರೂ ಹೇಳಬಾರದೇನೋ?.......... ಲಕ್ಕಮ್ಮಾ, ಅಲ್ಲೆ ದೇವರೇನೋ ಇದ್ದಾನೆ. ಜನರು ಏನೇನೋ ಬೇಡಿಕೊಳ್ಳಲಿಕ್ಕೆ ಅಲ್ಲಿಗೆ ಹೋಗುತ್ತಿರುತ್ತಾರೆ. ಆದರೆ ಅದು ನೋಡು.......!"

ಶೀನಪ್ಪನವರು ಮುಂದಿನಸಂಗತಿ ಹೇಳದೆ ಅಲ್ಲಿಗೇ ತಡೆದರು. "ಸಾಹೇಬ ಚಿಕ್ಕಬಾಯಿಯವರು ಈ ಊರು ನೋಡಿದ್ದಿಲ್ಲ. ಏನೋ ನೋಡುತ್ತೇನೆ ಅಂದರು. ಕರೆದುಕೊಂಡು ಹೋಗಿದ್ದೆ......." ಎಂದು ಹನುಮಂತ ತನ್ನ ಮಾತಿನ ರೀತಿಯನ್ನು ಸುಧಾರಿಸಿಕೊಂಡ.

ದೇವಾಲಯದ ಕಡೆಗೆ ನಡೆದಿರುವಾಗ ಶೀನಪ್ಪನವರು ಲಕ್ಷ್ಮಿಗೆ ಹೇಳಿದರು "ಸಂಜೆ ಹೊತ್ತಿನಲ್ಲಿ ಅಲ್ಲಿಗೆ ಹೋಗಬೇಡ. ಅದು ಕೆಟ್ಟ ಸ್ಥಳ. ಯಾರಾದರೂ ವೇಷ ಹಾಕಿಕೊಂಡು ಬರುತ್ತಿರುತ್ತಾರೆ......."

ಲಕ್ಷ್ಮಿಗೆ ಮೊದಲಿನ ಭಯ ಮತ್ತೆ ಉತ್ಪನ್ನವಾಯಿತು. ಅವಳು ಮುಂದೆ ವಿಶೇಷ ಸುದ್ದಿ ಕೇಳಬೇಕೆಂಬುವಷ್ಟರಲ್ಲಿಯೆ, ಬಲಬದಿಯ ವಾಡೆಗೆ ಹೋಗುವ ಅಗ್ರಹಾರದ ಓಣಿಯಲ್ಲಿ ಏಳೆಂಟು ಜನರ ಗದ್ದಲ ಕೇಳಬಂದಿತು. ಆ ಗದ್ದಲದಲ್ಲಿ ಒಂದು ಧ್ವನಿ ಜೋರಾಗಿ ಕೇಳಿಸುತ್ತಿದ್ದಿತು. "ನಡಿ ಹುಚ್ಚ, ಮನೆಗೆ ನಡಿ. ನಿನಗೆ ಎಷ್ಟು ಹೇಳಿದರೂ ತಿಳಿಯುವದಿಲ್ಲ. ನಡಿ ಮನೆಗೆ ಹುಚ್ಚಪ್ಪ...."

ಆ ಧ್ವನಿಯ ಗುರುತು, ಶೀನಪ್ಪನವರಿಗೆ ಒಮ್ಮೆಲೆ ಗೊತ್ತಾಯಿತು. ಲಕ್ಷ್ಮಿ ಮತ್ತು ಸುಂದರಾ ಅವರಿಗೆ ಹನುಮಂತನ ಜೋಡು ಮಾಡಿಕೊಟ್ಟು, ಮುಂದೆ ದೇವಾಲಯಕ್ಕೆ ಹೋಗಲು ಹೇಳಿ, ತಾವು ಅಗ್ರಹಾರದ ಓಣಿಯತ್ತ ಸಾಗಿದರು.

ಲಕ್ಷ್ಮಿಯ ಮನಸ್ಸು ದೇವಾಲಯದತ್ತ ಇರಲಿಲ್ಲ. ಅಗ್ರಹಾರದ ಓಣಿಯಲ್ಲಿಯ ಗದ್ದಲದ ಕಡೆಗೆ ಅವಳ ಲಕ್ಷ್ಯ ಓಡಿಹೋಗಿತ್ತು! ಅಲ್ಲಿ ನಡೆದ ಮಾತುಗಳ ತೆರೆಗಳು ಅವಳ ಕಿವಿಯ ಮೇಲೆ ಬಂದು ಅಪ್ಪಳಿಸಿದವು.

ಆ ಎತ್ತರದ ಧ್ವನಿ ಮತ್ತೆ ಕೇಳಿಸಿತು "ನಿನಗೆ ಆ ಶೀನಪ್ಪನವರೇ ಬೇಕು. ಅವರು ಬಂದರೆ ಬೆಕ್ಕಿನಹಾಗೆ ಮೆತ್ತಗಾಗುತ್ತೀ. ನಡೆ ಮನೆಗೆ ಹುಚ್ಚ......."

# ೮

ವಸಂತ ಮಾಸವು ಹೋಗಿ ಬೇಸಗೆ ಬಂದಿತು. ಬಯಲು ಸೀಮೆಯ ಭೂಮಿಯೆಲ್ಲವೂ ಬಯಲು ಬಯಲಾಗಿತ್ತು. ಆನಂದವನ್ನುಂಟು ಮಾಡುವ ಹಸಿರು ನೆಲವಿರಲಿಲ್ಲ. ಶಕೆಯನ್ನು ಕಡಿಮೆ ಮಾಡಲು ತಂಗಾಳಿ ಇರಲಿಲ್ಲ. ಎಲ್ಲವೂ ಒಣ ಒಣ.

ಲಕ್ಷ್ಮಿಯ ಮನಸ್ಸೂ ಹೊರಗಿನ ವಾತಾವರಣದಂತೆಯೆ ಆಗಿತ್ತು. ಹೊರಗೆ ಶಕೆ. ಹೃದಯದಲ್ಲಿಯೂ ಶಕೆ. ಮನೆಯಲ್ಲಿಯ ಚಿಕ್ಕಪುಟ್ಟ ಸಂಗತಿಗಳು ಅವಳಿಗೆ ಬಹಳ ಅಸಮಾಧಾನವನ್ನುಂಟು ಮಾಡಿದವು. ತನ್ನ ಪತಿಯಿಂದ ಯಾವ ರೀತಿಯಿಂದಲೂ ಸುಖವಿರಲಿಲ್ಲ; ಆ ಮಾತು ಬೇರೆ, ಅದಲ್ಲದೆ ಮನೆಯೊಳಗೆ, ಹೊರಗೆ ತನ್ನ ಪತಿಯನ್ನು ತಾನು ಎದುರಿಗಿಲ್ಲದಿರುವಾಗ, ಜನರು ಬೇಕಾದದ್ದು ಅನ್ನುತ್ತಿದ್ದರು. ಮೈದುನರಾದ ಗೋವಿಂದರಾಯರಂತೂ ಮಾತು ಮಾತಿಗೆ ನಾರಾಯಣರಾಯರಿಗೆ 'ಹುಚ್ಚ' ಎನ್ನದ ಹೊರತು, ತಲೆಗೆ ಹೊಡೆಯದ ಹೊರತು ಮಾತನಾಡುತ್ತಿರಲಿಲ್ಲ. ಗೋವಿಂದರಾಯರ ಹೆಂಡತಿ ಸೀತಕ್ಕ ಲಕ್ಷ್ಮಿಯ ಬೆನ್ನ ಹಿಂದೆ ಸಿಕ್ಕಾಪಟ್ಟೆ ಬೈಯುತ್ತಿದ್ದರು— "ಬಡವರ ಹೆಣ್ಣು! ಬೇಡ, ಬೇಡ ಎಂದು ಹೇಳಿದೆ. ಎಲ್ಲ ಶೀನಪ್ಪನವರ ಕೆಲಸ! ಮುದ್ದಾಂ ತಮ್ಮ ಊರಿನ ಹೆಣ್ಣನ್ನೆ ತಂದಿದ್ದಾರೆ. ನಾಳೆ ಏನಾದರೂ...........! ಇವಳ ಕಾಲ್ಗುಣ ನೋಡಿರಿ..........." ಸೀತಕ್ಕ ಆಡಿಕೊಳ್ಳುವ ಈ ಮಾತುಗಳನ್ನು ದೂರಿಂದ ಮರೆಯಾಗಿ ನಿಂತು ಲಕ್ಷ್ಮಿ ಕೇಳಿದ್ದಳು. ಈ ಎಲ್ಲ ಸುದ್ದಿಯನ್ನು ಶೀನಪ್ಪನವರ ಮುಂದೆ ಹೇಳಬೇಕೆ? ಅವರ ಬಗ್ಗೆಯೂ ಲಕ್ಷ್ಮಿಗೆ ಏನೋ ಹೆದರಿಕೆ! ಅವಳು ಏನಾದರೂ ಮಾತು ತೆಗೆದರೆ "ಎಲ್ಲೆ ನಿನ್ನ ಕೈಯಲ್ಲಿಯ ಆಭರಣ ನೋಡೋಣ. ಕಿವಿಯಲ್ಲಿಯ ಬೆಂಡವೋಲೆ ನೋಡೋಣ........" ಅನ್ನುತ್ತ ಮೈ ಕೈ ಮುಟ್ಟಿಯೆ ಮಾತನಾಡಿಸುತ್ತಿದ್ದರು. ಅವರ ಹೆಂಡತಿ, ಎರಡು ಮಕ್ಕಳು, ತಮ್ಮ ಊರಾದ ಮುರನಾಳದಲ್ಲಿದ್ದರೂ, ಕಳಸಾಪೂರದಲ್ಲಿ ಅವರು ಮನೆಯನ್ನೆ ಮಾಡಿರಲಿಲ್ಲ. ಏಕೆ? ಏನೇನೊ ಲಕ್ಷ್ಮಿಯ ತಲೆಯಲ್ಲಿ ವಿಚಾರಗಳು ಬಂದು ತಲೆ ಬಹಳ ಜಡವಾಗುತ್ತಿತ್ತು. ಕಳಸಾಪೂರಕ್ಕೆ ಬಂದ

ಮೂರು ತಿಂಗಳಲ್ಲಿಯೆ ಅವಳು ಅನೇಕ ವಿಷಯಗಳ ಬಗ್ಗೆ ವಿಚಾರ ಮಾಡಬೇಕಾಯಿತು. ಹದಿನೈದು ವರುಷದ ಹುಡಿಗೆ! ಈ ಸಮಸ್ಯೆಗಳನ್ನು ಅವಳು ಹೇಗೆ ಬಿಡಿಸಬೇಕು? ತನ್ನ ದುಃಖವನ್ನು ಯಾರ ಮುಂದೆ ತೋಡಿಕೊಳ್ಳಬೇಕು? ಜೀವನದಲ್ಲಿ ತಾಯಿಯ ಅವಶ್ಯಕತೆ ಎಷ್ಟಿದೆಯೆಂಬುದು ಅವಳಿಗೆ ಬಹಳವಾಗಿ ಅನಿಸಹತ್ತಿತು. ತನ್ನ ತಂದೆಯ ಮುಂದೆ ಎಲ್ಲ ಗುಟ್ಟನ್ನು ರಟ್ಟಾಗಿ ಮಾಡಿ ಹೇಳಬೇಕೆ?

ಸಂಜೀವರಾಯರಿಂದ ಬಂದ ಒಂದು ಪತ್ರವನ್ನು ಶೀನಪ್ಪನವರು ತಂದು ಕೊಟ್ಟು ಹೋಗಿದ್ದರು. ಸಂಜೀವರಾಯರು ತಮ್ಮ ಪತ್ರದಲ್ಲಿ "ಲಕ್ಷ್ಮೀ, ನೀನು ಚೆನ್ನಾಗಿರುವಿಯೆಂದೂ ಪ್ರಕೃತಿಯಲ್ಲಿಯೂ ಸಹ ಬಹಳ ಸುಧಾರಿಸಿರುವಿಯೆಂದೂ ಶೀನಪ್ಪನವರು ತಿಳಿಸಿದ ಸುದ್ದಿ ಓದಿ ನನಗೆ ಅತ್ಯಂತ ಸಂತೋಷವಾಗಿದೆ. ಅಂತೂ ದೇವರು ನಿನಗೆ ಬಹಳ ಕಲ್ಯಾಣ ಮಾಡಿದ. ನನ್ನ ಚಿಂತೆಯನ್ನು ದೂರ ಮಾಡಿದ" ಎಂದು ಬರೆದಿದ್ದರು. ಚಿಂತೆಯನ್ನು ದೂರ ಮಾಡಿಕೊಂಡ ತಂದೆಗೆ ಮತ್ತೆ ಈ ಸುದ್ದಿಯನ್ನು ಹೇಳಬೇಕೆ? ಮುದುಕನಾದವನಿಗೆ ಮತ್ತೆ ತೊಂದರೆ ಕೊಡಬೇಕೆ?

ಆ ದಿನ ರಾತ್ರಿ ಎಲ್ಲವನ್ನು ನೆನೆದು ಲಕ್ಷ್ಮಿ ಬಿಕ್ಕಿಸಿ ಬಿಕ್ಕಿಸಿ ಅತ್ತಳು. ಅವಳಿಗೆ ತನ್ನ ದುಃಖವನ್ನು ತಡೆದುಕೊಳ್ಳುವುದು ಸಾಧ್ಯವಾಗಲಿಲ್ಲ. ಅವಳ ಸುಂದರವಾದ ಗಲ್ಲಗಳ ಮೇಲೆ, ದುಃಖದ ಬಿಸಿ ಹನಿಗಳು ಉರುಳುರುಳಿ ಹೋದವು.

ಜೀವನದಲ್ಲಿ ಯಾರಿಗೆ ಶರಣು ಹೋಗಬೇಕು? ಆ ಜೋಗಿತಿಯ ಮಂತ್ರೋಪಾಯವನ್ನು ಬಿಟ್ಟುಬಿಟ್ಟಿದ್ದಳು. ಏನೋ ಭಯವೆನಿಸುವದರಿಂದ ಆ ಯಂತ್ರವನ್ನು ಕಟ್ಟಿ ಅವಳು ಒಳಗೇ ಇಟ್ಟಿದ್ದಳು. ಇನ್ನೇನು ಮಾಡಬೇಕು?

ವೆಂಕಟೇಶದೇವರ ಫೋಟೊ ಒಂದು ಕೋಣೆಯಲ್ಲಿ ಇದ್ದಿತು. ಅದರ ಎದುರು ಸಮೆಯ ದೀಪವನ್ನು ಹೊತ್ತಿಸಿದಳು. ದೇವರ ಎದುರಿಗೆ ಕೈಮುಗಿದು ಕುಳಿತು, ಬಿಕ್ಕಿಸಿ ಬಿಕ್ಕಿಸಿ ಅಳುತ್ತಿರುವಾಗ "ನೀನೆ ದಯಾನಿಧಿ; ನಿನಗೇ ನಾನು ಶರಣಾಗತಳಾಗುತ್ತೇನೆ" ಎಂಬುವಂತೆ ಅವಳ ಭಾವವಿತ್ತು.

ಪ್ರತಿದಿನವೂ ರಾತ್ರಿಯಲ್ಲಿ ಅವಳು ಹೀಗೆ ದೇವರೆದುರು ಕೂಡಹತ್ತಿದಳು. ಅವಳ ಕಣ್ಣುಗಳಲ್ಲಿ ಕಂಬನಿ ಉದುರುತ್ತಿದ್ದವು. ಅವಳ ತಾಯಿ ಹೇಳಿಕೊಟ್ಟ ಹಾಡನ್ನು ಸ್ಮರಿಸಿ, ಅದನ್ನು ಹಾಡಹತ್ತಿದಳು.

ಎಂದಿಗಾಗುದೊ ನಿನ್ನ ದರುಶನ
ಅಂದಿಗಲ್ಲದೆ ಬಂಧ ನೀಗದೋ ||೧||
ಯಾರಿಗೆ ಮೊರೆಯಿಡಲೊ ದೇವನೆ
ಸಾರಿ ಬಂದು ನೀ ಕಾಯೊ ಬೇಗನೆ ||೨||

ಲಕ್ಷ್ಮಿ ಬಿಕ್ಕಿಸಿ ಬಿಕ್ಕಿಸಿ ಅಳುವ ಧ್ವನಿ ನಾರಾಯಣರಾಯರಿಗೆ ಕೇಳಿಸುತ್ತಿತ್ತು. ಹಾಸಿಗೆಯ ಮೇಲೆ ಎದ್ದು ಕೂಡುತಿದ್ದರು. ಅವಳನ್ನೆ ನಿಟ್ಟಿಸಿ ನೋಡುತ್ತಿದ್ದರು. "ಅವಳು ಏಕೆ ಅಳುತ್ತಿರಬೇಕು?" ಈ ವಿಚಾರ ಅವರ ತಲೆಯಲ್ಲಿ ಬರುತ್ತಿದ್ದಿತು. ಏನೋ ಅವರಿಗೂ ಕೆಡುಕೆನಿಸಹತ್ತಿತು. ಲಕ್ಷ್ಮಿ ಕಣ್ಣೀರುಗಳನ್ನು ಸುರಿಸಿ, ಹಾಡುತ್ತ ಕುಳಿತದ್ದು ಆ ದಿನ ನೋಡಿದರು. ಸಾವಧಾನವಾಗಿ ಹಾಸಿಗೆಯಿಂದ ಎದ್ದು ಹೋದರು. ಮೆಲ್ಲಗೆ ಮೆಲ್ಲಗೆ ಹೆಜ್ಜೆಗಳನ್ನಿಡುತ್ತ ಅವಳ ಬೆನ್ನ ಹಿಂದೆ ಹೋದರು. ಅವಳ ಬೆನ್ನ ಬಳಿಯೇ ಕುಳಿತು, ತಾವೂ ದೇವರ ಭಾವಚಿತ್ರದ ಕಡೆಗೆ ನೋಡಿದರು. ಲಕ್ಷ್ಮಿಯ ಹಾಡು ಮುಗಿಯುವಾಗ, ನಾರಾಯಣರಾಯರು ಅವಳ ಹೆಗಲ ಮೇಲೆ ಕೈಯಿಟ್ಟದ್ದರು. ಅವರ ಕಣ್ಣುಗಳೂ ನೀರುದುಂಬಿದ್ದವು.

ಲಕ್ಷ್ಮಿಯ ಬೆನ್ನಮೇಲೆ ಕೈಯಾಡಿಸುತ್ತ "ನೀನು ಏಕೆ ಅಳುವೆ?" ಎಂದು ಕೇಳಿದರು.

ನಾರಾಯಣರಾಯರು ತಾವಾಗಿಯೆ ಎದ್ದುಬಂದು ಈ ರೀತಿ ಪ್ರಶ್ನೆ ಕೇಳಿದ್ದಕ್ಕೆ ಲಕ್ಷ್ಮಿಗೆ ಏನೋ ಅಪೂರ್ವ ಸಂತೋಷವೆನಿಸಿತು. ಅದು ದೇವರ ಕೃಪೆಯೆಂದೇ ಅವಳು ಭಾವಿಸಿದಳು. ತನ್ನ ಪತಿಯನ್ನು ತೊಡೆಯ ಮೇಲೆ ಮಲಗಿಸಿಕೊಂಡಳು. ನಾರಾಯಣರಾಯರು ಮತ್ತೆ ಕೇಳಿದರು "ನೀನು ಏಕೆ ದಿನಾಲು ಅಳುತ್ತಿರುವೆ?" ಎಂದು.

ನಾರಾಯಣರಾಯರ ತಲೆಯ ಮೇಲೆ ಕೈಯಾಡಿಸುತ್ತ ಲಕ್ಷ್ಮಿ ಹೇಳಿದಳು "ನಿಮಗಾಗಿ........"

"ನನಗಾಗಿ!!" ನಾರಾಯಣರಾಯರು ಚಟಕ್ಕನೆ ಎದ್ದು ಕುಳಿತು ಲಕ್ಷ್ಮಿಯನ್ನು ಕೇಳಿದರು. ಏನೋ ತಪ್ಪುಗಾರನಂತೆ ಅವರು ಲಕ್ಷ್ಮಿಯ ಕಡೆಗೆ ನೋಡಹತ್ತಿದರು. ಮತ್ತೆ ಮತ್ತೆ "ನನಗಾಗಿ!!" ಎಂದು ಉಚ್ಚರಿಸಿದರು.

"ಅಹುದು! ನೀವು ನನ್ನನ್ನು ಕೈಬಿಡುವಿರೆಂದು!............ ಹೇಳಿರಿ.

ನೀವು ನನ್ನ ಕೂಡ ಏಕೆ ಮಾತನಾಡುವದಿಲ್ಲ?"

ಲಕ್ಷ್ಮಿಯ ಈ ಪ್ರಶ್ನೆ ನಿಜವಾದುದೆಂದು ನಾರಾಯಣರಾಯರಿಗೆ ತೋಚಿತು. ತಮ್ಮ ಮನಸ್ಸಿನಲ್ಲಿದ್ದುದನ್ನು ಹೇಳಿಬಿಡಬೇಕೆಂದು ನಾರಾಯಣ ರಾಯರು ಒಂದೊಂದೆ ಶಬ್ದದಿಂದ ಮಾತನಾಡತೊಡಗಿದರು. "ನೋಡು.... ಮಾತನಾಡಬಾರದು ಎಂದು ಅಪ್ಪಣೆ...."

"ಯಾರದು ಅಪ್ಪಣೆ?" ಲಕ್ಷ್ಮಿಯು ಕೇಳಿದಳು.

"ನಾನು....ಆ ಶೀನಪ್ಪ!........ಅಬ್ಬಾ!........ಅವರು ಹೇಳಿದ ಮಾತು ಏನೂ ಮೀರುವ ಹಾಗೇ ಇಲ್ಲ........ಅವರೇ ಹೇಳಿದ್ದರು........ನೀನು ಮಾತ ನಾಡಬೇಡ........ನೀನು ಮಾತನಾಡಬೇಡ........ಸುಮ್ಮನೇ ಇರಬೇಕು........ ತಿಳಿಯಿತೋ ಇಲ್ಲೋ........ಸುಮ್ಮನೆ ಇರು........"

ನಾರಾಯಣರಾಯರಿಗೆ ಶೀನಪ್ಪನವರು ಒಂದು ಚಬುಕದಂತೆ ಇರುವ ರೆಂಬುದು ಲಕ್ಷ್ಮಿಗೆ ಗೊತ್ತಾಯಿತು. ನಾರಾಯಣರಾಯರು ಮತ್ತೆ ತಾವೇ ಮಾತನಾಡತೊಡಗಿದರು, "ಈಗ ತಿಳಿಯಿತೇನು ನಿನಗೆ? ಆ್ಞ?........... ಮತ್ತೆ ನಿನಗೆ ಆ ಗೋವಿಂದನದು ಗೊತ್ತೇನು?........"

"ಗೊತ್ತಿರದೆ ಏನು? ನಿಮ್ಮ ಅಣ್ಣ........" ಎಂದು ಲಕ್ಷ್ಮಿ ಹೇಳಿದಳು.

"ಅಯ್ಯೋ! ಎಲ್ಲಿ ಅಣ್ಣ?? ನನಗೆ ಬಹಳ ಚಿವುಟುತ್ತಾನೆ. ನನಗೆ ಬಹಳ ಬೈಯುತ್ತಾನೆ! ನನಗೆ ಹುಚ್ಚ ಎಂದು ಏಕೆ ಕರೆಯಬೇಕು? ಶೀನಪ್ಪ ಕರೆಯಲಿ! ಅವರು ದೊಡ್ಡವರು. ತಾನೂ ಏಕೆ ನನ್ನನ್ನು ಕರೆಯಬೇಕು?" ಸಣ್ಣ ಹುಡುಗರು ತಾಯಿಯ ಎದುರಿಗೆ ಚಾಡಿಯನ್ನು ಹೇಳುವಂತೆ ನಾರಾಯ ಣರಾಯರು ಮಾತನಾಡುತ್ತಿದ್ದರು. ಲಕ್ಷ್ಮಿ ಶಾಂತಚಿತ್ತದಿಂದ ಅವರ ಮಾತು ಗಳನ್ನು ಕೇಳುತ್ತ "ನೀವು ಮೊನ್ನೆ ಗದಗಿನಿಂದ ಬರುವಾಗ ಏನು ಮಾಡಿದಿರಿ ಗೋವಿಂದರಾಯರಿಗೆ?"

"ಹೂಂ! ನೋಡವಾ ನೀನೆ! ಹಾದಿಯೊಳಗ ಲಮಾಣಿ ತಾಂಡೆ ಇತ್ತು. ನಿಂತಕೊಂಡಿವಿ. 'ಯಾಕ ನಿಂತಕೊಂಡಿ?' ಅಂತ ನನಗೇ ಹೊಡೆದ. 'ಲಮಾಣಿ ಹೆಂಗಸರ ಕಡೆಗೆ ಯಾಕೆ ನೋಡತೀ?' ಅಂತ ನನಗೆ ಬಡಿದ. ಮಹಾರಾಯ, ದೆವ್ವ ಇದ್ದಂತೆ ಇದ್ದಾನೆ. ನೋಡು, ಎಲ್ಲಾ ತಪ್ಪು ನನ್ನ ಮೇಲೆ ಹಾಕಿದ. ನನಗೆ ಹುಚ್ಚ ಅನ್ನುತ್ತಾರೆ. ಪ್ರತಿಯೊಂದಕ್ಕೂ ನನಗೇ ಬೈಯು

ತ್ತಾರೆ. ನೋಡು, ಅವರು ಆ ದಿನ ಏನು ಮಾಡಿದರು ಗೊತ್ತಿದೆ ಏನು ?.... ಲಮಾಣಿ ಜನ ಏನೋ ತಂದು ಕೊಟ್ಟಿತು. ಅಲ್ಲಿ ಗಿಡದ ಮರೆ ನಿಂತುಕೊಂಡು ಈ ಗೋವಿಂದ, ಇವನ ಗೆಳೆಯರು ಎಲ್ಲರೂ ಕುಡಿದರು........"

ನಾರಾಯಣರಾಯರು ಇಷ್ಟು ಸ್ಪಷ್ಟವಾಗಿ ಮಾತನಾಡುವದನ್ನು ಕೇಳಿ ಲಕ್ಷ್ಮಿಗೆ ಆಶ್ಚರ್ಯವೆನಿಸತೊಡಗಿತು. ತನ್ನದು ನನಸೋ ಕನಸೋ ಅವಳಿಗೆ ತಿಳಿಯದಂತೆ ಆಯಿತು. ೫–೬ ಸಲ ರೆಪ್ಪೆಗಳನ್ನು ಮುಚ್ಚಿ ತೆರೆದು ನೋಡಿದಳು. ಸರಿ, ಎಲ್ಲವೂ ಸತ್ಯದಂತೆಯೇ ಕಾಣಿಸಿತು. ನಾರಾಯಣರಾಯರ ಮಾತುಗಳನ್ನೆಲ್ಲ ತಿಳಿದುಕೊಂಡ ಮೇಲೆ ಲಕ್ಷ್ಮಿ ಹೇಳಿದಳು. "ನನ್ನ ಕಣ್ಣೀರು ನೀವೆ ಒರಸಿರಿ" ಎಂದು. ನಾರಾಯಣರಾಯರು ಅವಳು ಹೇಳಿದಂತೆ ಮಾಡಿದರು. "ದೇವರಿಗೆ ನಮಸ್ಕಾರ ಮಾಡಿರಿ" ಎಂದಳು. ಅವರು ಹಾಗೆಯೆ ಮಾಡಿದರು. "ಶೀನಪ್ಪನವರನ್ನು, ಗೋವಿಂದರಾಯರನ್ನು ಮರೆತು ಬಿಡಿರಿ. ಇನ್ನು ನಾನು ಹೇಳಿದಂತೆ ಕೇಳುವಿರಾ?" ಎಂದು ಕೇಳಿದಳು. ಅದಕ್ಕೂ ನಾರಾಯಣರಾಯರು 'ಹೂಂ' ಎಂದು ಗೋಣುಹಾಕಿದರು.

* * * *

ನಾರಾಯಣರಾಯರು ಲಕ್ಷ್ಮಿಗೆ ವಶವಾದ ಮರುದಿನ ಒಂದು ಚಿಕ್ಕ ಘಟನೆಯು ವಾಡೆಯಲ್ಲಿ ಸಂಭವಿಸಿತು.

ಕಳಸಾಪೂರ ದಿಬ್ಬದಿಂದ ದಕ್ಷಿಣಕ್ಕೆ ಇಳಿದು ಕಾಲ್ವಾರಿಯಿಂದ ಎರಡು ಮೈಲು ನಡೆದು ಹೋದ ಮೇಲೆ, ಒಂದು ತೋಟದ ಮೂಲೆಯಲ್ಲಿ ಒಂದು ಚಿಕ್ಕ ಗುಡಿಸಲು ಇದೆ. ಅಲ್ಲಿರುವ ಮುದುಕಪ್ಪನಿಗೆ ಹಣದ ಅಡಚಣಿಯಾಗಿತ್ತು. ಜೋಗಿತಿಯ ವೇಷದಿಂದ ಓಡಾಡುವ ಅವನ ಹೆಂಡತಿಯು ಲಕ್ಷ್ಮಿಯ ಕಡೆಯಿಂದ ಇಸಿದುಕೊಂಡು ಬಂದ ಹಣವು ತೀರಿದ್ದಿತು. ವಾಡೆಗೆ ಹೋಗಿ ಹೇಗಾದರೂ ಮಾಡಿ ಹಣವನ್ನು ತಂದೇತೀರಬೇಕೆಂದು ಮುದುಕಪ್ಪನು ಒಂದು ಬೆಕ್ಕಿನ ಮರಿ, ಒಂದೆರಡು ನಾಯಿಯ ಮರಿ, ಗಿಳಿಮರಿ ಇವುಗಳನ್ನೆಲ್ಲ ಹಿಡಿದುಕೊಂಡು ವಾಡೆಯ ಹಿಂದಿನ ಬಾಗಿಲಿಗೆ ಬಂದನು. ನಾರಾಯಣರಾಯರಿಗೆ ಈ ಚಿಕ್ಕ ಪ್ರಾಣಿಗಳ ಮೇಲೆ ಪ್ರೀತಿ ಬಹಳ. ಅವುಗಳನ್ನು ನೋಡುತ್ತ ಖಿಕ್

ಖಿಕ್ ಎಂದು ನಗುತ್ತಿದ್ದರು. ಶೀನಪ್ಪನವರ ಕಡೆಗೆ ಹೋಗಿ ‘ ನನಗೆ ಅವು ಬೇಕು ’ ಎಂದು ಹಟ ಮಾಡತೊಡಗಿದರು—ಸಣ್ಣ ಹುಡುಗನ ಹಾಗೆ! ಶೀನಪ್ಪನವರಿಗೆ ಇದು ಅಸಹ್ಯವೆನಿಸಿತು. ನಾರಾಯಣರಾಯರನ್ನು ಸಿಕ್ಕಾಪಟ್ಟೆ ಬಯ್ದರು. “ ಮದುವೆಯಾದರೂ ನಿನಗೆ ಬುದ್ಧಿ ಬರಲಿಲ್ಲ ” ಎಂದರು. ಆ ಮುದುಕಪ್ಪನಿಗೂ ‘ ಮನೆಯಲ್ಲಿ ಇನ್ನು ಕಾಲಿಡಬೇಡ ’ ಎಂದು ಗರ್ಜಿಸಿದರು. ಮನೆಯಲ್ಲಿ ಈ ರೀತಿ ಬದಲಾವಣೆ ಆದುದನ್ನು ನೋಡಿ ಮುದುಕಪ್ಪನು ಗಾಬರಿಯಾದನು. ಅಲ್ಲಿಂದ ಕಾಲು ಕಿತ್ತಿದನು.

ಇದೇ ಹೊತ್ತಿಗೆ ಜೋಗಿತಿಯೂ ಹಿತ್ತಲ ಭಾಗದ ಕಡೆಗೆ ಲಕ್ಷ್ಮಿಯನ್ನು ಭೆಟ್ಟಿಯಾಗಲು ಬಂದಿದ್ದಳು. “ ನಿನ್ನ ಮಂತ್ರವೇನೂ ಅಷ್ಟು ಉಪಯೋಗವಾಗಲಿಲ್ಲ ” ಎಂದು ಸಣ್ಣ ಧ್ವನಿಯಲ್ಲಿ ಲಕ್ಷ್ಮಿ ಹೇಳಿದಳು. ಹಾಗಾದರೆ ಇನ್ನು ತನಗೆ ಹಣ ಸಿಗುವದಿಲ್ಲವೆಂದು ಅವಳು ಮೂಗು ಮುರಿಯುತ್ತ ಹೊರಟು ಹೋದಳು !

ಇದೇ ಹೊತ್ತಿನಲ್ಲಿ ಇನ್ನೊಂದು ನೋಟವು ಸಾಗಿತ್ತು. ಶೀನಪ್ಪನವರಾಡಿದ ಮಾತುಗಳೆಲ್ಲ ಲಕ್ಷ್ಮಿ ಕೇಳಿದ್ದಳು. ಮುದುಕಪ್ಪ ಅಲ್ಲಿಗೆ ಬಂದ ಕೂಡಲೆ, ಅವನನ್ನು ಕೈಮಾಡಿ ಕರೆದಳು. ಗಿಳಿಮರಿಯನ್ನು ಒಂದು ಪಂಜರದಲ್ಲಿ ಹಾಕಿಡಲು ಹೇಳಿದಳು. ಅವನಿಗೆ ಐದು ರೂಪಾಯಿ ಬಹುಮಾನ ಕೊಟ್ಟು ಕಳಿಸಿದಳು. ಮುದುಕಪ್ಪನು ನಮಸ್ಕಾರ ಮಾಡುತ್ತ ಉಬ್ಬಿನಿಂದ ಅಲ್ಲಿಂದ ಹೋದನು.

ಲಕ್ಷ್ಮಿಯ ಈ ವರ್ತನೆ ಮನೆಯಲ್ಲಿ ಅನೇಕರಿಗೆ ವಿಚಿತ್ರವೆನಿಸಿತು! ಎಲ್ಲರ ಕಣ್ಣೆದುರಿಗೇ ಅವರ ವಿರುದ್ಧವಾಗಿ ವರ್ತಿಸುವದೆಂದರೆ !! ಸೀತಕ್ಕ ಮತ್ತು ಗೋವಿಂದರಾಯರು ಹಲ್ಲು ಕಡಿದರು ! ಶೀನಪ್ಪ ತಮ್ಮ ಸಿಟ್ಟನ್ನು ತಾವೇ ನುಂಗಿಕೊಂಡರು.

ಆ ದಿನ ರಾತ್ರಿ ನಾರಾಯಣರಾಯರ ಆನಂದಕ್ಕೆ ಪಾರವೇ ಇರಲಿಲ್ಲ. ಡಾಳಿಂಬ್ರ, ಪೇರಲ ಹಣ್ಣುಗಳನ್ನು ಗಿಳಿಮರಿಗೆ ತಿನ್ನಿಸಿದರು. ಗಿಳಿಮರಿ ಪಂಜರವನ್ನು ಅಟ್ಟದ ಮೇಲೆ ತಾವು ಮಲಗಿಕೊಳ್ಳುವ ಕೋಣೆಯಲ್ಲಿ ತೂಗ ಹಾಕಿದರು. ಗಿಳಿಮರಿಯಂತೆ ತಾವೂ ಒದರಿದರು. ವಿಠೂ, ವಿಠೂ, ವಿಠೂ!

ಲಕ್ಷ್ಮಿ ಬಾಗಿಲವಿಕ್ಕಿಕೊಂಡು ಒಳಗೆ ಬಂದ ಕೂಡಲೆ, ಅವಳಿಗೆ ವೆಂಕ

ಟೇಶ ದೇವರ ಫೋಟೋದ ಎದುರಿಗೆ ದೀಪ ಹಚ್ಚಲು ಹೇಳಿದರು. ಆನಂದದಿಂದ ಅವಳ ತೊಡೆಯ ಮೇಲೆ ತಲೆಯಿಟ್ಟು ಮಲಗಿದರು. "ನಿನ್ನೆಯ ಹಾಡು ಅನ್ನುವದಿಲ್ಲವೆ?" ಎಂದು ಕೇಳಿದರು.

ಈ ವಿಚಿತ್ರ ಬದಲಾವಣೆ ಕಂಡು ಪ್ರೇಮಪೂರ್ವಕ ಕಣ್ಣುಗಳಿಂದ ಲಕ್ಷ್ಮಿ ಅವರನ್ನು ನೋಡಿದಳು. ಮೊದಲೇ ಲಕ್ಷ್ಮಿ ಚೆಲುವೆ. ಈ ನೋಟವಂತೂ ಚೆಲುವಿನಾಗರದಲ್ಲಿ ಚಂದ್ರೋದಯವಾದಂತಾಯಿತು! ಲಕ್ಷ್ಮಿ ಹೇಳಿದಳು "ನಿಮ್ಮ ಮನಸ್ಸಿದ್ದರೆ ಹಾಡುತ್ತೇನೆ" ಎಂದು.

ನಾರಾಯಣರಾಯರು ಆನಂದದಿಂದ ನಕ್ಕರು!

ಲಕ್ಷ್ಮಿ ಪಂಜರದಲ್ಲಿಯ ಗಿಣಿಯನ್ನು ನೋಡಿದಳು. ತನ್ನೆದುರಿಗಿದ್ದ ಥಾಳವಾದ ದೀಪವನ್ನು ಸಣ್ಣಗೆ ಮಾಡಿದಳು!

## ೯

ಜಗತ್ತಿನಲ್ಲಿ ಯಾವುದೂ ಒಂದೇ ತೆರವಾಗಿ ಇರುವುದಿಲ್ಲ. ಭೂದೇವಿ ತನ್ನ ವೈಸುತ್ತು ತಾನೇ ತಿರುಗುತ್ತ, ಕಳ್ಳಿಮಿಳ್ಳಿ ಆಟವನ್ನು ಆಡುತ್ತ, ಅನೇಕ ಬದಲಾವಣೆಗಳನ್ನು ಮಾಡುತ್ತಿರುತ್ತಾಳೆ. ಅದೆಲ್ಲ ಅವಳ ಅನಂತವಾದ ಲೀಲೆ! ಸಮುದ್ರವು ಶಾಂತವಾಗಿರುತ್ತದೆ; ಗಂಭೀರವಾಗಿರುತ್ತದೆ. ಹಲವು ಸಲ ಅಲ್ಲೋಲಕಲ್ಲೋಲವೂ ಆಗಿರುತ್ತದೆ. ಆಕಾಶದಲ್ಲಿ ಸಿಡಿಲು ಗರ್ಜಿಸಿ, ಮೋಡಗಳ ಆರ್ಭಟೆ! ಕೆಲವು ವೇಳೆ ನೀಲಮಯವಾಗಿ ಪ್ರಶಾಂತವಾಗಿರುತ್ತದೆ! ಈ ಅನಂತವಾದ ಲೀಲೆ ಏಕೆ ಏನೋ ಯಾರಿಗೂ ತಿಳಿಯದು! ಆ ಲೀಲೆಯಲ್ಲಿ ಕಾಲವೆಂಬ ಹಕ್ಕಿ ಹಾರಿ ಹೋಗುತ್ತದೆ. ಆ ಹಕ್ಕಿ ಅಗೋಚರ! ವಸುಂಧರೆಯ ವಿವಿಧ ಮುಖದ ಲೀಲೆಯಲ್ಲಿ ಮಾನವರೂ ಪಾಲುಗಾರರಾಗಿ, ತಮ್ಮ ಪಾಲಿನ ಬುತ್ತಿಯನ್ನು ತಿನ್ನುತ್ತಾರೆ.

ಲಕ್ಷ್ಮಿ ಹಾ ಹಾ ಎನ್ನುವುದರೊಳಗಾಗಿ ಒಂದೂವರೆ ವರ್ಷವನ್ನು ಕಳಸಾಪೂರದಲ್ಲಿ ಕಳೆದಳು. ಅನಂತ ಲೀಲೆಯಲ್ಲಿ ಅವಳೂ ಒಬ್ಬ ಆಟಗಾರ್ತಿಯಾ

ದಳು. ಚಿಕ್ಕ ವಯಸ್ಸಿನಲ್ಲಿಯೆ ಅವಳು ನಾನಾವಿಧದ ಘೋರ ಸಮಸ್ಯೆಗಳನ್ನು ಏಕಾಕಿಯಾಗಿಯೆ ಎದುರಿಸಿದಳು. ನಾರಾಯಣರಾಯರನ್ನು ತನ್ನ ವಶಮಾಡಿ ಕೊಂಡು ಬಾಳಿನಲ್ಲಿ ಶಾಂತವಾಗಿ ಸುಖವಾಗಿ ಜೀವಿಸಬೇಕೆಂಬ ಹಂಬಲ ಒಂದು ಕಡೆಗೆ! ವಾಡೆಯಲ್ಲಿ ಉಳಿದ ಜನರ ಜೊತೆಗೆ ಸಹಕರಿಸಿ ಬಾಳುವ ಇಚ್ಛೆ ಇನ್ನೊಂದೆಡೆಗೆ! ತನ್ನ ಮೊದಲನೆಯ ಹಂಬಲದಲ್ಲಿ ಎಷ್ಟೋ ಯಶಸ್ಸನ್ನು ಅವಳು ಪಡೆದಿದ್ದಳು. ಅದರ ಪರಿಣಾಮ ಅನೇಕರಿಗೆ ಕಂಡುಬರುತ್ತಿತ್ತು. ನಾರಾಯಣರಾಯರನ್ನು ನೋಡಿದವರೆಲ್ಲ, ಲಕ್ಷ್ಮಿಯ ಕಾಲ್ಗುಣವನ್ನು ಹೊಗ ಳದೆ ಇರುತ್ತಿರಲಿಲ್ಲ. ಸಿಟ್ಟಿಗೇಳದ ಸಮಯದಲ್ಲಿ ನಾರಾಯಣರಾಯರು ಉಳಿದ ವರಂತೆ ಮಾತನಾಡುತ್ತಿರುತ್ತಿದ್ದರು. ಹೊರಗಿನವರು ಯಾರಾದರೂ ಅವರನ್ನು ಮಾತನಾಡಿಸಿದರೆ, ಅವರ ಸ್ವಭಾವದಲ್ಲಿ ದೋಷವಿದೆಯೆಂದೂ, ಅವರು ಹುಚ್ಚರಿ ರುವರೆಂದೂ ಎದ್ದು ಕಾಣಿಸುತ್ತಿರಲಿಲ್ಲ. ನಾರಾಯಣರಾಯರು ನೋಡಲೂ ಸಹ ನೆಟ್ಟಗಾಗಿದ್ದರು. ಅವರ ಕರಿ ಮೈ ಕೈಗಳು ಮಾಂಸದಿಂದ ತುಂಬಿಕೊಂಡಿ ದ್ದವು. 'ರಾಯರ ಕಳೆ' ಅವರ ಮುಖದ ಮೇಲೆ ಬರುತ್ತಿದ್ದಿತು. ಇದರಿಂದ ಸುಬ್ಬಕ್ಕನವರಿಗೂ, ಕೃಷ್ಣರಾಯರಿಗೂ ಉಂಟಾದ ಸಂತೋಷ ಅಷ್ಟಿಷ್ಟಲ್ಲ! ನಾರಾಯಣರಾಯರು ಹುಚ್ಚರಂತೆ ಅತಿಯಾಗಿ ವರ್ತಿಸುವ ದಿನಗಳು ಈಗ ಎಷ್ಟೋ ಕಡಿಮೆ ಇದ್ದವು. ಇದಕ್ಕಾಗಿ ಸುಬ್ಬಕ್ಕನವರು, ಕಳಸಾಪೂರದಲ್ಲಿರುವ ವೆಂಕಟೇಶ ದೇವರಿಗೆ ನೈವೇದ್ಯವನ್ನು ಮಾಡಿಸಿದ್ದರು. ಅನೇಕ ಸಲ ಏನಾದರೂ ನೆವ ಮಾಡಿಕೊಂಡು ಗದುಗಿನ ವೀರನಾರಾಯಣನಿಗೆ ಪಂಚಾಮೃತವನ್ನು ಮಾಡಿಸಿದ್ದರು. ಇನ್ನೊಂದು ಸುಬ್ಬಕ್ಕನವರ ಕೊನೆಯ ಇಚ್ಛೆ ಇದ್ದಿತು. ಅದು ಯಾವುದೆಂದರೆ ತಿರುಪತಿ, ಕಾಶಿ ಕ್ಷೇತ್ರಗಳಿಗೆ ಹೋಗಿಬರುವುದು. ನಾರಾಯಣ ರಾಯರ ಜಡ್ಡಿನಲ್ಲಿ ಅವರು ಹಾಗೆ ದೇವರಿಗೆ ಬೇಡಿಕೊಂಡಿದ್ದರಂತೆ! ಆದ್ದರಿಂದ ಆ ಕ್ಷೇತ್ರಗಳಿಗೆ ದಂಪತ್ತುಸಹಿತ ಹೋಗುವ ದಾರಿಯನ್ನೂ, ಯೋಗ್ಯ ಸಮಯ ವನ್ನೂ ಅವರು ಕಾಯುತ್ತಿದ್ದರು.

ವಾಡೆಯಲ್ಲಿಯ ಜನರ ಜೊತೆಗೆ ಸಹಕರಿಸಿ ಬಾಳಬೇಕೆಂಬ ಲಕ್ಷ್ಮಿಯ ಇನ್ನೊಂದು ಆಶೆ ಮಾತ್ರ ಸಫಲವಾಗಿರಲಿಲ್ಲ. ಇಷ್ಟೇ ಅಲ್ಲ. ಆ ಸಮಸ್ಯೆಗಳು ಭುಗಿಲ್ ಎಂದು ಎದ್ದು ನಾಗರಹಾವಿನಂತೆ ಹೆಡೆಯಾಡಿಸುತ್ತಿದ್ದವು.

ವೀರಪ್ಪನವರ ಕಂಪನಿಯ ಜೊತೆಗೆ ಹೋದ ಆನಂದರಾಯರು ಮನೆಗೆ

ತಿರುಗಿರಲಿಲ್ಲ. ಶೀನಪ್ಪನವರು ಎರಡು ಮೂರು ಸಲ ಹೋಗಿ ಕರೆದುಬಂದರೂ ಅವರು ಬಂದಿರಲಿಲ್ಲ. ಅದೆಂಥ ನಾಟಕದ ಹುಚ್ಚೋ ಏನೋ! 'ಅವರು ನಾಟಕ ಕಂಪನಿಯನ್ನೆ ಹೆಂಡತಿಯನ್ನಾಗಿ ಮಾಡಿಕೊಂಡಿದ್ದಾರೆ' ಎಂದು ಜನ ರಾಡಿಕೊಳ್ಳುತ್ತಿದ್ದರು. ಕೃಷ್ಣರಾಯರು ತಮ್ಮ ಮಗನ ಇಂಥ ಸ್ವಭಾವಕ್ಕಾಗಿ ಬಹಳ ಬೇಸತ್ತಿದ್ದರು. 'ನಾಳೆ ತನ್ನ ಮಗಳ ಲಗ್ನಕ್ಕಾಗಿ ಮಂತ್ರಾಕ್ಷತೆ ಹಾಕ ಲಿಕ್ಕಾದರೂ ಊರಿಗೆ ಬರುತ್ತಾನೋ ಇಲ್ಲವೋ' ಎಂದು ಒದರಾಡುತ್ತಿದ್ದರು. ಸುಂದರಾ ಮೊದಲೆ ತನ್ನ ತಾಯಿಯನ್ನು ಕಳೆದುಕೊಂಡಿದ್ದಳು. ಈಗ ತಂದೆ ಜೀವಂತವಿದ್ದರೂ, ಅವನಿಂದ ಯಾವ ರೀತಿಯಿಂದ ವಾತ್ಸಲ್ಯವೂ ಇರಲಿಲ್ಲ. ಅದ ಕ್ಕಾಗಿ ಸುಂದರಾ ಲಕ್ಷ್ಮಿಯ ಹತ್ತಿರವೇ ಇರುತ್ತಿದ್ದಳು. ಅವಳೇ ತನ್ನ ತಂದೆ ಮತ್ತು ತಾಯಿ ಎಂದು ಭಾವಿಸುತ್ತಿದ್ದಳು.

ಲಕ್ಷ್ಮಿ ಮತ್ತು ಸುಂದರಾ ಕೂಡಿ ಇರುವುದನ್ನು ನೋಡಿ ಸೀತಕ್ಕಳಿಗೆ ಸಹನೆಯಾಗುತ್ತಿರಲಿಲ್ಲ. ಮನೆಯಲ್ಲಿ ಸುಬ್ಬಕ್ಕನವರ ತರುವಾಯ ತಾನೆ ಹಿರಿ ಯಳು. ಎಲ್ಲದರ ಬಗ್ಗೆ ತನ್ನನ್ನು ಏಕೆ ಕೇಳಬಾರದು ಎಂಬುದೇ ಅವಳ ಪ್ರಶ್ನೆ. "ಸ್ವಲ್ಪ ದೂರ ಇದ್ದೀರಿ. ಸಮೀಪ ಸರಿಯಿರಿ. ಸೂಜಿ, ಧಾರ ತರುತ್ತೇನೆ. ಇಬ್ಬರೂ ಹೊಲಿದುಕೊಂಡು ಬಿಡಿರಿ" ಎಂದು ಅಣಕದಿಂದ ಚುಚ್ಚಿ ಚುಚ್ಚಿ ಲಕ್ಷ್ಮಿಗೆ ಮಾತನಾಡುತ್ತಿದ್ದಳು. ಇದಲ್ಲದೆ ತನ್ನ ಮಕ್ಕಳನ್ನು ಯಾರನ್ನು ಇವಳ ಸಮೀಪ ಕಳಿಸುತ್ತಿರಲಿಲ್ಲ. ಲೀಲಾ, ಸೋನೂ, ರಂಗೂ ಯಾರಾದರೂ ಇರಲಿ ಒಂದು ವೇಳೆ ಮರೆತು ಏನಾದರೂ ಲಕ್ಷ್ಮಿಯ ಸಮೀಪ ಇದ್ದರೆ, ಸೀತಕ್ಕ ಅವ ರನ್ನು ಏನಾದರೊಂದು ನೆವ ಮಾಡಿ, ತನ್ನ ಕಡೆಗೆ ಕರೆದುಕೊಂಡು ಹೋಗುತ್ತಿ ದ್ದಳು. ಸೀತಕ್ಕ ಲಕ್ಷ್ಮಿಯ ಜೊತೆಗೆ ಸಲಿಗೆಯಿಂದ ಮಾತನಾಡುವುದಾಗಲಿ, ಯೋಗಕ್ಷೇಮ ಕೇಳುವುದಾಗಲಿ ಕ್ವಚಿತ್ತು. ಲಕ್ಷ್ಮಿಯ ಬಗ್ಗೆ ಸೀತಕ್ಕಳಿಗೆ ಮೊದಲಿನಿಂದಲೂ ಏನೋ ಒಂದು ರೀತಿಯ ಮತ್ಸರ. ಲಕ್ಷ್ಮಿ ಎಲ್ಲವನ್ನು ಸಹನೆ ಮಾಡಿಕೊಳ್ಳುತ್ತಿದ್ದಳು.

ಸೀತಕ್ಕನಿಗೆ ಅಹಂಭಾವವಿತ್ತು! ದರ್ಪವಿತ್ತು! ಅವಳು ಹೈದರಾಬಾದ ಸಂಸ್ಥಾನದಲ್ಲಿಯ ಆಗರ್ಭ ಶ್ರೀಮಂತ ಜಮೀನದಾರನ ಮಗಳು. ಅವಳು ಮೊದಲಿನಿಂದಲೂ ಐಶ್ವರ್ಯದ ಕ್ಷೀರಸಾಗರದಲ್ಲಿ ಲೋಲಾಡಿದವಳು. ಬಡತ ನದ ಎಳ್ಳಷ್ಟು ಅನುಭವವೂ ಅವಳಿಗಿರಲಿಲ್ಲ. ಸುಬ್ಬಕ್ಕನವರ ತರುವಾಯ ಎಲ್ಲ

ಅಧಿಕಾರ ತನಗೇ ಬರಬೇಕಾದದ್ದು ನ್ಯಾಯವಾದುದು. ತಾನು ಹೇಳಿದಂತೆ ಮನೆಯಲ್ಲಿಯ ಎಲ್ಲ ವ್ಯವಹಾರ ನಡೆಯಬೇಕೆಂದು ಅವಳ ಇಚ್ಛೆ! ಆದರೆ ಸುಬ್ಬಕ್ಕನವರ ತರುವಾಯ ತನಗೆ ಈ ಅಧಿಕಾರ ಸಿಗುವುದರ ಬಗ್ಗೆ ಸೀತಕ್ಕಳಿಗೆ ಬಹಳ ಸಂಶಯವಿದ್ದಿತು. ಸೀತಕ್ಕನ ಗಂಡ ಗೋವಿಂದರಾಯ ಏನಾದರೂ ಮಲಮಗ. ಸುಬ್ಬಕ್ಕನವರು ಮಹತ್ವ ಕೊಡುವುದು ತನ್ನ ಮಗ ನಾರಾಯಣ ರಾಯರಿಗೆ—ಮತ್ತು ಅವರ ಹೆಂಡತಿಗೆ. ನಾರಾಯಣರಾಯರ ಲಗ್ನವಾಗಿ, ಲಕ್ಷ್ಮೀ ಕಳಸಾಪೂರಕ್ಕೆ ಬಂದಂದಿನಿಂದ, ಸೀತಕ್ಕ ಎಲ್ಲವನ್ನೂ ಸೂಕ್ಷ್ಮವಾಗಿ ನಿರೀಕ್ಷಿಸುತ್ತಿದ್ದಳು. ಸುಬ್ಬಕ್ಕನವರ ನಡತೆ ಲಕ್ಷ್ಮೀಗೆ ಅನುಕೂಲವಾಗಿದೆ ಯೆಂದು ಅವಳಿಗೆ ಮೇಲಿಂದಮೇಲೆ ಅನಿಸುತ್ತಿದ್ದಿತು. ಇದರ ಬಗ್ಗೆ ತನ್ನ ಗಂಡ ನಿಗೂ ಹೇಳುತ್ತಿದ್ದರು. ಗೋವಿಂದರಾಯರಿಗೂ ನಾರಾಯಣರಾಯರಿಗೂ ಮೊದಲಿನಿಂದಲೂ ಎಣ್ಣೆ ಸೀಗೆಕಾಯಿ. ಸೀತಕ್ಕ ಇಂಥ ಮಾತುಗಳನ್ನು ಆಡಿ ಕೊಳ್ಳುವುದರಿಂದ ಬೆಂಕಿಗೆ ಗಾಳಿ ಬೀಸಿದಂತಾಗುತ್ತಿತ್ತು.

ಕುಂಟ ಅಡುಗೆಯ ರಾಜಪ್ಪ ಗೋವಿಂದರಾಯ ಮತ್ತು ಸೀತಕ್ಕನವರ ಕೇವಲ ಸೇವಕ. ತನ್ನ ಅಡುಗೆಯ ಕೆಲಸ ಮುಗಿಸಿ ಉಳಿದ ಹೊತ್ತಿನಲ್ಲಿ ರಾಜಪ್ಪನು, ಗೋವಿಂದರಾಯ ಮತ್ತು ಸೀತಕ್ಕನವರು ಹೇಳಿದ ಕೆಲಸಗಳನ್ನು ಮಾಡುತ್ತಿದ್ದನು. ರಾಜಪ್ಪನಿಗೆ ಇಬ್ಬರು ಹೆಣ್ಣುಮಕ್ಕಳು. ಹಿರಿಯವಳು ೧೩ ವರ್ಷದಾಕೆ. ಕಿರಿಯವಳು ೧೦ ವರ್ಷದಾಕೆ. ವಾಡೆಯಲ್ಲಿ, ಜಾಗಿರದಾರರ ಅಡುಗೆಯ ಮನೆಯಲ್ಲಿ ಕೆಲಸ ಮಾಡಲಿಕ್ಕೆ ಹತ್ತಿ ೮-೧೦ ವರ್ಷಗಳಾದವು. ಈ ವಿಶ್ವಾಸದ ಪ್ರತಿಫಲವೆಂದು ಏನಾದರೂ ಭಂಗಾರದ ಅಭರಣಗಳನ್ನು ಸೀತಕ್ಕನ ಕಡೆಯಿಂದ ಪಡೆಯಬೇಕೆಂದು ಅವನ ಇಚ್ಛೆ. ಮನೆಯಲ್ಲಿ ಅವನ ಮಕ್ಕಳೂ ಪ್ರೀತಿಯಿಂದ ಅಂಥ ಆಭರಣಗಳನ್ನು ಬೇಡುತ್ತಿದ್ದರು. ಅಡುಗೆಯ ರಾಜಪ್ಪನೇ ಸೀತಕ್ಕನಿಗೆ ಕೇಳಿದ "ನೋಡಿರಿ ಬಾಯಿಯವರೆ, ಸುಬ್ಬಕ್ಕನವರು ಲಕ್ಷ್ಮೀ ಬಾಯರಿಗೆ ಎಷ್ಟು ಭಂಗಾರದ ಸಾಮಾನು ಮೊನ್ನೆ ಕೊಟ್ಟಿದ್ದಾರೆ. ನೀವೂ ನನ್ನ ಹೆಣ್ಮಕ್ಕಳು ನಿಮ್ಮ ಸೊಸೆಯೆಂದು ತಿಳಿದುಕೊಂಡು ಒಂದು ತೊಲಿ ಭಂಗಾರ ವಾದರೂ ಕೊಡಿರಿ........"

ಸೀತಕ್ಕಗೆ ಅನಿಸಿತು—ಲಗ್ನದಲ್ಲಿ ಕೊಟ್ಟ ಭಂಗಾರದ ಆಭರಣಗಳು ಇರ ಬೇಕೂ ಎಂದು. ಆದರೂ ಅಡುಗೆ ಮನೆಯಲ್ಲಿರುವ ರಾಜಪ್ಪನಿಗೆ ಏನಾದರೂ

ವಿಶೇಷ ಸುದ್ದಿ ಗೊತ್ತಿರುವವೆಂದು ಸೀತಕ್ಕ ಮತ್ತೆ ಪ್ರಶ್ನೆ ಮಾಡಿದಳು "ನಿನ್ನ ಮಗಳ ಲಗ್ನದ ಹೊತ್ತಿಗೆ ಕೊಡೋಣ. ಅಲ್ಲೋ ರಾಜಪ್ಪ, ಮೊನ್ನೆ ಮೊನ್ನೆ ಎಂದು ಏನೋ ಹೇಳುವಿಯಲ್ಲ? ಅದೇನು ಸಂಗತಿ ? "

"ಬಾಯಿಯವರೆ, ಅದು ಯಾರಿಗೂ ಗೊತ್ತಾಗಬಾರದೆಂದು ಮೂವರೂ ಕೂಡಿ ಮಾತನಾಡುತ್ತಿದ್ದರು!" ರಾಜಪ್ಪ ಆಶ್ಚರ್ಯವನ್ನು ವ್ಯಕ್ತಮಾಡುತ್ತ ತನ್ನ ಬಾಯಿಯ ಮೇಲೆ ಕೈಯಿಟ್ಟುಕೊಂಡ.

ಯಾರಿಗೂ ಗೊತ್ತಾಗಬಾರದ ಸುದ್ದಿಯೆಂದ ಕೂಡಲೆ ಸೀತಕ್ಕನ ಕಿವಿ ನೆಟ್ಟಗಾದುವು. ಕುಂಟ ರಾಜಪ್ಪನಿಗೆ ಮರ್ಯಾದೆಯನ್ನು ಕೊಟ್ಟು, ಚಾಪೆಯ ಮೇಲೆ ಕೂಡ ಹೇಳಿ, ಎಲ್ಲ ಸುದ್ದಿಯನ್ನು ಕೇಳಿಕೊಂಡಳು. ಒಗ್ಗರಣೆಯನ್ನು ಕೊಡುವ ಕಲೆ ಗೊತ್ತಿದ್ದ ರಾಜಪ್ಪನು ಒಂದಕ್ಕೆ ಎರಡು ಮಾಡಿ, ಉಪ್ಪು ಖಾರ ಹಚ್ಚಿ ಆ ಸುದ್ದಿಯನ್ನೆಲ್ಲ ಬಣ್ಣಿಸಿದನು. ಸೀತಕ್ಕ ಅವನು ಹೇಳಿದ ಸುದ್ದಿಯನ್ನು ಕೇಳಿಕೊಂಡು ಹೇಳಿದಳು "ರಾಜಪ್ಪ, ನನಗೆ ಗೊತ್ತಿದೆ! ಆ ಶೀನಪ್ಪ, ಅತ್ತೆಯವರು ಕೂಡಿ ಆ ಲಕ್ಷ್ಮಿ ಸಲುವಾಗಿ, ನಮ್ಮ ಮಾವನವರ ತಲೆ ಕೆಡಿಸಿ, ಈ ಮನೆಯನ್ನೆಲ್ಲ ಹಾಳು ಮಾಡುತ್ತಾರೆ. ಆಸ್ತಿಯೆಲ್ಲ ತೊಳೆದು ಹೋಗುವುದು. ನನಗೆ ಗೊತ್ತಿದೆ ಈ ಒಳಸಂಚೆಲ್ಲ........ಇದೆಲ್ಲ ಎಂದು ಆಯಿತು ?

"ಅಂದೇ ನೀವು ಸಂಪೂರ್ಣ ರಾಮಾಯಣ ನಾಟಕಕ್ಕೆ ಹೋದ ರಾತ್ರಿ!"

ರಾಜಪ್ಪನ ಕೊನೆಯ ಮಾತನ್ನು ಕೇಳಿದಾಗಲಂತೂ, ಸೀತಕ್ಕಳ ಹೃದಯ ಜ್ವಾಲಾಮುಖಿಯಾಯಿತು. ತಮ್ಮನ್ನೆಲ್ಲ ಮುದ್ದಾಂ ನಾಟಕಕ್ಕೆ ಕಳಿಸಿ, ಮನೆಯಲ್ಲಿ ಈ ನಾಟಕ ಹೂಡಿದ್ದಾರಲ್ಲವೆ ಎಂದು ಕಿಡಿಕಿಡಿಯಾದಳು. ಆದರೆ ಆ ಕಿಡಿಗಳನ್ನು ಹೊರಸೂಸಲಿಲ್ಲ. ಜ್ವಾಲಾಮುಖಿಯು ಒಳಗೊಳಗೇ ಕುದಿಯುಯುವಂತೆ ಅವಳ ಹೃದಯವಾಗಿತ್ತು. ಜಗಳದ ಯೋಗ್ಯ ಸಮಯಕ್ಕಾಗಿ, ಹುಂಜದಂತೆ ಕಾದು ಕುಳಿತಿದ್ದಳು.

ನವರಾತ್ರಿ. ಜಾಗಿರದಾರರ ಮನೆತನದ ಪದ್ಧತಿಯಂತೆ, ವೆಂಕಟೇಶ ದೇವರ ದೇವಾಲಯದಲ್ಲಿ ತುಪ್ಪದ ನಂದಾದೀಪಗಳನ್ನು ಹಚ್ಚಬೇಕು; ದಿನಾಲು ತರತರದ ನೈವೇದ್ಯ, ಪಲ್ಲಕ್ಕಿ ಸೇವೆ. ದಸರೆಯ ದಿನ ರಥೋತ್ಸವ. ಆಗ ಊರ ಜನರಿಗೆಲ್ಲ ಬಹಳ ವಿಜೃಂಭಣೆ! ಯಾವ ಜಾತಿಯವರೆನ್ನದೆ ಎಲ್ಲರೂ ಆ ದಿನ

ಉತ್ಸವದಲ್ಲಿ ಭಾಗ ವಹಿಸುವರು. ‘ಬನ್ನಿ’ ಕೊಡುವರು. ವೆಂಕಟೇಶದೇವರ ರಥವು ಕಳಸಾಪೂರ ಕೆರೆಯ ವರೆಗೆ ಎಳೆಯಲ್ಪಡುವದು. ಅಲ್ಲಿ, ಸಂಜೆಯ ಸಮಯಗಲ್ಲಿ. ಬನ್ನಿಗಿಡದ ಪೂಜೆಯಾಗಿ, ಜಾಗಿರದಾರರು ಮೊದಲು ಬನ್ನಿ ಕೊಟ್ಟ ಮೇಲೆ, ಉಳಿದವರೆಲ್ಲ ಕೊಡಲು ಆರಂಭಿಸುತ್ತಿದ್ದರು. ಜಾಗಿರದಾರರ ಈ ವೈಭವ ನೋಡಲು, ರಥೋತ್ಸವದ ವೆಂಕಟೇಶ ದೇವರ ದರ್ಶನ ಮಾಡಿಕೊಳ್ಳಲು ಸುತ್ತಮುತ್ತಲಿನ ಹಳ್ಳಿಯ ಜನವೆಲ್ಲ ಕಳಸಾಪೂರಿಗೆ ಬರುತ್ತಿತ್ತು. ತಿರುಪತಿ ವೆಂಕಟೇಶ ದೇವರ ಪ್ರತಿರೂಪವೆ ಆ ಊರಲ್ಲಿದೆಯೆಂದೂ, ಆ ದೇವರ ದರ್ಶನ ದಸರೆಯದಿನವಾದರೆ ತಿರುಪತಿಗೆ ಹೋದಷ್ಟು ಪುಣ್ಯವು ಬರುತ್ತದೆಂದೂ ಜನರ ಬಲವಾದ ನಂಬಿಕೆ. ಅಂತೆಯೆ ಅಸುಂಡಿ, ಅಡವಿ ಸೋಮಾಪೂರ, ನಾಗಾವಿ, ಕಮಲಾಪೂರ ಮುಂತಾದ ಸುತ್ತಲಿನ ಎಲ್ಲ ಹಳ್ಳಿಗಳಿಂದ ಜನರು ದಸರೆಯ ದಿನ ಕಳಸಾಪೂರಿಗೆ ಬರುತ್ತಿದ್ದರು.

ನವರಾತ್ರಿಯ ಉತ್ಸವ ಮನೆಗಿಷ್ಟೆ ಸಂಬಂಧವಿರದೆ, ಊರಿಗೂ ಸಂಬಂಧವಿರುವುದರಿಂದ ಸುಬ್ಬಕ್ಕ ಮತ್ತು ಕೃಷ್ಣರಾಯರು ಬಹಳ ಚಟುವಟಿಕೆಯುಳ್ಳವರಾಗಿರುತ್ತಿದ್ದರು. ಹಗಲೂ ಇರುಳೂ ತರತರದ ಹಬ್ಬದ ಪಕ್ವಾನ್ನಗಳನ್ನು ಮಾಡಿಸುವಲ್ಲಿ ತಲ್ಲೀನರಾಗಿರುತ್ತಿದ್ದರು. ದಸರಾ ಹಬ್ಬ ಮುಗಿದ ಮೇಲೆ, ತಿರುಪತಿ, ಕಾಶಿ, ರಾಮೇಶ್ವರ ಹೀಗೆ ಹಲವು ಪವಿತ್ರ ಕ್ಷೇತ್ರಗಳ ಯಾತ್ರೆ ಮಾಡಬೇಕೆಂದು ಸುಬ್ಬಕ್ಕನವರು ಯೋಚಿಸಿದ್ದರು. ತಮ್ಮ ಮಗನ ಲಗ್ನದ ಸಲುವಾಗಿ, ಅವನ ಬೇನೆಯ ಸಲುವಾಗಿ ಸುಬ್ಬಕ್ಕನವರು ಹಾಗೆ ಹರಕೆ ಹೊತ್ತಿದ್ದರು. ಅವರ ಸೊಸೆ ಮನೆಗೆ ಬಂದು ಒಂದೂವರೆ ವರ್ಷವಾಗಿತ್ತು! ಮನೆಯಲ್ಲಿ ಎಲ್ಲವೂ ಸುರಳಿತವಾಗಿತ್ತು! ನಾರಾಯಣರಾಯರೂ ವಿಶೇಷ ಬೇನೆಗಳ ತಕರಾರು ಇಲ್ಲದೆ ಇದ್ದರು! ತಮ್ಮ ಸೊಸೆ ಲಕ್ಷ್ಮಿ ಮನೆಗೆ ಬಂದಂದಿನಿಂದ, ನಿಜವಾದ ಲಕ್ಷ್ಮಿದೇವಿಯ ಗೃಹಪ್ರವೇಶವೇ ಆಗಿದೆಯೆಂದು ಸುಬ್ಬಕ್ಕನವರ ಭಾವನೆ! ಆದ್ದರಿಂದ ದಸರೆ ಉತ್ಸವದಲ್ಲಿ ಊರ ಜನರಿಂದ ಮಾನ ಮರ್ಯಾದೆ ಮಾಡಿಸಿಕೊಂಡಾದ ಮೇಲೆ, ತಾವು ಕ್ಷೇತ್ರ ಯಾತ್ರೆಗೆ ಹೋಗುವುದಾಗಿ ನಿರ್ಣಯಿಸಿಕೊಂಡಿದ್ದರು. ಅದರಂತೆ ಮನೆಯಲ್ಲಿ ಸಿದ್ಧತೆಯೂ ಸಾಗಿತ್ತು. ಒಂದು ತಿಂಗಳ ಊರಿಗೆ ಹೋಗುವುದೆಂದರೆ, ಅದರ ಪೂರ್ವ ತಯಾರಿ ಬೇಡವೆ? ನವರಾತ್ರಿಯಲ್ಲಿ ಫಲಾಹಾರದ ಪದಾರ್ಥಗಳನ್ನು ತಯಾರಿಸುವಾಗ, ಯಾತ್ರೆಯ ಸಲು

ವಾಗಿಯೂ ಪದಾರ್ಥಗಳನ್ನು ಸಿದ್ಧಗೊಳಿಸುತ್ತಿದ್ದಳು. ಕಾಳುಕಡಿ, ಹಣದ ವ್ಯವಸ್ಥೆ ಇವೆಲ್ಲವುಗಳನ್ನು ನೋಡಲು ಶೀನಪ್ಪನವರಂತೂ ಇದ್ದೇ ಇದ್ದರು. ಅಡುಗೆಯ ಮನೆಯಲ್ಲಿಯ ಸಾಮಾನುಗಳ ಕೀಲಿ ಕೈ, ಹಾಲು ಮೊಸರು ಬೆಣ್ಣೆ ಪದಾರ್ಥಗಳನ್ನು ಇಡುವ ಕಪಾಟಿನ ಕೀಲಿಕೈ ಸುಬ್ಬಕ್ಕನವರ ಕಡೆಗಿತ್ತು.

ದಸರಾ ಹಬ್ಬದ ಮುನ್ನಾ ದಿನ ಅಂದರೆ ಮಾನೋಮಿಯ ದಿನ ಬೆಳಿಗ್ಗೆ ಸುಬ್ಬಕ್ಕ ಮತ್ತು ಕೃಷ್ಣರಾಯರ ಯಾತ್ರೆಯ ಬಗ್ಗೆ ಯಾವು ಯಾವುವೋ ಮಾತುಗಳು ಅಡುಗೆಯ ಮನೆಯಲ್ಲಿ ಹೊರಟಿದ್ದವು. ಒಗ್ಗರಣೆಯನ್ನು ಚುಂಯಿ ಗುಡಿಸುತ್ತ ಅಡುಗೆಯ ರಾಜಪ್ಪ ನಗುತ್ತ ಕೇಳಿದ, "ಅಮ್ಮನವರು ಊರಿಗೆ ಹೋದ ಮೇಲೆ, ಅಡುಗೆಯ ಮನೆಯ ಕೀಲಿಕೈ ಯಾರ ಕಡೆಗೆ? ನಿಮ್ಮ ಪ್ರೀತಿ ಸೊಸೆ ಲಕ್ಷ್ಮಂಬಾಯರ ಕಡೆಗೇ ಏನು?"

ಸುಬ್ಬಕ್ಕನವರು ರಾಜಪ್ಪನು ತಮ್ಮ ಸೊಸೆಯ ಮೇಲೆ ತೋರಿದ ಆದರ ವನ್ನು ಸ್ಮರಿಸಿಕೊಂಡು ಆನಂದದಿಂದ ಉತ್ತರ ಕೊಟ್ಟರು "ಹೂಂ! ಅವಳಿಗೆ ಕೊಡದೆ ಮತ್ತೆ ಯಾರ ಕಡೆಗೆ ಕೊಡಬೇಕು ನಾನು?"

ಸಮೀಪದ ಕೋಣೆಯಲ್ಲಿಯೆ ಸೀತಕ್ಕ ಇದ್ದರು. ಅವಳು ಅಲ್ಲಿ ಇದ್ದುದು ಸುಬ್ಬಕ್ಕನವರಿಗೆ ಗೊತ್ತಿರಲಿಲ್ಲ! ಸುಬ್ಬಕ್ಕನವರ ಮಾತನ್ನು ಕೇಳಿ ಸೀತಕ್ಕ ಭಯಂಕರ ಕೋಪಗೊಂಡಳು. ಸುಬ್ಬಕ್ಕನವರು ತನಗೆ ಕೀಲಿಕೈ ಕೊಡದೆ ಲಕ್ಷ್ಮಿಗೆ ಕೊಡುವವರೆ? ಮನೆಯ ಹಕ್ಕು ತನಗಿರದೆ ಲಕ್ಷ್ಮಿಗೆ ಉಂಟೆ? ಕಿಡಿಕಿಡಿಯಾಗಿ ಸೀತಕ್ಕ ಅಡುಗೆಯ ಮನೆಯಲ್ಲಿ ಪ್ರವೇಶಿಸಿದಳು. ಸುಬ್ಬಕ್ಕನವ ರಿಗೆ ಯಾವ ಮಾನವನ್ನೂ ಕೊಡದೆ, ಫಟಫಟನೆ ಜೋರಾಗಿ ಮಾತನಾಡಿದಳು. "ಅಹುದು. ಕೀಲಿಕೈ ಆ ನಿಮ್ಮ ಲಕ್ಷ್ಮಿಗೇ ಕೊಡಿರಿ. ಮನೆಯಲ್ಲಿ ನಾನು ಎಷ್ಟ ರವಳು? ನಾನು ನಿಮಗೆ ಏನೂ ಕಾಣುವುದಿಲ್ಲ. ನಾನು ಕಸ, ಕಡ್ಡಿ. ಎಲ್ಲಾ ಮರ್ಯಾದೆ, ಮಾನ, ಅಧಿಕಾರ ಅವಳಿಗೇ ಆಗಲಿ........"

ಸೀತಕ್ಕನ ಈ ಅನಿರೀಕ್ಷಿತ ಆವೇಶವನ್ನು ಕಂಡು ಸುಬ್ಬಕ್ಕನವರು ಕಕ್ಕಾ ವಿಕ್ಕಿಯಾತರು. ಅಡುಗೆಯ ರಾಜಪ್ಪನೆದುರಿಗೆ ತಮ್ಮ ಅಪಮಾನವಾದುದನ್ನು ನೆನೆಸಿ, ಅವರೂ ರೌಸಿನಿಂದ ಧನಿ ಎಳೆದರು. "ಏನೇ ಸೀತಿ, ನಿನ್ನ ನಾಲಗೆ ಇಷ್ಟು ಉದ್ದಾಯಿತೆ? ಯಾರ ಎಧುರು, ಎಲ್ಲಿ, ಏನು ಮಾತನಾಡುತ್ತಿರುವಿ? ಏನಾದರೂ ನಿನಗೆ 'ಅಕಲು' ಇದೆ ಏನು?........ನಾನು ಹೇಳುತ್ತೇನೆ."

“ಹೂಂ! ನಾನು ಸೀತಿ! ನಿಮ್ಮವಳು ಲಕ್ಷ್ಮಿ, ಲಕ್ಷ್ಮೀಬಾಯಿ, ಲಕ್ಷ್ಮಿ ಬಾಯಿದೇವಿಯವರು........! ಇರಲಿ, ಇದನ್ನೆಲ್ಲ ನಾನು ಸಹನೆ ಮಾಡಿಕೊಳ್ಳುವದಿಲ್ಲ! ನೀವು ಹೂಡಿದ ನಾಟಕೆಲ್ಲಾ ನನಗೆ ಗೊತ್ತಿದೆ........”

“ಏನೇ ಅದು ದೊಡ್ಡವರೆದುರಿಗೆ ಅನ್ನುವುದು? ಒಂದೇ ಸವನೆ ಬೊಗಳುತ್ತೀ? ನಾನು ಮಾಡಿದ್ದಾದರೂ ಏನು ನಿನಗೆ? ನಾನು ಹೇಳುತ್ತೇನೆ. ಊಟಕ್ಕೆ ತಿನ್ನಲಿಕ್ಕೆ ಕಡಿಮೆ ಮಾಡಿದೆಯೆ? ಬೆಳ್ಳಿ ಬಂಗಾರ ಕಡಿಮೆ ಮಾಡಿದೆಯೆ? ನೀನು ಬೊಗಳೂದಾದರೂ ಏನು?........”

“ಹೂಂ! ಬೊಗಳುತ್ತೇನೆ....! ತಿಜೂರಿಯೊಳಗಿನವು ಬೆಳ್ಳಿ ಭಂಗಾರ ಎಲ್ಲಾ ಒಯ್ದು ನಿಮ್ಮ ರಂಭಾಗೆ ಕೊಡಿರಿ. ನಾನು ಬೊಗಳದೆ ಸುಮ್ಮನೇ ಕೂಡಬೇಕೆ?........”

“ಏನೆ? ಏನೇನು ಅನ್ನುತ್ತೀ?........”

“ನನಗೆ ಆ ರಾಮಾಯಣ ಎಲ್ಲಾ ಗೊತ್ತಿದೆ. ರಾಮಾಯಣ ನಾಟಕದ ದಿನ ನೀವು ಏನೇನು ಮಾಡಿದಿರಿ ಎಲ್ಲಾ ಗೊತ್ತಿದೆ........ ಇನ್ನೇನು ನಾನು ಸುಮ್ಮನೇ ಕೂಡುವದಿಲ್ಲ. ನೋಡುತ್ತೇನೆ, ಕೀಲಿಕೈ ಹೇಗೆ ನೀವು ಲಕ್ಷ್ಮಿಗೆ ಕೊಡುತ್ತೀರಿ?”

ಸೀತಕ್ಕನ ಕೊನೆಯ ಮಾತುಗಳು, ಸುಬ್ಬಕ್ಕನವರನ್ನು ಮೇಲೆತ್ತಿ ಧೊಪ್ಪನೆ ಕೆಳಗೆ ಒಗೆದಂತಾಯಿತು. “ಅಯ್ಯೋ! ಅಯ್ಯೋ! ಅಯ್ಯೋ!” ಎಂದು ಒದರುತ್ತ ಧೊಪ್ಪನೆ ಕೆಳಗೆ ಕುಸಿದು ಕುಳಿತರು. “ಹಿರಿಯರಿಗೆ ಏನೂ ಮಾನ ಉಳಿಯಲಿಲ್ಲೆ ಈ ವಾಡೆಯೊಳಗೆ. ಏ ಚಂಡಿ...........ನೀನು ಎಂಥವಳು ನಾನು ಹೇಳುತ್ತೇನೆ.”

“ನೀವೇನೂ ನನಗೆ ಹೇಳುವುದು ಬೇಡ........”

“ಅಯ್ಯೋ! ಎಷ್ಟು ರಂಭಾಟ ನಿನ್ನದು!........ತಗೋ ಈ ಕೀಲಿಕೈಯನ್ನ!” ಎಂದು ತಮ್ಮ ಉಡಿಯಲ್ಲಿದ್ದ ಕೀಲಿಕೈ ಸರವನ್ನು ತೆಗೆದುಕೊಂಡು ಸೀತಕ್ಕನ ಕಡೆಗೆ ಬೀಸಿ ಒಗೆದರು. ಅಪಮಾನವನ್ನು ಸಹಿಸಲಾರದೆ ಸುಬ್ಬಕ್ಕನವರಿಗೆ ಅಳುವು ಬಂದುಬಿಟ್ಟಿತು.

ಅಡುಗೆಯ ಮನೆಯ ಈ ಗದ್ದಲವನ್ನು ಕೇಳಿ, ವಾಡೆಯಲ್ಲಿಯ ಜನ, ಅಲ್ಲಿಗೆ ಧಾವಿಸಿ ಬಂದಿತು. ಸುಬ್ಬಕ್ಕನವರು ಸೀರೆಯ ಸೆರಗಿನಿಂದ ಮುಖ ಮುಚ್ಚಿ

ಕೊಂಡು ಬಿಕ್ಕಿಸಿ ಬಿಕ್ಕಿಸಿ ಅಳುತ್ತ "ನನಗೆ ಈ ಮನೆಯೇ ಬೇಡ. ಯಾರೂ ಬೇಡ. ಸೀತಿ ಬೇಕಾದ್ದನ್ನು ಮಾಡಿಕೊಳ್ಳಲಿ. ನಾನು ಇಂದೇ ಹೊರಟು ಹೋಗುತ್ತೇನೆ. ನಾರಾಯಣ, ವೆಂಕಟೇಶ ಎಂದು ದೇವರ ನಾಮ ಜಪಿಸುತ್ತ ಕಾಶಿಗೆ ಹೋಗಿ ಸಾಯುತ್ತೇನೆ.... "

ಸುಬ್ಬಕ್ಕನವರ ಸಿಟ್ಟಿನ ಅಗ್ನಿಗೆ ನೀರೆರೆಯುವುದು ಯಾರಿಂದಲೂ ಸಾಧ್ಯವಾಗಲಿಲ್ಲ. ಅವರಿಗೆ ಅನೇಕರು ಬಂದು ಸಮಾಧಾನ ಮಾಡಲು ಯತ್ನಿಸಿದರು. "ಅವ್ವನವರೆ, ಏನೋ ಆಗಿದೆ. ಹೋಗಲಿ. ಮರೆತು ಬಿಡಿರಿ" ಎಂದು ಹೇಳಿದರು. ಸುಬ್ಬಕ್ಕನವರು ತಮ್ಮ ಕೋಣೆಯಲ್ಲಿ ಕುಳಿತು ಯಾರ ಮಾತೂ ಕೇಳಲಿಲ್ಲ. ತಾವು ಊರಿಗೆ ಹೊರಡಬೇಕೆಂದೂ, ಒಂದು ಕ್ಷಣವೂ ಸಹ ಕಳಸಾಪೂರದಲ್ಲಿ ನಿಲ್ಲುವುದು ಶಕ್ಯವಿಲ್ಲವೆಂದೂ ಹೇಳಿದರು. "ಹಬ್ಬದ ದಿನಗಳು; ದಸರೆಯನ್ನಾದರೂ ಮುಗಿಸಿರಿ. ನಾಳೆ ಊರ ಜನ ಏನು ಎಂದಾರು?" ಎಂದು ಅನೇಕರು ಒತ್ತಾಯಪಡಿಸಿದರೂ, ಸುಬ್ಬಕ್ಕನವರು ತಮ್ಮ ಛಲವನ್ನೇ ಹಿಡಿದರು.

ಮಾನೋಮಿ ರಾತ್ರಿ ಮಳೆ ಸುರಿಯುತ್ತಿತ್ತು ! ಆಕಾಶದಲ್ಲಿ ಮೋಡ ಮುಸುಕಿ, ಗುಡುಗು ಮಿಂಚುಗಳ ಸಪ್ಪಳವಿತ್ತು ! ಸುಬ್ಬಕ್ಕನವರು ಕೃಷ್ಣರಾಯರನ್ನು ಕರೆದುಕೊಂಡು ತಮ್ಮ ಪರಿವಾರದೊಡನೆ ಊರಿಗೆ ಹೊರಟೇ ಬಿಟ್ಟರು. ಆಕಾಶವು ಅತ್ತಂತೆ, ರಾಯರ ಸುತ್ತು ಮುತ್ತಲಿನ ಜನವೆಲ್ಲ ಗೋಳಿಟ್ಟಿತು.

* * *

ದಸರೆಯ ವಿಜೃಂಭಣೆಯ ದಿನ ಕೃಷ್ಣರಾಯರು ಊರಲ್ಲಿ ಇಲ್ಲದ್ದನ್ನು ತಿಳಿದು, ಊರ ಜನವೆಲ್ಲ ಏನೇನೋ ಮಾತನಾಡಿಕೊಂಡಿತು. ಆ ದಿನ ಬೆಳಗಿನಿಂದ ಕಳಸಾಪೂರದಲ್ಲಿ ಸುಬ್ಬಕ್ಕನವರ ಸುದ್ದಿಯೇ ಸುದ್ದಿ. ಯಾವುದೋ ಒಂದು ಯುದ್ಧವಾಗಿ ಬಾಂಬು ಬಿದ್ದಂತೆ ಜನರು ಗುಂಪುಗುಂಪಾಗಿ ನಿಂತು ಮಾತನಾಡಿಕೊಳ್ಳುತ್ತಿದ್ದರು. ಇಂಥ ಕಲಮಲವಾದ ವಾತಾವರಣದಲ್ಲಿ ಶೀನಪ್ಪನವರು ದೀಪಸ್ತಂಭ! ಯಾವುದನ್ನು ಹೇಗೆ ಎದುರಿಸಬೇಕೋ ಅದು ಅವರಿಗೆ ಗೊತ್ತು. ದಸರೆಯ ದಿನ ತಿರುಪತಿಯಲ್ಲಿ ದೊಡ್ಡ ಉತ್ಸವವಿದೆಯೆಂದೂ, ಅಂದೆ

ತಾವು ದೇವರ ದರ್ಶನ ತೆಗೆದುಕೊಂಡು, ನೈವೇದ್ಯ ಮಾಡುವುದಾಗಿ ಸುಬ್ಬಕ್ಕನವರು ಬೇಡಿಕೊಂಡಿದ್ದರೆಂದೂ, ಆದ್ದರಿಂದ ಕೃಷ್ಣರಾಯರೂ ಮತ್ತು ಸುಬ್ಬಕ್ಕನವರು ಊರಿಗೆ ಹೋಗಬೇಕಾಯಿತೆಂದೂ ಮತ್ತು ಆ ದಿನ ಗೋವಿಂದರಾಯರ ಅಮೃತಹಸ್ತದಿಂದ ಬನ್ನಿ ಕೊಡುವ ಸಮಾರಂಭ ಆಗಲಿದೆಯೆಂದೂ ಎಲ್ಲ ಕಡೆಗೂ ಶೀನಪ್ಪನವರು ಜಾಹೀರು ಪಡಿಸಿದರು.

ತೀರ್ಥಯಾತ್ರೆಗೆ ಹೋದವರೇನೋ ಹೋದರು. ದಸರಾ ಉತ್ಸವವು ಕಳಸಾಪೂರದಲ್ಲಿ ನಡೆಯುವಂತಲ್ಲದಿದ್ದರೂ ಸಾಂಗವಾಗಿ ಹೋಯಿತು. ಆದರೆ ಇದೆಲ್ಲದರ ಪರಿಣಾಮ ಲಕ್ಷ್ಮಿಯ ಮೇಲೆ ಬಹಳಾಯಿತು. ಮನೆಯಲ್ಲಿ ನಡೆದ ಯಾವ ಅಸಂಗತಿಯನ್ನಾದರೂ ಸಹನೆ ಮಾಡಿಕೊಳ್ಳುವ ಗುಣವನ್ನು ಅವಳು ಕಲಿತುಕೊಂಡಿದ್ದಳು. ಆದರೆ ಈಗ ಅವಳ ಪ್ರಶ್ನೆ, ಊರ ಪ್ರಶ್ನೆಯಾಯಿತು. ನಾಲ್ಕು ಜನರೆದುರು ಅವಳು ಮುಖವೆತ್ತದಂತಾಯ್ತು. ಲಕ್ಷ್ಮಿಗೆ ಏನೂ ಯಾವ ಅಧಿಕಾರವೂ ಬೇಕಿರಲಿಲ್ಲ. ಎಂದೂ ಅವಳು 'ಕೀಲಿಕೈ' ಯನ್ನು ಆಶಿಸಿರಲಿಲ್ಲ. ಯಾರನ್ನೂ ಕೇಳಿರಲಿಲ್ಲ. ಆದರೆ ಸುಮ್ಮಸುಮ್ಮನೆ ಎಲ್ಲವೂ ಬೆಳೆಯುತ್ತ ಹೋಯಿತು. ಸೀತಕ್ಕ ಕಳಸಾಪೂರದಲ್ಲಿ ಅನೇಕ ವರ್ಷಗಳಿಂದ ಇದ್ದವಳು. ಹೀಗಾಗಿ ಅವಳ ಬೆನ್ನುಕಟ್ಟಿ, ಲಕ್ಷ್ಮಿಯನ್ನು ಹೀಯಾಳಿಸುವ ಜನ ಬೆಳೆಯತೊಡಗಿತು. " ಬಡವರ ಹುಡಿಗೆ! ಭಂಗಾರದ ಆಶೆ ಇರಬೇಕು! " ಎಂದು ಜನ ಆಡಿಕೊಳ್ಳಹತ್ತಿತು. ಇಂಥ ಮಾತುಗಳನ್ನೆಲ್ಲ ಹೇಗೆ ಸಹನೆ ಮಾಡಿಕೊಳ್ಳಬೇಕು? ಲಕ್ಷ್ಮಿಗೆ ತಿಳಿಯದಾಯಿತು.

ಒಂದು ವಾರ ಇದೇ ರೀತಿಯಾಗಿ ದಿನಗಳು ಹೋದವು. ಲಕ್ಷ್ಮಿ ಚಿಂತೆಯಿಂದ ಸೊರಗಹತ್ತಿದಳು. ಊರಲ್ಲಿಯ ಈ ಜಂಜಾಟದಿಂದ ದೂರವಾಗಿ, ಸ್ವಸ್ಥವಾಗಿ ಕುಳಿತುಕೊಳ್ಳಲು ಕಳಸಾಪೂರ ದಿಬ್ಬದ ಸ್ಥಳ ಅವಳಿಗೆ ನೆನಪಾಯಿತು. ಎತ್ತರವಾದ ಆ ದಿಬ್ಬವನ್ನು ಏರಿಹೋಗಿ, ವಿಶಾಲವಾದ ಮರದ ಕೆಳಗೆ ಕುಳಿತು, ಗಾಳಿಯಲ್ಲಿ ತನ್ನ ಮೈಯೊಡ್ಡಿ ಸಮಾಧಾನ ಪಡೆಯಬೇಕೆಂದು ಎಣಿಸಿದಳು. ನಾರಾಯಣರಾಯರನ್ನು ತನ್ನ ಜೊತೆಗೆ ಕರೆದುಕೊಂಡು ಹಿತ್ತಲಬಾಗಿಲಿಂದ ಹೊರಬಿದ್ದು, ಹಿಂದಿನ ಹಾದಿಯಿಂದ ಆ ದಿಬ್ಬವನ್ನು ಏರಹತ್ತಿದಳು. ಹಿಂದಕ್ಕೆ ಅವಳು ಅ ದಿಬ್ಬಕ್ಕೆ ಬಂದಾಗ ಯಾವುದೋ ಭಯವಿತ್ತು. ತಾನು ಮಾಡಬಾರದ ಕೆಲಸವನ್ನು ಮಾಡುತ್ತಿರುವೆನೋ, ತಾನು ಅಂಥ ಸ್ಥಳದಲ್ಲಿ

ಹೋಗಬೇಕೋ ಹೋಗಬಾರದೋ ಮುಂತಾದ ವಿಚಾರಗಳ ಅಂಜಿಕೆಯಿತ್ತು. ಈಗ ಅಂಥ ಭಯವೇನೂ ಇರಲಿಲ್ಲ. ನಿರ್ಭಯದಿಂದ ಅವಳು ಆ ದಿಬ್ಬವನ್ನು ಏರುತ್ತಿದ್ದಳು. ನಾರಾಯಣರಾಯರು ಏನೂ ಮಾತನಾಡುತ್ತಿರಲಿಲ್ಲ. ಲಕ್ಷ್ಮಿಯು ಹೇಳಿದ ಮಾತುಗಳಿಗೆಲ್ಲ ಹೂಂಗೊಟ್ಟುತ್ತಿದ್ದರು. ಲಕ್ಷ್ಮಿಯ ಬೆನ್ನ ಹಿಂದೆ ಕಲ್ಲುಗಳನ್ನು ಎಡವುತ್ತ ಸಾಗಿದ್ದರು. ಆ ದಿಬ್ಬದ ತುದಿಯನ್ನು ಮುಟಿದಾಗ ಸೂರ್ಯ ಮುಳುಗುತ್ತಲಿದ್ದ. ಲಕ್ಷ್ಮಿ ತನ್ನ ಭಾರವಾದ ತಲೆಯನ್ನು ಮರಕ್ಕೆ ಆನಿಸಿ, ಹುಣಸೇಮರದ ಕೆಳಗೆ ಹಾಸುಗಲ್ಲಿನ ಮೇಲೆ ಕುಳಿತುಕೊಂಡಳು. ಎಷ್ಟೋ ಹೊತ್ತು ಅವಳು ಏನೂ ಮಾತನಾಡಲಿಲ್ಲ. ಮೆಲ್ಲಗೆ ಬೀಸುವ ಆ ತಂಗಾಳಿ, ಅವಳ ಮುಂಗುರುಳು ತಿದ್ದಿ ತಿದ್ದಿ, ತಾಯಿಯಂತೆ ಸಮಾಧಾನ ಹೇಳುತ್ತಿತ್ತು. "ಬಿರುಗಾಳಿ ಇರಲಿ ಇರದಿರಲಿ, ಮಳೆ ಇರಲಿ ಇರದಿರಲಿ ಏನೇ ಆದರೂ ಎಲ್ಲಕ್ಕೂ ಮೈಯೊಡ್ಡಿ ನಿಂತ ಈ ಹುಣಸೇಮರದ ಹಾಗೆ ನೀನೂ ನಿಲ್ಲು" ಎಂದು ಬೋಧಿಸಿದಂತೆ ಲಕ್ಷ್ಮಿಗೆ ಭಾಸವಾಗುತ್ತಿತ್ತು. ಆ ನಿಸರ್ಗದ ಮಡಿಲಲ್ಲಿ ಮಲಗಿ ತನ್ನನ್ನು ತಾನೆ ಮರೆತಳು. ಸೂರ್ಯ ಮುಳುಗಿದರೂ ಕತ್ತಲೆಯಾಗುತ್ತಿದ್ದರೂ ಅವಳಿಗೆ ತನ್ನರಿವು ಇರಲಿಲ್ಲ.

ಬೊಡ್ಡೆಯ ಆಚೆಯ ಬದಿ ಸುಮ್ಮನೆ ಕುಳಿತ ನಾರಾಯಣರಾಯರು ಎದ್ದು ಬಂದು, "ಕತ್ತಲಾಯಿತು" ಎಂದು ಹೇಳಿದಾಗ, ಲಕ್ಷ್ಮಿ 'ಹಾಂ' ಎನ್ನುತ್ತ ಎಚ್ಚತ್ತಳು. ಸುತ್ತಲೂ ಮಬ್ಬುಗತ್ತಲೆ. ಅದನ್ನು ನೋಡಿ ಅವಳಿಗೆ ಆ ಹಿಂದಿನ ಹಳೆಯ ಸಂಗತಿ ನೆನಪಾಯಿತು. ನಾರಾಯಣರಾಯರ ಎದುರು ಆ ದಿನ್ನಿ ದೇವರ ಸುದ್ದಿ ತೆರೆದಳು. ಆ ಹೆಸರನ್ನು ಕೇಳಿದ ಕೂಡಲೇ ನಾರಾಯಣರಾಯರು ಚಿಟ್ಟನೇ ಚೀರಿದರು. "ಒಲ್ಲೆ, ಒಲ್ಲೆ," ಎಂದು ಒದರುತ್ತ, ಮೈಯಲ್ಲಿ ಗಾಳಿ ಹೊಕ್ಕವರಂತೆ, ಅಲ್ಲಿಂದ ಓಡಿದರು. ಲಕ್ಷ್ಮಿಯು ಕೂಗಿಯೇ ಕೂಗಿಕೊಂಡಳು. ನಾರಾಯಣರಾಯರು ಆ ಕತ್ತಲೆಯಲ್ಲಿಯೇ ಮಾಯವಾಗಿ ಹೋದರು.

ನಾರಾಯಣರಾಯರಿಗೆ ಮತ್ತೆ ಜ್ವರ! ಮತ್ತೆ ಅದೇ ಮೊದಲಿನ ಹಾಡು !!

೧೦

ಅಂದು ಶಾಂತಾ ಬೆಳಗಿನಿಂದ ಗಡಿಬಿಡಿ ನಡೆಯಿಸಿದ್ದಳು. ಪ್ರತಿದಿನ ಏಳುವುದಕ್ಕಿಂತ ಒಂದು ತಾಸು ಮುಂಚಿತವಾಗಿ ಎದ್ದು, ಮನೆಯ ಕಸಗೂಡಿಸಿದಳು. ಬಾವಿಯಿಂದ ನೀರು ಜಗ್ಗಿ ಮನೆಯ ಮುಂದೆ ಥಳಿ ಹಾಕಿ, ರಂಗೋಲಿ ಹಾಕಿದಳು. ಬೆಳಗಿನ ನೇಸರನ ಚೆಂಗುಲಾಬಿಯ ಕಿರಣಗಳು ಆ ಅಂಗಳದಲ್ಲಿ ಮೂಡಿದಾಗ, ಅಲ್ಲಿ 'ಸುಸ್ವಾಗತಮ್' ಎಂಬ ಕನ್ನಡ ಅಕ್ಷರಗಳು ಶೋಭಿಸುತ್ತಿದ್ದವು. ನೆರೆಮನೆಯ ಶೋಭಾ, ರಂಗವಲ್ಲಿಯ ಶೃಂಗಾರವನ್ನು ನೋಡಿ ಶಾಂತಾಳಿಗೆ ಕೇಳಿದಳು. "ಏನು ಈ ದಿನ ಯಾರು ಬರಲಿರುವರು? ಬಹಳ ಉತ್ಸಾಹದಲ್ಲಿರುವೆ?" ಎಂದು. "ನಮ್ಮ ಮನೆಗೆ ದೊಡ್ಡ ಪಾವುಣೆ (ಅತಿಥಿ) ಬರುವವರಿದ್ದಾರೆ" ಎಂದು ಶಾಂತಾ ನಗುತ್ತ ಉತ್ತರ ಕೊಟ್ಟಳು. ಮುಂದೆ ಶೋಭಾಳ ಜೊತೆಗೆ ಮಾತಾಡುವಷ್ಟು ಬಿಡುವು ಇರಲಿಲ್ಲ. ಧಡಧಡನೆ ಒಳಗೆ ಹೋದಳು.

ಶಾಂತಾಳ ಮನೆ ಚಿಕ್ಕದು; ಆರು ಅಂಕಣದ್ದು ಅಷ್ಟೆ. ಎರಡಂಕಣದಲ್ಲಿ ಪಡಸಾಲೆ, ಎರಡಂಕಣದಲ್ಲಿ ನಡುಮನೆ, ಉಳಿದ ಭಾಗದಲ್ಲಿ ಅಡುಗೆಯ ಮನೆ ಮತ್ತು ಬಚ್ಚಲಮನೆ. ಆ ಚಿಕ್ಕ ಮನೆಯನ್ನು ಚೊಕ್ಕಟವಾಗಿ ಸುಂದರವಾಗಿಡಲು ಶಾಂತಾ ಹವಣಿಸಿದಳು. ಪಡಸಾಲೆಯಲ್ಲಿರುವ ಗಾಂಧೀಜಿಯವರ ಭಾವಚಿತ್ರವನ್ನು ಬಟ್ಟೆಯಿಂದ ಒರೆಯಿಸಿ, ಅದಕ್ಕೊಂದು ನೂಲಿನ ಮಾಲೆ ಹಾಕಿದಳು. ಅಲ್ಲಿ ಬಿದ್ದಿರುವ ಹಲವು ಪುಸ್ತಕಗಳನ್ನು ತೆಗೆದು ಓರಣವಾಗಿ ಒಂದು ಮಾಡದಲ್ಲಿ ಇಟ್ಟಳು. ಅಡುಗೆಯ ಮನೆಯಲ್ಲಿರುವ ಹಲವು ಹಿತ್ತಾಳೆ ಭಾಂಡೆಗಳನ್ನು ತೆಗೆದು ಬಚ್ಚಲದಲ್ಲಿಟ್ಟು, ಸ್ವಚ್ಛ ಮಾಡಬೇಕೆಂದು ಹವಣಿಸಿದಳು. ಆದರೆ ಅವಳಿಗೆ ಒಮ್ಮೆಲೆ ಸಾಮಾನುಗಳ ನೆನಪಾಯಿತು. "ಮಧ್ಯಾಹ್ನ ಏನು ಫಲಾಹಾರ ಮಾಡಬೇಕು? ಅವಲಕ್ಕಿ! ಸಿಹಿ ಯಾವುದು? ಹೂಂ ಸಿಹಿ ಸಜ್ಜಿಗೆ? ಮತ್ತೆ??" ಹೀಗೆ ವಿಚಾರಿಸುತ್ತ, ಹಿತ್ತಾಳೆ ಭಾಂಡಿಗಳನ್ನು ತಿಕ್ಕುವುದನ್ನು ಬಿಟ್ಟು, ಫಲಾಹಾರದ ಸಾಮಾನು ಹುಡುಕುತ್ತ ಡಬ್ಬಿಗಳನ್ನು ಕಿತ್ತಾಡಿದಳು. ಸಜ್ಜಿಗೆ ಬಹಳೇ ಸ್ವಲ್ಪವಿತ್ತು. ಅವಲಕ್ಕಿ ಏನೂ ಇರಲಿಲ್ಲ.

ಏನು ಮಾಡಬೇಕು? ತನ್ನ ಪತಿಯನ್ನು ಎಬ್ಬಿಸಿ ಬಿಡಬೇಕೆ? ರಾತ್ರಿ ಎಷ್ಟು ಕುಳಿತಿದ್ದರೋ ಏನೋ!........ ಇರಲಿ, ಇದೊಂದು ದಿನ ನಿದ್ದೆಗೆಡಿಸಿದರೆ ಏನಾಯಿತು ಎಂದು ನಡುಮನೆಗೆ ಹೋಗಿ, ಮುಸುಕಿ ಹಾಕಿ ಮಲಗಿಕೊಂಡ ತನ್ನ ಪತಿಯ ಮುಸುಕು ತೆರೆದಳು.

"ಹಾಂ! ಇದೇನು? ಇಷ್ಟು ಬೇಗ?" ಎಂದು ಚಟಕ್ಕನೇ ಎದ್ದು ಕುಳಿತರು ವೆಂಕಟೇಶ ಅವರು.

"ಹೂಂ! ಹೊತ್ತಾಗಿದೆ. ಏಳಿರಿ ಬೇಗ...."

"ಅಲ್ಲೇ ಈಗ ಏಳು ಆಗಿರಬೇಕು!.......... ಇನ್ನೂ ತಂಪು ಗಾಳಿ ಇದೆ."

"ಏಳು ಗಂಟೆ ಅಂದರೆ ಏಳೂ ಹೊತ್ತೆ ಅಲ್ಲವೆ?........ ಏಳಿರಿ ಕೆಲಸಗಳು ಇವೆ........ಮನೆಯಲ್ಲಿ ಒಂದೂ ಸಾಮಾನು ಇಲ್ಲ."

"ಅಯ್ಯೋ! ಬೆಳಿಗ್ಗೆ ಎದ್ದ ಕೂಡಲೇ ನಿನ್ನ ಪಾರಾಯಣ. ಇದ್ದದ್ದು ತಿಂದರಾಯಿತು........"

"ಅಲ್ಲ ಈ ದಿನ ಮಧ್ಯಾಹ್ನ ಅವರು ಬರುವುದು ಗೊತ್ತಿಲ್ಲೇನು? ನಿನ್ನೆ ರಾತ್ರಿಯೇ ಹೇಳಿದೆನಲ್ಲ ನಿಮಗೆ? ನಿಮಗೆ ಮನೆ ಕಡೆಗೆ ಲಕ್ಷ್ಯವೇ ಇರುವ ಹಾಗಿಲ್ಲ........ ಹೂಂ! ಮಾತು ಬಹಳೇ ಬೇಡ. ಬೇಗ ಎದ್ದು ಏನಾದರೂ ವ್ಯವಸ್ಥೆ ಮಾಡಿರಿ........"

"ಅವರು ಬರುವುದು ಮಧ್ಯಾಹ್ನ ೪ ಗಂಟೆಗೆ! ಅವರು ಇನ್ನೂ ಬರುತ್ತಾರೋ ಇಲ್ಲವೋ ಅದೂ ನಿಯಮವಿಲ್ಲ. ನಿನ್ನ ಗಡಿಬಿಡಿ ಈಗಿನಿಂದಲೇ ಆರಂಭವಾಗಿದೆಯಲ್ಲ?........"

"ನನ್ನ ಉತ್ಸಾಹಕ್ಕೆ ಸುಮ್ಮನೇ ನೀರು ಎರಚಬೇಡಿರಿ. ನೋಡೋಣ. ಈ ದಿನವಾದರೂ ನನ್ನ ಮಾತು ಕೇಳಿರಿ."

"ಹೂಂ!" ಎಂದವರೇ ವೆಂಕಟೇಶ ಹಾಸಿಗೆಯಿಂದ ಎದ್ದರು.

ಅವರು ಬೆಳಗಿನ ವಿಧಿಗಳನ್ನೆಲ್ಲ ತೀರಿಸಿಕೊಂಡು, ಬೇಗನೆ ಹೊರಗೆ ಹೊರಡುವಂತೆ ಶಾಂತಾ ಸಹಾಯಕಳಾದಳು. ಅವರ ನೆಹರೂ ಶರ್ಟ, ಗಾಂಧೀ ಟೊಪ್ಪಿಗೆ ಎಲ್ಲವನ್ನು ಸಜ್ಜು ಮಾಡಿಟ್ಟಳು. ಅವರ ಕೈಯಲ್ಲಿ ೨-೩ ಕೈಚೀಲಗಳನ್ನು ಕೊಟ್ಟು, "ನೋಡಿರಿ, ಯಾವ ಸಾಮಾನೂ ಮರೆಯಬೇಡಿರಿ........"

ಎಂದು ಆಜ್ಞೆ ಮಾಡಿದಳು.

ವೆಂಕಟೇಶ ಅವರು ತಮ್ಮ ಕಿಸೆಯಲ್ಲಿರುವ ಹಣವನ್ನು ಎಣಿಸಿ, ಮುಖ ಕಿವಿಚುತ್ತಿರಲು “ ಇಲ್ಲ, ನೀವು ಎಲ್ಲಿಂದಾದರೂ ಸಾಲಮಾಡಿಯಾದರೂ ಸಾಮಾನುಗಳನ್ನು ತೆಗೆದುಕೊಂಡು ಬರ್ರಿ ” ಎಂದಳು.

ವೆಂಕಟೇಶ ಅವರು ಹೂಂಗುಟ್ಟಿ, ಹೊಸತಿಲದ ಹೊರಗೆ ಕಾಲಿಡುತ್ತಿರಲು ಮತ್ತೆ ಕರೆದು ಶಾಂತಾ ಹೇಳಿದಳು, “ ನೋಡಿರಿ, ಆದಷ್ಟು ಬೇಗ ಮನೆಗೆ ಬರಬೇಕು. ನೀವು ಏನಾದರೂ ನೆವ ಹೇಳಿ ಎಲ್ಲಿಯಾದರೂ ಹೋಗಬೇಡಿರಿ. ಅವರು ಕರೆದರು, ಇವರು ಬಿಡಲಿಲ್ಲ ಎಂದು ಏನೂ ಅನ್ನಬೇಡಿರಿ. ಇವತ್ತೊಂದು ದಿನ ಮನೆಯಲ್ಲಿ ಇರಬೇಕು. ನೋಡಿರಿ ಮತ್ತೆ.... ”

ಶಾಂತಾಳ ಆಜ್ಞೆಗೆ ಅನುಮತಿ ಕೊಟ್ಟು, ವೆಂಕಟೇಶ ಅವರು ಮನೆಯಿಂದ ಮೆಲ್ಲಗೆ ಹೊರಬಿದ್ದರು. ತಾನು ಭಾಂಡೆಗಳನ್ನು ತೊಳೆಯುವಾಗ, ಮತ್ತೆ ಯಾರಾದರೂ ಬಂದು ತನ್ನ ಕೆಲಸಕ್ಕೆ ಅಡ್ಡಿಯಾಗಬಾರದೆಂದು ಬಾಗಿಲ ಹಾಕಿಕೊಂಡು ಒಳಗೆ ಬಂದಳು.

ಬಚ್ಚಲಮನೆಯಲ್ಲಿಳಿದು ಎರಡು ಪಾತ್ರೆಗಳಿಗೆ ಹುಣಸೆಹಣ್ಣು ಹಚ್ಚಿದ್ದಳೊ ಇಲ್ಲವೋ, ಆಗ ಕೂಸು ಚಿಟ್ಟನೇ ಚೀರಿ ಅಳಲಾರಂಭಿಸಿತು. “ ಬಂದೆ ! ರಾಜಾ ಬಂದೆ.... ” ಎನ್ನುತ್ತ, ತನ್ನ ಕೆಲಸ ಹಾಗೆಯೇ ಬಿಟ್ಟು, ನಡುಮನೆಗೆ ಓಡಿ ಬಂದಳು. ಹಾಸಿಗೆಯಿಂದ ಕೂಸನ್ನು ಎತ್ತಿಕೊಂಡು, ತನ್ನ ಎದೆಗೆ ಅಪ್ಪಿಕೊಳ್ಳುತ್ತ ಶಾಂತಾ ತನ್ನ ಕೂಸನ್ನು ಆಡಿಸಹತ್ತಿದಳು. “ ರಾಜಾ, ಈ ದಿನ ಒಬ್ಬ ರಾಣಿ ಬರತಾಽಳ. ಮತ್ತೊಬ್ಬ ರಾಜಾ ಬರತಾರ.... ಹಾಂ ! ” ಮೊಲೆ ಕುಡಿಸುವುದನ್ನು ಬಿಡಿಸಿ, ಕೂಸಿಗೆ ಮುದ್ದಿಟ್ಟಳು. “ ನೋಡು ರಾಜಾ ಈ ದಿನ ಎರಕೋಬೇಕು;.... ಸಿಂಗಾರ ಆಗಬೇಕು. ಏಳು ಲಗೂನೆ ! ಣ್ಣ ? ” ಶಾಂತಾ ಮತ್ತೆ ಮತ್ತೆ ಆ ಕೂಸಿಗೆ ಮುದ್ದಿಟ್ಟು ಆಡಿಸಿದಳು. ಅಡುಗೆಯ ಮನೆಯಲ್ಲಿಯೆ ಒಂದು ಚಿಕ್ಕ ಹಾಸುಗೆಯನ್ನು ಮಾಡಿ, ಕೂಸನ್ನು ಅಲ್ಲಿ ಮಲಗಿಸಿ ಶಾಂತಾ ಹೇಳಿದಳು “ ನೋಡು ರಾಜಾ, ಈ ದಿನ ಏನೂ ಅಳಬಾರದು. ನನ್ನ ಕೆಲಸ ಮುಗಿಯೂ ತನಕ ಸುಮ್ಮನೇ ಮಲಗಿಕೋಬೇಕು ! ಣ್ಣ ?.... ” ತಾಯಿಯ ಆಜ್ಞೆಯನ್ನು ಒಪ್ಪಿಕೊಂಡಂತೆ, ಆ ಕೂಸು ಮುದ್ದುನಗೆ ಬೀರಿತು.

ಶಾಂತಾ ಮತ್ತೆ ಬಚ್ಚಲುಮನೆಗೆ ಇಳಿದಳು. ಬಾಗಿಲು ತಟ್ಟಿದ ಸಪ್ಪಳ

ವಾಯಿತು.

“ ಯಾರು ? ” ಎಂದು ಶಾಂತಾ ಕೂಗಿದಳು ಕುಳಿತಲ್ಲಿಂದಲೆ.

ಉತ್ತರವೇನೂ ಬರಲಿಲ್ಲ. ಸುತ್ತುಮುತ್ತಲೂ ಮರಾಠಿ ಮಾತನಾಡುವ ಜನ ಹೆಚ್ಚು. ಆದ್ದರಿಂದ ಶಾಂತಾ “ ಕೋಣ ? ........... ” ಎಂದು ಒದರಿದಳು.

ಇದಕ್ಕೂ ಏನೂ ಉತ್ತರ ಬರಲಿಲ್ಲ. ಆದರೆ ಬಾಗಿಲ ತಟ್ಟುವ ಸದ್ದು ಮಾತ್ರ ಇದ್ದಿತು. ಶಾಂತಾ ತನ್ನ ಕೆಲಸಕ್ಕೆ ಅಡ್ಡಿ ಬರುವವರನ್ನು ಶಪಿಸುತ್ತ ಬಚ್ಚಲು ಮನೆಯಿಂದ ಎದ್ದಳು. “ ಬಂದೆ, ಬಂದೆ ” ಅನ್ನುತ್ತ ಬಾಗಿಲ ತೆರೆದಳು.

ಬಾಗಿಲದಲ್ಲಿ ನಿಂತವರನ್ನು ನೋಡಿ, ಬಹಳೇ ಆಶ್ಚರ್ಯವಾಯಿತು. “ ಅಯ್ಯೋ ನೀನೇ !! ಮಹಾರಾಯತೀ ಹೆಸರಾದರೂ ಹೇಳಬಾರದೇ........ ಬಾರೇ ಬಾ ಒಳಗೆ ” ಎಂದು ಶಾಂತಾ ಕೈಹಿಡಿದು ಜಗ್ಗಿದಳು.

“ ನಿಲ್ಲೇ ನಿಲ್ಲು. ನಿನ್ನ ಸುಸ್ವಾಗತದ ರಂಗೋಲಿ ನೋಡುತ್ತೇನೆ.... ಯಾರು ಬರುವವರಿದ್ದಾರೆ ನಿಮ್ಮ ಮನೆಗೆ, ಸುಸ್ವಾಗತ ಬಹಳೇ ಚೆಂದಾಗಿ ಬರೆದಿರುವಿ ?........ ”

“ ನಮ್ಮ ಬಡವರ ಮನೆಗೆ ಯಾರು ಬರಬೇಕು ? ಏನೋ ನೀನೆ ಭಾಗ್ಯಲಕ್ಷ್ಮಿ ಬರುತ್ತೀಯೆಂದು.... ”

“ ಏಕೆ ಶಾಂತಾ, ನನಗೆ ಲಕ್ಕೂ ಅನ್ನುವುದನ್ನು ಬಿಟ್ಟುಬಿಟ್ಟೆಯೇನು ? ”

“ ಲಕ್ಕ್ಯಾ....ಬಾ – ಬಾ.... ”

“ ಹೂಂ ! ನನ್ನನ್ನು ಹೀಗೆ ಕರೆ. ಅಂದರೆ ಒಳಗೆ ಬರುತ್ತೇನೆ. ”

ಲಕ್ಷ್ಮಿ ಶಾಂತಾಳ ಜೊತೆಗೆ ಒಳಗೆ ಬರುವಾಗ, ಹನುಮಪ್ಪನನ್ನು ಕರೆದು ಹೇಳಿದಳು “ ಇದೇ ಡಮಣಿ ತೆಗೆದುಕೊಂಡು ಮನೆಗೆ ಹೋಗು. ನಾನು ಬರುವವರೆಗೆ ಎಲ್ಲಿಯೂ ಹೋಗಬೇಡ. ಮನೆಯಲ್ಲಿಯೇ ಇರು............ ತಿಳಿಯಿತೋ ಇಲ್ಲೋ ? ”

“ ನನ್ನ ಬುದ್ಧಿ ಕಲ್ಲು ಎನ್ನುವುದು ನಿಮಗೆ ಗೊತ್ತಿಲ್ಲೇನು ಸಾಹೇಬ ಚಿಕ್ಕ ಬಾಯಿಯವರ ? ”

“ ಸಾಕು ಬಿಡೋ, ನಿನ್ನ ಮಾತು. ಮಂಗನ ಹಾಗೆ ಮಾತನಾಡಬೇಡ.

ನಾನು ಆದಷ್ಟು ಲಗೂನೇ ಬರುತ್ತೇನೆ. ನೀನು ಅಲ್ಲಿಯೇ ಇರು."

"ಹೂಂ" ಎನ್ನುತ್ತ ಹನುಮಪ್ಪ ಹೊರಟುಹೋದ.

ಶಾಂತಾ ಲಕ್ಷ್ಮಿಯನ್ನು ಒಳಗೆ ಕರೆದುಕೊಂಡು ಬರುತ್ತ ಕೇಳಿದಳು, "ಅಲ್ಲೆ, ಮಧ್ಯಾಹ್ನ ೪ ಕ್ಕೆ, ಬರಬಹುದು ಎಂದು ನಿಮ್ಮ ಹನುಮಂತ ಹೇಳಿದ್ದ. ಬೆಳಿಗ್ಗೆನೆ ಬಂದುಬಿಟ್ಟೆಯಲ್ಲೆ?........"

"ನಿನ್ನ ಮನೆಗೆ ಬರುವುದು ಎಂದರೆ ಹೀಗೆಯೆ ನೋಡು. ನೀನು ಇಲ್ಲೆ ಇರುವ ಸುದ್ದಿ ತಿಳಿದ ಕೂಡಲೆ........"

"ಅಂದರೆ ನಿಮ್ಮ ಹನುಮಂತ ಯಾವಾಗ ಸುದ್ದಿ ಮುಟ್ಟಿಸಿದ?"

"ಸಂಜೆ ಪೇಟೆಯಿಂದ ಬಂದ ಕೂಡಲೇ. ನೀನೇನೊ ಅಲ್ಲೆ ರಸ್ತೆಯಲ್ಲಿ ಭೆಟ್ಟಿಯಾದಿಯಂತೆ....!"

"ಆಹುದು. ತಾನೇ ಓಡಿ ಬಂದು ಹನುಮಂತ ಮಾತನಾಡಿಸಿದ. ಸಂಜೆಯಾಗಿತ್ತು. ಆದ್ದರಿಂದ ನಾನು ಮನೆಗೆ ಬೇಗ ಬರಬೇಕಾಯಿತು?"

ಕೂಸು ಅತ್ತಿತು. 'ಬಂದೇ ರಾಜಾ....' ಅನ್ನುತ್ತ, ಒಳಗೆ ಶಾಂತಾ ಹೋದಳು. ಲಕ್ಷ್ಮಿ ಅವಳ ಬೆನ್ನ ಹಿಂದೆ ಹೋಗಿ, "ಏನೇ ಶಾಂತಾ, ಈ ಸುದ್ದಿಯನ್ನು ನನಗೆ ಹೇಳಬಾರದೇ? ಎಷ್ಟು ಕೆಟ್ಟ ಇರುವೀ? ತಾ ಇಲ್ಲೆ, ರಾಜಾನ್ನ...." ಲಕ್ಷ್ಮಿ ರಾಜನನ್ನು ಎತ್ತಿಕೊಂಡಳು. ರಾಜನನ್ನು ನೋಡಿ ಮುದ್ದು ಕೊಡುತ್ತ "ಎಷ್ಟು ತಿಂಗಳಾಯಿತೇ ಈಗ?" ಎಂದು ಕೇಳಿದಳು.

"ನಾಲ್ಕು ತಿಂಗಳ!?"

"ನಾಲ್ಕು ತಿಂಗಳ!!" ಲಕ್ಷ್ಮಿ ಆಶ್ಚರ್ಯ ವ್ಯಕ್ತ ಮಾಡಿದಳು. "ಅಲ್ಲೇ ನನಗೆ ಏನೂ ಹೇಳಬಾರದೇ? ನೋಡು ಇನ್ನು ಮೇಲೆ ನಿನ್ನ ಪಾಲಾ ಫೂ ಬಿಡಬೇಕಾಗುವುದು!........ ಹೂಂ! ಯಾರ ಹಾಗೆ ಇದೆ? ಶಾಂತಾ, ನಿನ್ನ ಹಾಗೆಯಂತೂ ಕಾಣುವುದಿಲ್ಲ....!"

ಶಾಂತಾ ಗಿಡ್ಡಿ; ಮೈಬಣ್ಣವೂ ಸಾದುಗಪ್ಪು; ಮೂಗು ಮೊಂಡ; ಲಕ್ಷ್ಮಿ ಗಿದ್ದಷ್ಟು ಮುಖದ ಮೇಲೆ ಕಳೆ ಅವಳಿಗಿರಲಿಲ್ಲ. ಕೂಸು ಮಾತ್ರ ಶಾಂತಾಳ ಹಾಗೆ ಇರಲಿಲ್ಲ. ಕೆಂಪು ಮೈಬಣ್ಣವಿದ್ದು, ಮುಖದಲ್ಲಿ ಕಳೆಯಿತ್ತು. ಲಕ್ಷ್ಮಿಯ ಮಾತಿಗೆ ಶಾಂತಾ ಕೇಳಿದಳು "ನನ್ನ ಹಾಗೆ ಮೊಂಡು ಮೂಗು ಇಲ್ಲವೆಂದ ಮೇಲೆ ಯಾರ ಹಾಗೆ ಇರಬೇಕು? ನೀನೇ ಹೇಳು."

"ಗೊತ್ತಾಯಿತು ಬಿಡೆ........ಅಪ್ಪನ ಹಾಗೆ" ಎಂದು ಶಾಂತಾಳ ತಲೆಗ
ತನ್ನ ಕೈಯಿಂದ ಬಡಿಯುತ್ತ ಹೇಳಿದಳು.

ಲಕ್ಷ್ಮಿಯೇನೊ ಮನೆಗೆ ಬಂದಳು. ಆದರೆ ಶಾಂತಾಳ ಸಿದ್ಧತೆ ಏನ
ಆಗಿರಲಿಲ್ಲ. ಭಾಂಡಿಗಳೆಲ್ಲ ಬಚ್ಚಲುಮನೆಯಲ್ಲಿಯೇ ಬಿದ್ದಿದ್ದವು. ಫಲಾಹ
ರಕ್ಕಾಗಿ ಪದಾರ್ಥಗಳು ಇನ್ನೂ ಬಂದಿರಲಿಲ್ಲ. ಲಕ್ಷ್ಮಿ ಮಧ್ಯಾಹ್ನದಲ್ಲಿ ಬ
ಬಹುದೆಂಬ ನಿರೀಕ್ಷಣೆ ಶಾಂತಾಳಿಗೆ! ಬೆಳಗಾವಿಯಿಂದ ಶಹಪೂರಿಗೆ ಬರುವಾ
ದಾರಿಯಲ್ಲಿ ಭೆಟ್ಟಿಯಾದ ನೀರಿನ ಹನುಮಪ್ಪನೂ ಅದೇ ರೀತಿಯಾಗಿ ಹೇಳಿದ್ದ
ಆದರೆ ಈಗ ದೃಶ್ಯವೆಲ್ಲವೂ ಬದಲಾಯಿತು.

ಲಕ್ಷ್ಮಿ ಒಂದು ಚಾಪೆಯನ್ನು ತೆಗೆದುಕೊಂಡು ಅಡುಗೆಯ ಮನೆಯಲ್ಲಿಯೆ
ಬಂದು ಕುಳಿತುಕೊಂಡಳು. ಇದರಿಂದ ಶಾಂತಾಳಿಗೆ ನುತ್ತಷ್ಟು ಅಡಚಣಿಯಾ
ಯಿತು. ಲಕ್ಷ್ಮಿ ತನ್ನ ಕೇವಲ ಗೆಳತಿಯಾದರೇನಾಯಿತು. ಈಗ ಅವಳ
ಜಾಗಿರದಾರರ ಮನೆಯಲ್ಲಿದ್ದವಳು. ಅವಳ ಪರಿಸ್ಥಿತಿ ಬಹಳ ಬದಲಾಗಿದೆ
ಮೈಮೇಲೆ ಬೆಲೆಯುಳ್ಳ ವಸ್ತ್ರ ಮತ್ತು ಆಭರಣಗಳು ಇವೆ. ಅವಳ ಮುಖ
ಮುದ್ರೆಯೂ ಬದಲಾಗಿದೆ. ಅವಳಿಗೆ ತಕ್ಕಂತೆ, ಸ್ವಲ್ಪಾದರೂ ಸನ್ಮಾನ ಮಾಡ
ಬೇಡವೆ? ಅಡುಗೆಯ ಮನೆಗೇ ಬಂದದ್ದರಿಂದ ಲಕ್ಷ್ಮಿಗೆ ಎಡಚು ಆಗಹತ್ತಿತು
ಲಕ್ಷ್ಮಿ ಹೇಳಿದಳು "ನೋಡು ಬಡವರ ಮನೆಗೆ ಬರುವುದಿಲ್ಲವೆನ್ನುತ್ತಿದ್ದ
ಹೇಗೆ ಬಂದೆ? ನಿನ್ನೆ ಹನುಮಂತ ಬಂದು ನಿನ್ನ ಸುದ್ದಿ ಹೇಳಿದಾಗಿನಿಂದ
ಯಾವಾಗ ಶಹಪೂರಿಗೆ ನಿನ್ನ ಮನೆಗೆ ಹೋದೇನೋ ಎಂದು ಅನಿಸುತ್ತಿತ್ತು
ಅಂತೆಯೆ ಎಲ್ಲ ಜವಾಬ್ದಾರಿಯನ್ನು ಮರೆತು ಇಲ್ಲಿಗೆ ಬಂದೆ. ಬೆಳಿಗ್ಗೆ ಎದ್ದ
ವಳೇ ಬಂದು ಬಿಟ್ಟೆ........"

"ಎಲ್ಲ ಒಳ್ಳೆಯದು ಆಯಿತು. ಆದರೆ ನಿನ್ನ ಯಜಮಾನರನ್ನು ಏಕ
ಬಿಟ್ಟು ಬಂದೆ?"

"ಅದೆಲ್ಲ ತೆಗೆದುಕೊಂಡು ಏನು ಮಾಡುವಿ? ನನ್ನ ಬಗ್ಗೆ ಕೇಳು...."

"ಅಂದರೆ ನಿನಗೂ ಅವರಿಗೂ ಸಂಬಂಧವಿಲ್ಲವೆ?"

"ಏನೆಂದೀ?"

"ಹಾಗಾದರೆ ಎಕೆ ಬಿಟ್ಟು ಬಂದೆ ಹೇಳು. ಬಡವರ ಮನೆ! ಸಣ್ಣ
ಮನೆ! ನಮ್ಮಲ್ಲಿ ಹೋಳಿಗೆ ತುಪ್ಪ ಹೇಗೆ ಸಿಗಬೇಕು ಎಂದು ಬಿಟ್ಟು ಬಂದೆ

ಯೇನು ?"

"ಅಂಥ ಹೋಳಿಗೆ ತುಪ್ಪದ ಸಮಯ ಏನೂ ಇಲ್ಲ. ಅದನ್ನೆಲ್ಲ ಆ ಸಂಸಾರವನ್ನೆಲ್ಲ ಮರೆತೇ ಬಂದಿದ್ದೇನೆ. ಆ ಮಾತು ಈಗ ತೆಗೆಯಬೇಡ ನೋಡು. ಆ ಮಾತು ತೆಗೆದು ನನ್ನ ತಲೆಯನ್ನು ಕೆಡಿಸಬೇಡ......... ಶಾಂತಾ ನನಗೆ ಈ ದಿನ ನೀನು ಮೇಜವಾನಿ ಮಾಡಿ ಬಡಿಸಬೇಕು. ಅದಕ್ಕೇ ನಾನು ಬಂದಿದ್ದೇನೆ.........ಮಧ್ಯಾಹ್ನ ನಾಲ್ಕಕ್ಕೆ ಮತ್ತೆ ನಾನು ತಿರುಗಿ ಮನೆಯಲ್ಲಿ ಇರಬೇಕು. "

ಮೇಜವಾನಿ ಅಂದ ಕೂಡಲೆ ಶಾಂತಾಳ ಎದೆ ಹಾರಿತು. ಅವಳ ಗಂಡ ಸಾಮಾನುಗಳ ವ್ಯವಸ್ಥೆ ಏನೂ ಮಾಡುತ್ತಿರಲಿಲ್ಲ. ಇವಳೇ ಎಲ್ಲವನ್ನೂ ನೋಡಿಕೊಂಡು ಹೊಂದಿಸಿಕೊಳ್ಳಬೇಕಾಗುತ್ತಿತ್ತು. ಆರ್ಥಿಕ ತೊಂದರೆಯ ಮೂಲಕ ಕೈಯಲ್ಲಿ ಹಣವೇ ಇರುತ್ತಿರಲಿಲ್ಲ. ವೆಂಕಟೇಶ ಅವರು ಮೊದಲು ಒಂದು ಹಳ್ಳಿಯಲ್ಲಿ ಕನ್ನಡ ಶಾಲಾ ಶಿಕ್ಷಕರಿದ್ದರು. ಆಮೇಲೆ ಕಾಂಗ್ರೆಸ ಚಳವಳಿ ಮುಂತಾದ ಸುದ್ದಿ ಕೇಳಿ ಅದನ್ನು ಬಿಟ್ಟುಕೊಟ್ಟು, ಬೆಳಗಾವಿಗೆ ಬಂದರು. ಬೆಳಗಾವಿಗೆ ಸಮೀಪವಿರುವ ಶಹಪೂರದಲ್ಲಿ ಒಂದು ಚಿಕ್ಕ ಮನೆ ಬಾಡಿಗೆಯಿಂದ ತೆಗೆದುಕೊಂಡರು. ಹಗಲು ರಾತ್ರಿ ಏನೇನೋ ಚಳುವಳಿಯ ಕೆಲಸವನ್ನು ಮಾಡುತ್ತ ಓಡಾಡುತ್ತಿದ್ದರು. ಖಾದಿ ಬಟ್ಟೆಗಳನ್ನು ಹಳ್ಳಿಹಳ್ಳಿಗೆ ಮನೆಮನೆಗೆ ಹೋಗಿ ಮಾರಾಟ ಮಾಡುತ್ತಿದ್ದರು. ಅಲ್ಲಲ್ಲಿ ಭಾಷಣ ಹೇಳುತ್ತಿದ್ದರು. ಖಾದಿ ಬಟ್ಟೆ ಮಾರಾಟ ಮಾಡುವುದರಿಂದ ಅಷ್ಟೇನು ಲಾಭವಿರಲಿಲ್ಲ. ಉದರಭರಣಕ್ಕೆ ಹಣದ ಕೊರತೆಯಾದಾಗ ಮತ್ತೆ ಬೇರೆ ಬೇರೆ ವ್ಯಾಪಾರವನ್ನು ಮಾಡುತ್ತಿದ್ದರು. ಅವರು ಮನೆಯಲ್ಲಿರುವುದೇ ತೀರ ಕಡಮೆ. ಅವರು ಮನೆಗೆ ಬರಹೋಗುವ ವೇಳೆಯೂ ನಿಶ್ಚಿತವಿರಲಿಲ್ಲ. ಆದುದರಿಂದಲೆ ನಾಲ್ಕು ಜನರು ಓಡಾಡುವಲ್ಲಿ, ಯಾರ ಹೆದರಿಕೆಯೂ ಇಲ್ಲದ ಭಾಗದಲ್ಲಿ ಚಿಕ್ಕ ಮನೆಯನ್ನು ಹಿಡಿದಿದ್ದರು. ವೆಂಕಟೇಶ ಅವರ ಸ್ವಭಾವಕ್ಕೆ ಹೊಂದಿಕೊಂಡು ಶಾಂತಾ ಬಡತನದಲ್ಲಿ ಬಹಳ ಕಷ್ಟದಿಂದ ಜೀವನ ಸಾಗಿಸಿದ್ದಳು. ಇಂಥ ಪರಿಸ್ಥಿತಿಯಲ್ಲಿ ಲಕ್ಷ್ಮಿಗೆ ಯಾವ ಸುದ್ದಿಯನ್ನೂ ತಿಳಿಸುವುದು ಶಾಂತಾಳಿಗೆ ಸಾಧ್ಯವಾಗಿರಲಿಲ್ಲ–ಅಲ್ಲ, ಇವನ್ನೆಲ್ಲ ಹೇಳಲು ಅವಳಿಗೆ ಮನಸ್ಸೇ ಇರಲಿಲ್ಲ.

ಲಕ್ಷ್ಮಿ ತನ್ನ ಗೆಳೆತನದ ಸಲುಗೆಯಲ್ಲಿ " ನನಗೆ ಈ ದಿನ ಮೇಜವಾನಿ

ಆಗಬೇಕು" ಎಂದಳು. ಶಾಂತಾ ಹೊರಹೊರಗೆ ಮುಗುಳುನಗೆ ನಕ್ಕ
"ತನ್ನ ಗಂಡ ಯಾವಾಗ ಬರುವರು? ಯಾವಾಗ ಸಾಮಾನು ತರುವರು?
ಇದರದೇ ಚಿಂತೆ ಅವಳಿಗೆ. ತನ್ನ ಪತಿಯದು ನಿಯಮವಿಲ್ಲ ಎಂದೆನಿಸಿತು
ಳಿಗೆ. ಆದ್ದರಿಂದ "ಲಕ್ಷ್ಮೂ, ಸ್ವಲ್ಪ ಕೂಡು, ಬಂದೆ" ಎಂದು ನೆರೆಹೊರೆ
ಮನೆಯಲ್ಲಿ ಶೋಭಾಳನ್ನು ಭೆಟ್ಟಿಯಾಗಿ ಸಾಮಾನು ಕಡವಾಗಿ ತರ
ಹೋದಳು.

ಶಾಂತಾ ಹೊರಗೆ ಹೋದಾಗ, ಲಕ್ಷ್ಮಿ ಸುತ್ತುಮುತ್ತಲೂ ಕಣ್ಣು ಚಾ
ನೋಡಿದಳು. ಕಳಸಾಪೂರದ ವಾಡೆಗೂ, ಈ ಮನೆಗೂ ಅಪರಂಪಾರ ಭೇದ
ರುವುದನ್ನು ಅರಿತಳು. ಶಾಂತಾಳ ಸ್ಥಿತಿ ಬೇರೆ ಇರುವುದೆಂಬುದನ್ನೂ ಅವ
ತಿಳಿದಳು. ಚಿಕ್ಕವರಿದ್ದಾಗ ಮುರನಾಳ ಹಳ್ಳಿಯಲ್ಲಿ ಇಬ್ಬರೂ ಕೂಡಿ ಆಟವಾ
ಬೆಳೆಯುತ್ತಿರುವಾಗಿನ ದಿನಗಳು ಬೇರೆ! ಇವು ಬೇರೆ! ಮದುವೆ
ಯೋಗಾಯೋಗ ಇಬ್ಬರನ್ನೂ ಎಷ್ಟು ಬದಲು ಮಾಡಿದೆಯಲ್ಲ ಎಂದು ಅವ
ನಿಸಿತು. ಮದುವೆಯಾಗುವ ಮುನ್ನ ಲಕ್ಷ್ಮಿ ಬಡತನದ ನಂಜನ್ನು ಕುಡಿ
ದ್ದಳು. ಆದರೂ ಸಾಯದಂತೆ, ಆ ನಂಜನ್ನು ಕಂಠದಲ್ಲಿಯೆ ಹಿಡಿದುಕೊಂ
ದ್ದಳು. ಶಾಂತಾಳೂ ಲಕ್ಷ್ಮಿಯಂತೆಯೆ ಬೆಳೆದಿದ್ದಳು. ಮದುವೆಯಾ
ಮೇಲೆಯೂ ಅದೇ ಸ್ಥಿತಿಯಿದೆಯಲ್ಲಾ ಎಂದು ಮರುಗಿದಳು. ಮನೆಯ ವಾ
ವರಣವು ಬಡತನಕ್ಕೆ ಸಾಕ್ಷಿಯಾಗಿತ್ತು. ಲಕ್ಷ್ಮಿ ಹೀಗೆ ಮರುಗುವಷ್ಟರಲ್ಲಿಯೆ
ಶಾಂತಾ ಹೊರಗಿನಿಂದ ಒಂದು ಪಾತೇಲಿಯಲ್ಲಿ ಅವಲಕ್ಕಿಯನ್ನು ಕಡವಾ
ತಂದುದನ್ನು ನೋಡಿದಳು. ಲಕ್ಷ್ಮಿಗೆ ಕೆಡುಕೆನಿಸಿತು. ಆದರೆ ತಮ್ಮ ನ
ಯಲ್ಲಿ ಯಾವ ವಿಷಗಾಳಿಯೂ ಬೀಸದಂತೆ ನೋಡಿಕೊಳ್ಳಬೇಕೆಂದು ಎಲ್ಲ ಮಾ
ಗಳನ್ನೂ ಕೃತಿಗಳನ್ನೂ ಚೇಷ್ಟೆಯಲ್ಲಿಯೆ ಸಾಗಿಸಿದಳು.

ಅವಲಕ್ಕಿಯನ್ನು ತಿಂದ ಮೇಲೆ ಲಕ್ಮಿ ಕೇಳಿದಳು "ನಿನ್ನ ಯಜಮಾನ
ಯಾವಾಗ ತಿರುಗಿ ಬರುವರು?"

"ಅವರದು ನಿಯಮವಿಲ್ಲ. ಈಗ ಬರುತ್ತೇನೆಂದು ಹೇಳಿದವರು ಇನ
ಬರಲೇ ಇಲ್ಲ. ಬರಬಹುದು—ಇನ್ನೊಂದೆರಡು ತಾಸಿನಲ್ಲಿ...."

"ಹಾಗಾದರೆ ನಡೆ. ಪೇಟೆಗೆ ಹೋಗೋಣ........"

"ಅಡುಗೆ ಬೇಡವೆ?"

"ಏಕೆ ಕಾಳಜೀ? ನಾವು ಇಬ್ಬರು ಇದ್ದೇವೆ. ಒಂದು ತಾಸಿನಲ್ಲಿ ಮಾಡೋಣ........"

"ಮೇಜವಾನಿ ಅಡುಗೆ. ಒಂದು ತಾಸಿನಲ್ಲಿ ಹೇಗೆ ಆಗಬೇಕು?"

"ಒಂದೇ ತಾಸಿನಲ್ಲಿ ಮಾಡೋಣ! ನಿನಗೇಕೆ ಚಿಂತೆ?........ ನಿನ್ನ ಯಜಮಾನರು ಬೈಯುತ್ತಾರೇನು?........ ನಾನು ಬೈಯಿಸಿಕೊಳ್ಳಲು ಸಿದ್ಧ ಳಿದ್ದೇನೆ."

"ಅಲ್ಲೆ ಲಕ್ಷ್ಮೀ, ಈ ಬೆಳಗಿನಲ್ಲಿ ಮನೆಯ ಕೆಲಸ ಬಿಟ್ಟು ಪೇಟೆಗೆ ಹೋಗಿ ಏನು ಮಾಡಬೇಕು?"

"ನನಗೆ ರಾಜಕುಮಾರನ ಫೇಡೆ ಕೊಡಿಸುವುದಿಲ್ಲವೇನು? ಶಹಪೂರದ ಫೇಡೆ ಪ್ರಸಿದ್ಧವಂತೆ..............! ಏನೇ ಇರಲಿ, ನಾನು ಹೇಳುತ್ತೇನೆ ನಡೆ!"

"ನಿಮ್ಮ ಅತ್ತೆಯವರ ಹಾಗೆ ನಿನಗೂ 'ನಾನು ಹೇಳುತ್ತೇನೆ' ಅಧಿಕಾರ ಬಂದಿತೇನು? ಮಹರಾಯಳೆ, ಅಲ್ಲಿ ನಿಮ್ಮ ಮನೆಯಲ್ಲಿ ನಿನ್ನ ಅಧಿಕಾರ ಇಲ್ಲಿ ನಮ್ಮ ಮನೆಯಲ್ಲಿಯೂ ನಿನ್ನ ಅಧಿಕಾರ. ಜಾಗಿರದಾರಿಣಿ! ನಿನ್ನ ಆಜ್ಞೆ ಮೀರುವ ಹಾಗಿಲ್ಲ........"

"ನೀನು ಏನೇ ಅನ್ನು. ಇದೊಂದು ದಿನ ನನ್ನ ಮಾತು ಕೇಳು" ಎಂದು ಬಲವಂತಪಡಿಸಿ, ಶಾಂತಾಳನ್ನು ಪೇಟೆಗೆ ಕರೆದುಕೊಂಡು ಹೋದಳು. ಫೇಡೆಯೊಂದೇ ತರಬೇಕಾಗುವುದೆಂದೂ, ಅರ್ಧ ತಾಸಿನಲ್ಲಿಯೆ ತಿರುಗಿ ಬರಬಹುದೆಂದೂ ತಿಳಿದು ಕಡವಾಗಿ ತಂದ ಎರಡು ರೂಪಾಯಿಗಳನ್ನು ಉಡಿಯಲ್ಲಿಟ್ಟುಕೊಂಡು ಶಾಂತಾ ಲಕ್ಷ್ಮಿಯ ಜೊತೆಗೆ ಪೇಟೆಗೆ ಹೋದಳು.

ಅರ್ಧ ತಾಸಿನ ಪೇಟೆ ಒಂದು ತಾಸಿನವರೆಗೂ ಬೆಳೆಯಿತು. ಆ ದಿನ ಲಕ್ಷ್ಮಿ ಪೇಟೆಯಲ್ಲಿ ಕೊಂಡ ಸಾಮಾನುಗಳು ಒಂದಲ್ಲ, ಎರಡಲ್ಲ. ಫೇಡೆಯಾಯಿತು; ಬೆಳ್ಳಿಯ ಬಟ್ಟಲು ಚಮಚೆಗಳಾದವು; ಶಹಪೂರದ ನೇಯ್ಗೆಯ ಎರಡು ಜರದಂಚಿನ ಸೀರೆಗಳಾದವು; ಖಣಗಳಾದವು. ಲಕ್ಷ್ಮಿ ಮುಗುಳುನಗೆ ನಗುತ್ತ ಎಲ್ಲವನ್ನೂ ಕೊಂಡುಕೊಳ್ಳುತ್ತಿದ್ದಳು. ಶಾಂತಾ ಆಶ್ಚರ್ಯದಿಂದ ನೋಡುತ್ತಿದ್ದಳು.

ಅವೆಲ್ಲವೂ ತನಗೆ ಬೇಕು ಎಂದು ಹೇಳಿ, ಅವುಗಳ ಗಂಟುಕಟ್ಟಿ ಮನೆ

ಯಲ್ಲಿ ಒಂದು ಮೂಲೆಯಲ್ಲಿಟ್ಟಳು. "ಹೂಂ! ಇನ್ನು ಮೇಜವಾನೆ !! ಶಾಂತಾ, ಏನೂ ಮಾಡಬೇಡ. ಇದು ಭತ್ತದ ದೇಶ. ಅನ್ನ, ಹುಳಿ ಇಳಿಸಿ ಬಿಡೋಣ" ಎಂದು ಅಂದಳು. "ಲಕ್ಶ್ಮೂ, ಪ್ರೀತಿಯಿಂದ ನೀನು ಇಲ್ಲಿಯ ವರೆಗೆ ನನ್ನ ಮನೆಗೆ ಬಂದಿರುವಿ? ಬರಿ ಅನ್ನ, ಹುಳಿ ಅಂದರೆ ಹೇಗೆ? ಏನಾ ದರೂ ಹೋಳಿಗೆ ಮಾಡೋಣ. ಹೂರಣಕ್ಕೆ ಹಾಕೋಣ" ಎಂದು ಶಾಂತಾ ಹೇಳಿದಳು. "ನಾನು ಹೇಳುತ್ತೇನಲ್ಲ, ಇದೊಂದು ದಿನ ನಾನು ಹೇಳಿದಂತೆ ಮಾಡು. ಯಾವುದೂ ಬೇಡ. ಅದೇ ಮೇಜವಾನೆ ನನಗೆ!" ಶಾಂತಾ ಒಪ್ಪಲೇ ಬೇಕಾಯಿತು. ಲಕ್ಷ್ಮಿಯು ಹೇಳಿದಂತೆಯೇ ಅಡುಗೆಯಾಯಿತು.

ವೆಂಕಟೇಶ ಅವರು ಎಷ್ಟು ಹೊತ್ತಾದರೂ ಮನೆಗೆ ಬರಲಿಲ್ಲ. ದಾರಿ ನೋಡಿ ಬೇಸತ್ತು ಇಬ್ಬರು ಗೆಳತಿಯರು ಕೂಡಿ ಊಟ ಮಾಡಿದರು. ಶಾಂತಾ ಮನಸ್ಸಿನಲ್ಲಿ ತನ್ನ ಪತಿಯನ್ನು ಶಪಿಸಿದಳು. ಆ ದಿನ ಯಾವುದನ್ನೂ ಹೊರಗೆ ಆಡುವಂತಿರಲಿಲ್ಲ. ಏನು ಮಾಡುವುದು. ಯಥಾಪ್ರಕಾರ ಎಲ್ಲವೂ ಸಾಗಿಹೋಯಿತು.

ಮಧ್ಯಾಹ್ನ ಮೂರು ಗಂಟೆ. ಲಕ್ಷ್ಮಿ ಹೇಳಿದಳು "ನಾನು ಇನ್ನು ಹೋಗಲೇಬೇಕು. ಅವರನ್ನು ಬಿಟ್ಟು ಬಂದು ಬಹಳ ಹೊತ್ತಾಯಿತು." ಎಂದು. "ಲಕ್ಶ್ಮೂ, ಅವರ ಬಗ್ಗೆ, ನಿನ್ನ ಬಗ್ಗೆ ಏನೂ ಹೇಳಲಿಲ್ಲವಲ್ಲ? ಏಕೆ ನೀವು ಇಲ್ಲಿ ಇರುವಿರಿ? ಏನೂ ಹೇಳಲಿಲ್ಲ. ಹಾಗೆಯೇ ಹೊರಟೆ. ಏನು ಇದು?" ಎಂದು ಸ್ಪಷ್ಟವಾಗಿ ಕೇಳಿದಳು. "ಶಾಂತಾ, ಆ ಮಾತು ತೆಗೆಯ ಬೇಡ ಎಂದು ನಿನಗೆ ಮೊದಲೇ ಹೇಳಿರುವೆ! ನೀನೇ ನಮ್ಮ ಮನೆಯ ಕಡೆಗೆ ಬಾ!" ಎಂದು ಹೇಳಿ, ಕಟ್ಟಿಟ್ಟ ಗಂಟನ್ನು ಬಿಚ್ಚುತ್ತ, ಎಲ್ಲ ಸಾಮಾನು ತೆರೆ ದಳು. "ರಾಜಾ, ಇದನ್ನು ತಗೋ" ಎಂದು ಬೆಳ್ಳಿಯ ಬಟ್ಟಲು ಮತ್ತು ಚಮಚೆ ಕೊಟ್ಟಳು. ಫೇಡೆ ಕೊಟ್ಟಳು ಆ ಕೂಸಿನ ಕೈಯಲ್ಲಿ. "ಅರಿಷಿಣ, ಕುಂಕುಮ ಎಲ್ಲಿ ಇದೆ?" ಎಂದು ಕೇಳಿ, ಲಕ್ಷ್ಮಿ ಅವುಗಳನ್ನು ಇಸಿದುಕೊಂಡು ಶಾಂತಾಳಿಗೆ ಕುಂಕುಮ ಹಚ್ಚುತ್ತ ಅವೆರಡೂ ಜರದ ಸೀರೆ ಮತ್ತು ಖಣಗಳನ್ನು ಕೊಡುವುದಲ್ಲದೆ, ಕೂಸಿನ ಕೈಯಲ್ಲಿ ಐವತ್ತು ರೂಪಾಯಿ ಕೊಟ್ಟಳು. ಶಾಂತಾ ಎಷ್ಟು ಬೇಡವೆಂದು ಹೇಳಿದರೂ ಕೇಳಲಿಲ್ಲ. ತನ್ನ ಬಡತನವನ್ನು ಅಣಕಿಸಿ ಲಕ್ಷ್ಮಿ ಏನೋ ಮಾಡುತ್ತಿರುವಳೆಂದು, ಅವಳ ಕಣ್ಣುಗಳಲ್ಲಿ ನೀರು ಊರಿದವು.

ಲಕ್ಷ್ಮಿ ಆ ಕಂಬನಿಗಳನ್ನು ತನ್ನ ಸೆರಗಿನಿಂದ ಒರೆಯಿಸಿ “ ಶಾಂತಾ, ಈ ದಿನ ನನ್ನ ಮಾತು ಕೇಳು. ಇವೆಲ್ಲವೂ ನಿನ್ನ ಕೇವಲ, ಬಹಳೇ ಕೇವಲ ಗೆಳತಿಯ ಮುಡಿಪು ಎಂದು ತಿಳಿದುಕೋ. ನನ್ನ ಹೃದಯ ನಿರ್ಮಲವಿದೆ. ಏನನ್ನೂ ತಪ್ಪು ತಿಳಿದುಕೊಂಡಿಲ್ಲ. ನೀನು ಸುಮ್ಮನಾಗು. ಅಂದರೆ ನಾನು ಸುಖದಿಂದ ಮನೆಗೆ ಹೋಗುತ್ತೇನೆ. ಇಲ್ಲವಾದರೆ ನಾನೂ ಅಳುತ್ತೇನೆ. ನಿನ್ನ ಗೆಳತಿಯ ದುಃಖವನ್ನು ನೀನು ಕಡಿಮೆ ಮಾಡಬೇಕಿದ್ದರೆ, ನೀನು ಇವುಗಳನ್ನು ಮೌನ ವಾಗಿ ಸ್ವೀಕರಿಸು. ಸುಮ್ಮನಾಗು........ ”

ಬಾಗಿಲ ಹೊರಗೆ ಕಾಲಿಡುವಾಗ, “ ನೋಡು, ಈ ಸುಸ್ವಾಗತ ನನ್ನ ಮನೆಗೂ ಇದೆ. ಕ್ಯಾಂಪಿನಲ್ಲಿ ಇದ್ದೇವೆ. ಮರೆಯದೇ ಬಾ—ನಿನ್ನ ಯಜ ಮಾನರನ್ನು ಕರೆದುಕೊಂಡು. ನನ್ನ ಮಾತು ಕೇಳುತ್ತೀಯಷ್ಟೆ—ರಾಜಾ ನನ್ನೂ ಕರೆದುಕೊಂಡು ಬಾ ” ಎಂದು ರಾಜನಿಗೆ ಮುದ್ದಿಟ್ಟಳು.

ಡಮಣಿಯಲ್ಲಿ ಕುಳಿತು ಹೋಗುವಾಗ ನಸುನಗುತ್ತ ಹೇಳಿದಳು “ನಾನು ಹೇಳುತ್ತೇನೆ, ಬರುತ್ತೀಯಷ್ಟೆ ! ” ಎಂದು.

## ೧೧

ಲಕ್ಷ್ಮಿಯ ಕೃತಿ ಶಾಂತಾಳನ್ನು ದಿಙ್ಮೂಢಗೊಳಿಸಿತು. ಅವಳ ರೀತಿ, ಅವಳ ನಡತೆ, ಅವಳ ಮಾತುಗಾರಿಕೆ ಎಲ್ಲವೂ ಏನೋ ವಿಚಿತ್ರವೆನಿಸಿದವು. ಡಮಣಿಯಲ್ಲಿ ಕುಳಿತು ಅವಳು ಹೋಗಿದ್ದರೂ, ಮನೆಯ ತುಂಬ ಅವಳೇ ಓಡಾ ಡಿದಂತೆ, ಅವಳೇ ಏನೋ ಮುಗುಳುನಗೆ ನಗುತ್ತ ಹಾಸ್ಯ ಮಾಡುತ್ತಿರುವಂತೆ, ಚಲಚ್ಚಿತ್ರದಲ್ಲಿಯ ಗೊಂಬೆ ಓಡಾದಿದಂತೆ ಶಾಂತಾಳಿಗೆ ಭಾಸವಾಗತೊಡಗಿತು. ಲಕ್ಷ್ಮಿಯನ್ನು ಅವಳ ಮನೆಯಲ್ಲಿ ಕಾಣದೆ ಶಾಂತಾಳಿಗೆ ಏನೂ ಆರಾಮವೆನಿಸ ಲಿಲ್ಲ. ಲಕ್ಷ್ಮಿಯ ಕೃತಿಗಳ ಹಿಂದೆ ಏನೋ ಒಂದು ಕತೆಯಿದೆಯೆಂದು ಅವಳಿಗೆ ಬಲವಾಗಿ ಅನಿಸಹತ್ತಿತು. ಅವಳನ್ನು ಇನ್ನೊಮ್ಮೆ ಮಾತನಾಡಿಸಿ ಎಲ್ಲವನ್ನೂ ತಿಳಿದುಕೊಳ್ಳಬೇಕೆಂದು ಮನಸ್ಸು ತವಕಪಡಹತ್ತಿತು. ಕುಳಿತರೂ, ನಿಂತರೂ, ಏನು ಮಾಡಿದರೂ ಮನಸ್ಸಿಗೆ ನೆಮ್ಮದಿಯಿರಲಿಲ್ಲ. ಮನಸ್ಸಿನ ಒಂದು ಭಾಗ

ದಲ್ಲಿ ಈ ವ್ಯಾಪಾರ ನಡೆದಿದ್ದರೆ, ಇನ್ನೊಂದೆಡೆಗೆ ತನ್ನ ಪತಿಯ ಚಿಂತೆ. ವೆಂಕಟೇಶ ಬೆಳಗಿನ ಎಂಟು ಗಂಟೆಗೇ ಮನೆ ಬಿಟ್ಟವರು ಇನ್ನೂ ಹೊರಳಿ ಬಂದಿರಲಿಲ್ಲ. ಹಣದ ಅಡಚಣಿಯೋ ಅಥವಾ ಮತ್ತೆ ಬೇರೆ ಕಾಂಗ್ರೆಸ್ಸಿನ ಕೆಲಸವೋ ಯಾವುದೂ ಅವಳಿಗೆ ತಿಳಿಯಲಿಲ್ಲ. ಮನಸ್ಸಿನ ಈ ವಿವಿಧ ತೆರೆಗಳಲ್ಲಿ, ಒಂದು ತಾಸಿನಲ್ಲಿಯೇ ಶಾಂತಳ ಜೀವ ಬಹಳ ಹಣ್ಣಾಯಿತು.

ಅದೇನೋ ಅವಳ ಪುಣ್ಯ! ಹಣ್ಣು ಹಂಪಲ, ಪಲ್ಲೆ ಕಾಯಿ, ಮತ್ತು ಬೇರೆ ಸಾಮಾನುಗಳನ್ನು ಹಿಡಿದುಕೊಂಡು ವೆಂಕಟೇಶ ಅವರು ಮಧ್ಯಾಹ್ನ ೪ ಗಂಟೆಗೆ ಮನೆಗೆ ಬಂದರು. ತನ್ನ ಹೊಟ್ಟೆಯೊಳಗಿನ ಕಸಿವಿಸಿಯಿಂದ ಏನೋ ಅನ್ನಬೇಕೆಂದರೂ, ಅವಳ ನಾಲಗೆ ಮೇಲೇಳಲಿಲ್ಲ. ವೆಂಕಟೇಶ ಅವರ ಇಂಥ ಸ್ವಭಾವ ಅವಳಿಗೆ ಮೊದಲಿನಿಂದಲೂ ಗೊತ್ತು! ಮೇಲಾಗಿ ಲಕ್ಷ್ಮಿಯ ಚಿಂತನೆಯಲ್ಲಿದ್ದ ಅವಳಿಗೆ, ಕೋಪದ ಶಬ್ದಗಳು ಹೊರಬರಲಿಲ್ಲ. ವೆಂಕಟೇಶ ಅವರು ಮನೆಯಲ್ಲಿ ಕಾಲಿಡುತ್ತ "ಅತಿಥಿ ನಾಲ್ಕು ಗಂಟೆಗೆ ಬರುವವರಿದ್ದರಲ್ಲವೆ? ಇಕೊ ನಾನೇ ಅತಿಥಿಯಾಗಿ ಬಂದಿದ್ದೇನೆ ನೋಡು—ಸರಿಯಾಗಿ ನಾಲ್ಕು ಗಂಟೆ....!" ಶಾಂತಾ ತನ್ನ ಮನಸ್ಸನ್ನೇ ಶಾಂತ ಮಾಡಿಕೊಂಡು ಅವರ ಪ್ರಶ್ನೆಗೆ ಉತ್ತರ ಕೊಡಲಿಲ್ಲ. ತನ್ನ ಚಿಕ್ಕ ಮನೆಯಲ್ಲಿ ಬೆಳ್ಳಿಯ ಬಟ್ಟಲ, ಜರದಂಚಿನ ಸೀರೆ ಇವುಗಳ ಬದಲಾವಣೆ ಕಂಡು ವೆಂಕಟೇಶ ಅವರಿಗೆ ಅತ್ಯಾಶ್ಚರ್ಯವಾಯಿತು. ಏನು ಮಾಯಾಬಾಜಾರವೋ ಎಂದೂ ಅನಿಸಿತು.

ಶಾಂತಾ ಎಲ್ಲ ಸುದ್ದಿ ಹೇಳಿದಳು; ಅಂಥ ತನ್ನ ಶ್ರೇಷ್ಠ ಗೆಳತಿ ಮನೆಗೆ ಬಂದಿರುವಾಗ, ಅವರು ಮನೆಯಲ್ಲಿ ಇಲ್ಲದುದಕ್ಕೆ ಅವರನ್ನು ಸ್ವಲ್ಪ ಬೈದೂ ಬಿಟ್ಟಳು. ಇರಲಿ, ಎಲ್ಲದಕ್ಕೂ ಪರಿಹಾರವೆಂದು ವೆಂಕಟೇಶ, ಶಾಂತಾ, ರಾಜ ಎಲ್ಲರೂ ಕ್ಯಾಂಪ ಭಾಗಕ್ಕೆ ಆ ದಿನ ಸಂಜೆಯೆ ಹೊರಟು ಬಂದರು.

ಬೆಳಗಾವಿಯ ಕ್ಯಾಂಪ ಭಾಗದಲ್ಲಿ ಮನೆ ಸಿಗುವುದು ತಡವಾಗಲಿಲ್ಲ. ಹೊರಗೆ ವಿಶಾಲವಾದ ತೋಟವಿತ್ತು. ತರತರದ ಹೂವಿನ ಗಿಡಗಳಿದ್ದವು. ಸಂಜೆಯ ಕೆಂಪು ಎಲ್ಲ ಗಿಡಗಳ ಮೇಲೆ ಲಾಸ್ಯವಾಡುತ್ತಿದ್ದಿತು. ತೋಟದ ಮಧ್ಯದಲ್ಲಿ ಒಂದು ದುಂಡಗಾದ ಚಿಕ್ಕ ಹೊಂಡ. ಅಲ್ಲಿ ಒಂದು ಕಾರಂಜಿ ಪುಟಿಯುತ್ತಿತ್ತು. ಶಾಂತಾಳಿಗೆ ಇದನ್ನೆಲ್ಲ ನೋಡಿ ಆನಂದವೆನಿಸಿತು. ತಾನು ಇರುವ ಮನೆಗೂ, ಲಕ್ಷ್ಮಿಯು ಇರುವ ಮನೆಗೂ ಎಷ್ಟು ಅಂತರ! ಸುತ್ತುಮುತ್ತಲೂ

ನೋಡುತ್ತ ಬಂಗಲೆಯ ಬಾಗಿಲದ ಸಮೀಪದಲ್ಲಿ ಬಂದರು. ಒಬ್ಬ ಹುಡಿಗೆ ಬಾಗಿಲಕ್ಕೆ ಬಂದು "ನಿಮಗೆ ಯಾರು ಬೇಕು?" ಎಂದು ಕೇಳಿದಳು. ಆ ಹುಡಿಗೆಯನ್ನು ಎಲ್ಲಿಯೋ ನೋಡಿದಂತೆ ಶಾಂತಾಳಿಗೆ ಅನಿಸಿತು. ಆದರೆ ಅವಳಿಗೆ ಗುರುತು ಹತ್ತಲಿಲ್ಲ.

"ಕಳಸಾಪೂರ ಜಾಗಿರದಾರರು ಇರುವ ಬಂಗಲೆ ಇದೇ ಅಲ್ಲವೇ?" ಎಂದು ವೆಂಕಟೇಶ ಅವರು ಕೇಳಿದರು.

"ಹೂಂ! ಇಲ್ಲೇ ಇರುತ್ತಾರೆ........! ಬನ್ನಿರಿ ಒಳಗೆ........" ಎಂದು ಆ ಹುಡಿಗೆ ಅವರನ್ನು ಒಳಗೆ ಬರಮಾಡಿಕೊಂಡಳು. ವಿಶಾಲವಾದ ಪಡಸಾಲೆಯಲ್ಲಿ ಅವರು ಬಂದು ಕುರ್ಚಿಯ ಮೇಲೆ ಕುಳಿತುಕೊಳ್ಳುವಾಗ, ನೀರಿನ ಹನುಮಪ್ಪ ಅವರನ್ನು ನೋಡಿ ಆನಂದದಿಂದ ಹಿಗ್ಗಿ ಜಿಗಿಯುತ್ತ ಬಂದ. "ಏ ಸುಂದರಾ, ಗುರುತು ಹತ್ತಲಿಲ್ಲ ನಿನಗೆ! ಅವರು ನಮ್ಮ ಶಾಂತಾಬಾಯರು ........ಬರ್ರಿ ಬರ್ರಿ ಶಾಂತಾಬಾಯರ, ಒಳಗೆ ಬರ್ರಿ" ಎಂದು ಅವರನ್ನು ಒಳಗೆ ಕರೆದುಕೊಂಡು ಹೊರಟ.

ವೆಂಕಟೇಶ ಅವರು ಒಬ್ಬರೇ ಹೊರಗೆ ಕುಳಿತರು. ರಾಜನನ್ನು ಬಗಲಲ್ಲಿ ಕರೆದುಕೊಂಡು ಶಾಂತಾ ಒಳಗೆ ಬಂದಳು. "ಆನಂದರಾಯರ ಮಗಳು ಎಷ್ಟು ದೊಡ್ಡಾಕಿಯಾಗಿದ್ದಾಳೆ! ಗುರುತೇ ಹತ್ತುವುದಿಲ್ಲ!" ಎಂದು ಸುಂದರಾಳನ್ನು ಕುರಿತು ಅಂದರು.

ನಡುಮನೆಯ ಹೊಂದಿಗಿರುವ ಕೋಣೆಯಲ್ಲಿ, ಲಕ್ಷ್ಮಿ ವೆಂಕಟಪತಿಯ ಭಾವಚಿತ್ರವನ್ನಿಟ್ಟುಕೊಂಡು, ಭಜನೆ ಮಾಡುತ್ತಿದ್ದಳು. ದಾಸರ ಪದವಾದ "ಕಂಡು ಕಂಡು ನೀಯೆನ್ನ ಕೈ ಬಿಡುವರೆ........" ಎಂಬ ಹಾಡನ್ನು ಸರಾಗವಾಗಿ ಹಾಡುತ್ತಿದ್ದಳು. ಅವಳ ಬದಿಯಲ್ಲಿಯೆ ನಾರಾಯಣರಾಯರು ಕುಳಿತಿದ್ದರು. ಅವರ ಈ ಧ್ಯಾನವನ್ನು ಕೆಡಿಸಬಾರದೆಂದೇ ಸುಂದರಾ ಅವರನ್ನು ಒಳಗೆ ಕರೆದುಕೊಂಡು ಹೋಗಿರಲಿಲ್ಲ. ಆದರೆ ಹನುಮಂತ ತನ್ನ ಹುರುಪಿನಲ್ಲಿ ಅವರನ್ನು ಒಳಗೆ ಕರೆತಂದಿದ್ದನು. ಆ ಧ್ಯಾನದ ಸನ್ನಿವೇಶವನ್ನು ನೋಡಿ, ಶಾಂತಾ ಏನೂ ಸಪ್ಪಳ ಮಾಡದೆ ನಡುಮನೆಯಲ್ಲಿಯೇ ಕುಳಿತಳು.

ಲಕ್ಷ್ಮಿಯ ಕಂಠದಲ್ಲಿ ಮಾಧುರ್ಯವಿತ್ತು! ಭಕ್ತಿ ಭಾವ ತುಂಬಿ ತುಳುಕಿತ್ತು! ಅವಳ ಸುಮಧುರ ಧ್ವನಿಯನ್ನು ಕೇಳುವಾಗ, ಶಾಂತಾಳಿಗೆ ಲಕ್ಷ್ಮಿಯ

ತಾಯಿಯ ನೆನಪಾಯಿತು. ಅವಳೂ ಇದೇ ರೀತಿಯಾಗಿ ಹಾಡುತ್ತಿದ್ದಳು ! ಮುರನಾಳದ ಹಳ್ಳಿಯಲ್ಲಿ ಎಲ್ಲರೂ ಗೋದಾವರಿಯ ಧ್ವನಿಯ ಇಂಪನ್ನು, ಮುರಲಿಯ ನಾದದ ಇಂಪಿಗೆ ಹೋಲಿಸುತ್ತಿದ್ದರು ! ಅದೇ ಆ ಮುರಲಿಯ ನಾದದಿಂಪು ಈಗಲೂ ಇತ್ತು ! ಶಾಂತಾ ಆ ಧ್ವನಿಯನ್ನು ಬಹಳ ಮೆಚ್ಚಿದಳು. ಆದರೆ ದೇವರ ಪೂಜೆ ಏಕೆ ? ಹಾಡು ಏತಕ್ಕೆ ? ಬೆಳಗಾಂವಿಗೆ ಬಂದುದರ ಕಾರಣವೇನು? ಇವುಗಳನ್ನು ಒಮ್ಮೆಲೆ ಶಾಂತಾಳಿಗೆ ಹೇಗೆ ಕೇಳಬೇಕು !

ಹಾಡು ಮುಗಿದ ಕೂಡಲೆ ಶಾಂತಾ ಲಕ್ಷ್ಮಿಯನ್ನು ಮಾತನಾಡಿಸಿದಳು. ಪರಸ್ಪರ ಎಲ್ಲರದೂ ಪರಿಚಯವಾಯಿತು. ಹನುಮಂತ ಎಲ್ಲರಿಗೂ ಕಾಫಿ, ಬಾಳೆಹಣ್ಣು, ಅವಲಕ್ಕಿ ತಂದು ಕೊಟ್ಟನು. ಎಲ್ಲರೂ ಅವುಗಳನ್ನು ಸೇವಿಸಿದರು.

ವೆಂಕಟೇಶ ಅವರು ಲಕ್ಷ್ಮಿಯ ಮನೆಗೆ ಬಂದದ್ದು ಅದೇ ಮೊದಲ ಸಲ. ಲಕ್ಷ್ಮಿ ಅವರನ್ನು ಲಗ್ನದಲ್ಲಿ ನೋಡಿದ್ದಳು. ತಿರುಗಿ ನೋಡಿರಲಿಲ್ಲ. ಅವರದು ತುಸು ಉದ್ದ ಮುಖವಿದ್ದರೂ, ಮುಖದಲ್ಲಿ ತೇಜವಿತ್ತು. ಅವರ ಆ ಖಾದಿ ಉಡುಪು ಅವರಿಗೆ ಬಹಳ ಶೋಭಿಸುತ್ತಿತ್ತು. "ನಿನ್ನ ರಾಜ, ಅವರಂತೆಯೆ ಇದ್ದಾನೆ ನೋಡು" ಎಂದು ಲಕ್ಷ್ಮಿ ಶಾಂತಾಳಿಗೆ ಚೇಷ್ಟೆ ಮಾಡಿದಳು. ನಾರಾಯಣರಾಯರು ಈ ಜನರ ಗುಂಪಿನಲ್ಲಿ ಬಂದು ಕುಳಿತಿದ್ದರು. ಆದರೆ ಮಾತು ಕಡಿಮೆ. ಲಕ್ಷ್ಮಿ ಏನಾದರೂ ಕೇಳಿದರೆ ಉತ್ತರ ಕೊಡುತ್ತಿದ್ದರು. ಇಲ್ಲವಾದರೆ ಸುಮ್ಮನೆ ಎಲ್ಲರನ್ನು ನೋಡುತ್ತಿದ್ದರು ! ಹನುಮಂತನಿಗೆ ಶಾಂತಾ ಮತ್ತು ವೆಂಕಟೇಶ ಅವರ ಸಲುವಾಗಿ ಊಟದ ಸಿದ್ಧತೆ ಮಾಡಲೂ ಲಕ್ಷ್ಮಿ ಸೊನ್ನೆಮಾಡಿದಳು. ಈ ಸೊನ್ನೆಯನ್ನು ತಿಳಿದು, ಶಾಂತಾ ಬೇಡವೆಂದು ಎಷ್ಟು ಹೇಳಿದರೂ ಕೇಳಲಿಲ್ಲ. "ನಾನು ಈ ದಿನ ಮುಂಜಾನೆ ಏನು ಹೇಳಿದ್ದೇನೆ ನೆನಪು ಮಾಡಿಕೋ" ಎಂದು ಲಕ್ಷ್ಮಿ ಎಚ್ಚರಿಕೆ ಕೊಟ್ಟಳು. ಊಟವಾದ ಮೇಲೆ ಒಂದು ನಾಟಕದ ಕಾರ್ಯಕ್ರಮದ ಏರ್ಪಾಡೂ ಆಯಿತು. ಒಬ್ಬ ಆಳುಮಗನಿಗೆ ಟಿಕೆಟ್ ವ್ಯವಸ್ಥೆ ಮಾಡಲೂ ಆಜ್ಞಾಪಿಸಲಾಯಿತು.

ಲಕ್ಷ್ಮಿಗೆ ಹುಚ್ಚು ಹಿಡಿದಿದೆಯೋ ಅಥವಾ ಶಾಂತಾಳಿಗೆ ಹುಚ್ಚು ಹಿಡಿಸಲು ಹೀಗೆ ಮಾಡುತ್ತಿರುವಳೋ ಇದೇ ಶಾಂತಾಳಿಗೆ ತಿಳಿಯದಾಯಿತು. ಶಾಂತಾ ಬಂದಿರುವ ಮುಖ್ಯ ಉದ್ದೇಶ ಒಂದು ! ನಡೆದುದು ಬೇರೊಂದು !

ಶಾಂತಾ ಹಿಂದುಮುಂದು ನೋಡದೆ, ಲಕ್ಷ್ಮಿಯ ಕೈಹಿಡಿದು ಎಳೆದುಕೊಂಡು ಗುಪ್ತವಾಗಿ ಬೇರೆ ಕೋಣೆಗೆ ಹೋದಳು. "ಇದೇನು ಲಕ್ಕು, ಏನು ನಡೆದಿದೆ! ನಿನ್ನ ಯಜಮಾನರು ಹೀಗೇಕೆ ಬಡಕಲಾಗಿದ್ದಾರೆ? ಏನೂ ಮಾತನಾಡುವುದಿಲ್ಲ? ನೀವಿಷ್ಟೆ ಜನ ಏಕೆ ಇಲ್ಲಿಗೆ ಬಂದಿರುವಿರಿ? ಅತ್ತೆಯವರ ಜೊತೆಗೆ ಅಥವಾ ಮಾವನವರ ಜೊತೆಗೆ ಜಗಳಾಡಿರುವಿಯೇನು? ಎಲ್ಲಾ ನನಗೆ ಹೇಳು. ಸ್ಪಷ್ಟವಾಗಿ ಹೇಳು. ನಿನ್ನ ಕೇವಲ ಗೆಳತಿ ಎಂದು ಹೇಳಿದೆಯಲ್ಲಾ. ಮನಬಿಚ್ಚಿ ನೀನು ಎಲ್ಲಾ ಹೇಳಿದರೆ, ನಾನು ಇಲ್ಲಿ ಈ ರಾತ್ರಿ ನಿಲ್ಲುತ್ತೇನೆ, ಇಲ್ಲವಾದರೆ ಈಗಲೇ ಹೋಗಿಬಿಡುತ್ತೇನೆ." ಎಂದು ಶಾಂತಾ ಲಕ್ಷ್ಮಿಗೆ ಎಲ್ಲವನ್ನೂ ಹೇಳಲು ಜುಲುಮೆ ಮಾಡಿದಳು.

ಶಾಂತಾ ಸಾಲಾಗಿ ಪ್ರಶ್ನೆಗಳನ್ನು ಕೇಳುತ್ತಿರುವಾಗಲೇ, ಲಕ್ಷ್ಮಿಯ ಸುಂದರವಾದ ಕಪೋಲಗಳ ಮೇಲೆ ಕಂಬನಿಗಳು ಉರುಳಿದವು. ಒಂದೊಂದು ಕಂಬನಿಯೂ, ಅವಳ ಜೀವನದ ಚಿತ್ರವನ್ನು ಕೊಡುವಂತಿದ್ದವು. ಲಕ್ಷ್ಮಿ ತನ್ನ ಗೆಳತಿಯ ಕೊರಳಲ್ಲಿ ಕೈಹಾಕಿ, ದುಃಖಿಸಿ ಅತ್ತಳು. "ನೀನು ನನಗೆ ಇಷ್ಟಾದರೂ ಕೇಳಿದೆ. ಈವರೆಗೂ ನನ್ನನ್ನು ಹೀಗೆ ಅಂತಃಕರಣದಿಂದ ಮಾತನಾಡಿಸಿದವರು ದೊರೆಯಲಿಲ್ಲ ನೋಡು. ನನ್ನ ಹಣೆಯಬರಹ ಏನು ಹೇಳಲಿ........??"

ಲಕ್ಷ್ಮಿ ನಾರಾಯಣರಾಯರ ಬೇನೆಯನ್ನು, ಅವರ ವಿಚಿತ್ರ ಮನಸ್ಸಿನ ಸ್ವಭಾವವನ್ನು, ಶೀನಪ್ಪನವರ ಅಧಿಕಾರ ದರ್ಪವನ್ನು, ಅವರ ಬಗ್ಗೆ ಇರುವ ತನ್ನ ಸಂಶಯವನ್ನು, ಸೀತಕ್ಕಳ ಕೋಪದ ಸ್ವಭಾವವನ್ನು, ಕೀಲಿಕೈಯ ಸನ್ನಿವೇಶವನ್ನೂ ಎಲ್ಲವನ್ನೂ ಲಕ್ಷ್ಮಿ ವಿಸ್ತರಿಸಿ ಹೇಳಿದಳು.

ಡಾ. ಏಡನ್ ಅವರು ಕಳಸಾಪೂರಿಗೆ ಬಂದು ನಾರಾಯಣರಾಯರ ಬೇನೆಯನ್ನು ಪರೀಕ್ಷಿಸಿ ಹೋಗಿದ್ದರು. ನಾರಾಯಣರಾಯರನ್ನು ಕಳಸಾಪೂರದಲ್ಲಿ ಇಡದೇ, ಬೇರೆ ಊರಲ್ಲಿ ಹಲವು ದಿನಗಳ ವರೆಗೆ ಕರೆದುಕೊಂಡು ಹೋಗುವುದೇ ವಿಹಿತವೆಂದು ಸಲಹೆ ಕೊಟ್ಟಿದ್ದರು. ಡಾ. ಏಡನ್ ಅವರು ಆಗ ಗದುಗಿನ ಮಿಶನ್ ದವಾಖಾನೆಯಿಂದ ನಿವೃತ್ತರಾಗಿ ಬೆಳಗಾವಿಯ ಕ್ಯಾಂಪ ಭಾಗದಲ್ಲಿ ತಮ್ಮ ಸ್ವಂತ ಒಂದು ದವಾಖಾನೆ ಆರಂಭಿಸಿದ್ದರು. ಕ್ಯಾಂಪ ಭಾಗದಲ್ಲಿ ಮಿಲಿಟರಿ ಆಫೀಸರರು ಅನೇಕರಿರುವುದರಿಂದ, ಡಾ. ಏಡನ್ ಅವರ ದವಾಖಾನೆ ಊರ್ಜಿತ ಸ್ಥಿತಿಯನ್ನು ತೀವ್ರವಾಗಿ ಪಡೆದಿತ್ತು. ಎಷ್ಟೋ ವರ್ಷಗಳಿಂದ ಪರಿ

ಚಯವಿದ್ದ ಡಾ. ಏಡನ್ ಅವರೇ ಈಗ ನಾರಾಯಣರಾಯರಿಗೆ ಕ್ಯಾಂಪ ಭಾ
ದಲ್ಲಿ ವಾಸವಾಗಿರಲು ಅನುಕೂಲ ಮಾಡಿಕೊಟ್ಟಿದ್ದರು. ಹೊಸ ವಾತಾವರ
ದಲ್ಲಿ, ನಾರಾಯಣರಾಯರಿಗೆ ಹೊಸ ಜೀವ ಬರುವುದೆಂದೂ, ಹಲವು ಟಾನಿಕ
ಮತ್ತು ಇಂಜಕ್ಶನ್‌ಗಳಿಂದ ಅವರು ಬೇಗ ಸುಧಾರಿಸುವರೆಂದೂ ಡಾ. ಏಡನ
ಅವರು ಹೇಳಿದ್ದರು.

ಶೀನಪ್ಪನವರು ಬೆಳಗಾವಿಗೆ ಮೇಲಿಂದ ಮೇಲೆ ಬಂದು ಹಣದ ಅನ
ಕೂಲತೆ ಮಾಡಿಕೊಡುತ್ತಿದ್ದರು. ಈಗ ಶೀನಪ್ಪನವರೇ ಸರ್ವಾಧಿಕಾರಿಯಾ
ದ್ದರು. ಸಂಪತ್ತಿನ ತಿಜೂರಿಯ ಕೀಲಿಕೈ ಅವರ ಕಡೆಗೇ ಇದ್ದಿತು. ಗೋವಿಂ
ರಾಯರು ಅವರ ಕೈಕೆಳಗೆ ಅಷ್ಟೆ. ಶೀನಪ್ಪನವರು ಬೆಳಗಾವಿಗೆ ಬಂದಾಗ
ಬಹಳ ಸಲಿಗೆಯಿಂದ ಲಕ್ಷ್ಮಿಯ ಜೊತೆಗೆ ಮಾತನಾಡುವುದೂ, ಅತ್ತರ ಮುಂ
ತಾದವುಗಳನ್ನು ಹಚ್ಚಿಕೊಂಡು ರಾತ್ರಿ ತಡಮಾಡಿ ಮನೆಗೆ ತಿರುಗಿ ಬರುವುದು
ಇವೆಲ್ಲವೂ ಲಕ್ಷ್ಮಿಗೆ ಏನೋ ಸಂಶಯ ಹುಟ್ಟಿಸಿದ್ದವು; ಅವಳಿಗೆ ಹಲವು ಸ
ಭಯವೂ ಬರುತ್ತಿತ್ತು !

ಲಕ್ಷ್ಮಿ ಯಾವುದನ್ನೂ ಮುಚ್ಚಿಟ್ಟುಕೊಳ್ಳದೇ, ಶಾಂತಾಳ ಎದುರು ಮಾತ
ನಾಡಿದಳು. ಆ ರಾತ್ರಿ ಮಾತನಾಡಿದುದು ಲಕ್ಷ್ಮಿಯ ನಾಲಗೆಯಲ್ಲ—ಅವ
ಹೃದಯ ! ಕೇಳಿದುದು ಶಾಂತಾನ ಕಿವಿಯಲ್ಲ—ಅವಳ ಹೃದಯ ! ಹೃದಯ
ಹೃದಯ ಮಾತನಾಡಿ ಅಪ್ಪಿಕೊಂಡವು. 'ವ್ಯರ್ಥವಾಗಿ ಹರಿದು ಹೋಗುತ್ತಿ
ಧನ ! ಸ್ವಲ್ಪವಾದರೂ ತನ್ನ ಗೆಳತಿಗೆ ಏಕೆ ಸಹಾಯ ಮಾಡಬಾರದು ?' ಎಂಬ
ಭಾವನೆಯಿಂದಲೇ ಆ ದಿನ ಲಕ್ಷ್ಮಿ ನಡೆದುಕೊಂಡುದು, ಕಳಸಾಪೂರ ಮನೆ
ನದ ಪರಿಣಾಮ ಅವಳ ಮೇಲೆ ಆದುದು ಎಲ್ಲವನ್ನೂ ಶಾಂತಾ ಅರಿತುಕೊಂಡ
ಲಕ್ಷ್ಮಿಯ ಪಾಡಿಗಾಗಿ ಮರುಕಗೊಂಡಳು. ಶಾಂತಾಳೂ ಸಹ ತನ್ನ ಜೀವನ
ದುಃಖವನ್ನು ತೋಡಿಕೊಂಡಳು ! ದುಃಖ ಯಾವ ರೀತಿಯದೇ ಇರಲಿ, ಅ
ದಿನ ಅವರಿಬ್ಬರ ಮನಸ್ಸು ತಿಳಿಯಾದವು ! ಹೊಸ ಚೇತನೆ ಸ್ಫುರಿಸಿದಂ
ಅನಿಸಿತು !

ಡಾ. ಏಡನ್ ಅವರ ಹೇಳಿಕೆಯಂತೆ, ನಾರಾಯಣರಾಯರ ಪ್ರಕೃತಿ ಬೆಳ
ಗಾವಿಗೆ ಬಂದ ಒಂದು ತಿಂಗಳಲ್ಲಿಯೇ ಸುಧಾರಿಸತೊಡಗಿತ್ತು. ಆದ್ದರಿಂದ
ರಾತ್ರಿ ನಾಟಕಕ್ಕೆ ಹೋಗುವಾಗ ಅವರ ಮೈಗೆ ಬೆಚ್ಚಗೆ ಉಣ್ಣೆಯ ಬಟ್ಟೆ ತೊಡಿಸಿ

ಅವರನ್ನೂ ಕರೆದುಕೊಂಡು ಹೋದರು.

ನಾಟಕ ಗೃಹದ ಟಿಕೆಟ್ ಆಫೀಸದ ಎದುರು ಎಷ್ಟೋ ಜನ ಟಿಕೆಟ್ಟಿಗಾಗಿ ಕಚ್ಚಾಡುತ್ತಿತ್ತು! ಅನೇಕ ಜನ ನಾಟಕ ಗೃಹದಲ್ಲಿ ಸ್ಥಳಗಳಿಗಾಗಿ ಹೊಡೆದಾಡುತ್ತಿತ್ತು! ಲಕ್ಷ್ಮಿ ಮೊದಲೆ ಟಿಕೆಟ್ಟಿನ ವ್ಯವಸ್ಥೆ ಮಾಡಿದ್ದುದರಿಂದ ಏನೂ ತೊಂದರೆಯಾಗಲಿಲ್ಲ. ಮುಂದಿನ ಸಾಲಿನಲ್ಲಿಯ ಹಲವು ಕುರ್ಚಿಗಳನ್ನು ರಿಝರ್ವ ಮಾಡಿಸಿತ್ತು. ಈ ರೀತಿಯಾಗಿ ಮುಂದಿನ ಸಾಲುಗಳಲ್ಲಿ ಕುಳಿತು ನಾಟಕ ನೋಡುವುದು ಶಾಂತಾ ಮತ್ತು ವೆಂಕಟೇಶ ಅವರಿಗೆ ಹೊಸ ಅನುಭವವೇ ಆಗಿತ್ತು! ಅಚ್ಚರಿಗಣ್ಣುಗಳಿಂದ ಅವರು ಸುತ್ತಲೂ ಜನಜಂಗುಳಿಯನ್ನು ನೋಡುತ್ತಿದ್ದರು!

ನಾಟಕದ ಹೆಸರು "ನರಬಲಿ" ಎಂದು. ಒಂದು ರಾಜ್ಯದಲ್ಲಿ ಯಾವುದೋ ಡಾಂಭಿಕ ಭಾವನೆಗಾಗಿ, ನರರನ್ನೇ ಬಲಿಯನ್ನಾಗಿ ಕೊಡುವ ಪೌರಾಣಿಕ ಕತೆಯದು! ಈ ಜಗತ್ತಿನಲ್ಲಿ ನರರೂ ಸಹ ಕುರಿಗಳಂತೆ ವರ್ತಿಸುತ್ತಾರೆ! ಸುಮ್ಮನೇ ಕೆಳಗೆ ಗೋಣು ಹಾಕಿ ಕುರಿ ಹಿಂಡಿನಲ್ಲಿ ಸಾಗಿ ಹೋಗುತ್ತಾರೆ. ಅವರು ಪಶುಗಳೇ! ಏನೂ ವಿಚಾರವೇ ಮಾಡುವುದಿಲ್ಲ – ಎಂಬ ತಾತ್ಪರ್ಯ ಆ ನಾಟಕದ್ದು ಇದ್ದಿತು. ಈ ಉದ್ದೇಶವನ್ನು ಸ್ಫುಟಗೊಳಿಸಲು, ಪ್ರತಿಯೊಂದು ಅಂಕಿನ ಪ್ರಾರಂಭಕ್ಕೆ—

"ಹರಕೆಗೆಂದೇ ಕುರಿ, ತಾನರಿಯದಕಟ ಕೊಲುವರೆಂಬುದ
.............................................."

ಈ ವಚನವನ್ನು ಸುಶ್ರಾವ್ಯವಾಗಿ, ಎಲ್ಲ ವಾದ್ಯಗಳ ಜೊತೆಗೆ ಹಾಡುತ್ತಿದ್ದರು.

ನಾಟಕದಲ್ಲಿ ಹಾಡುಗಳೂ, ಮಾತುಗಾರಿಕೆ, ಸನ್ನಿವೇಶ ಎಲ್ಲವೂ ಬಹಳ ಆಕರ್ಷಕವಾಗಿದ್ದವು. ಲಕ್ಷ್ಮಿಗೆ ನಾಟಕ ಬಹಳ ಮನಸ್ಸು ಹಿಡಿಯಿತು. ಮುಖ್ಯತಃ, ಜನರು ಏನೂ ವಿಚಾರಿಸದೆ, ಜಗತ್ತಿನಲ್ಲಿ ಮೂಢರಾಗಿ ಸಾಗಿರುವರಲ್ಲ! ತಿಳುವಳಿಕೆಯೆ ಜನರಿಗೆ ಎಷ್ಟು ವರ್ಷವಾದರೂ ಬಂದಿಲ್ಲವಲ್ಲ!" ಎಂಬ ಭಾವನೆ ಅವಳ ಮನದ ಜಾಲದಲ್ಲಿ ಸೆರೆಸಿಕ್ಕಿತು.

ನಾಟಕ ಬಿಟ್ಟು ಹೊರಗೆ ಬರುವಾಗ ಜನರು ಮಾತನಾಡಿಕೊಳ್ಳುತ್ತಿದ್ದರು "ಅನ್ನಬೇಕು ನಾಟಕ ಎಂದು ಇದಕ್ಕೆ!" ಎಂದ ಒಬ್ಬ. ಇನ್ನೊಬ್ಬ ಹೇಳಿದ–

" ಈ ಅನ್ನಪೂರ್ಣಾ ನಾಟಕ ಕಂಪನಿಯವರು ಒಳ್ಳೇ ಲಾಭ ಮಾಡಿಕೊಂಡರು ಈ ನಾಟಕದಿಂದ. ನಮ್ಮ ಊರಿಂದ ಇಷ್ಟು ಹಣ ಯಾರಿಗೂ ಸಿಕ್ಕಿದ್ದಿಲ್ಲ." ಮೂರನೆಯವ ಹೇಳಿದ "ಇದು ಅನ್ನಪೂರ್ಣಾ ನಾಟಕ ಕಂಪನಿ. ಎಲ್ಲ ರೊಕ್ಕ ಆ ಮ್ಯಾನೇಜರನಿಗೇ. ನಾಟಕ ಬರೆದವನಿಗೆ ಪುಂಗಿ!" ನಾಲ್ಕನೆಯವ ಹೇಳಿದ, "ಹೌದಪಾ! ಅದಕ್ಕೇ ನಾಟಕ ಬರೆದವನ ಹೆಸರು ಸಹ ಪ್ರಿಂಟ್ ಮಾಡಿಲ್ಲ." "ಯಾರೋ ಈ ನಾಟಕ ಬರೆದವರು?" ಎಂದು ಒಬ್ಬ ಪ್ರಶ್ನೆ ಮಾಡಿದ. ಮಗುದೊಬ್ಬ ಹೇಳಿದ "ಅವರೋ ಆ ಕಳಸಾಪೂರ ಜಾಗಿರದಾರಂತ! ಆನಂದರಾಯ ಅಂತ ಅವರ ಹೆಸರು!"

ಕೊನೆಯ ಮಾತು ಕೇಳಿ, ಲಕ್ಷ್ಮಿ ಮತ್ತು ಸುಂದರಾ ಒಬ್ಬರನ್ನೊಬ್ಬರು ನೋಡಿದರು. ಒಮ್ಮೆಲೆ ಆಶ್ಚರ್ಯದ ಸಂಗತಿ! ಆ ಜನರನ್ನು ಕೇಳಿದರೆ ಆನಂದರಾಯರ ಬಗ್ಗೆ ಏನಾದರೂ ಗೊತ್ತಾಗಬಹುದೆಂದು, ವೆಂಕಟೇಶಅವರನ್ನು ಮುಂದು ಮಾಡಿದರು. ಎಲ್ಲವೂ ಸತ್ಯ ಸಂಗತಿಯಾಗಿತ್ತು. ಡಮಣಿಯನ್ನು ನಾಟಕಗೃಹದ ಬಾಗಿಲಲ್ಲಿಯೇ ನಿಲ್ಲಿಸಿದರು. ಗ್ರೀನ ರೂಮು ಕಡೆಗೆ ಹೋಗಿ, ಆನಂದರಾಯರ ಬಗ್ಗೆ ಚೌಕಶಿ ಮಾಡಬೇಕೆಂದು ವೆಂಕಟೇಶ ಅವರು ಗಡಿಬಿಡಿಯಿಂದ ಹೋದರು. ಆದರೆ ಅಲ್ಲಿ ಏನೂ ಗೊತ್ತಾಗಲಿಲ್ಲ. ವ್ಯವಸ್ಥಾಪಕ, ವೆಂಕಟೇಶ ಅವರಿಗೆ ಹೇಳಿದ "ಅಹುದು! ನಮ್ಮ ಕಂಪನಿಯಲ್ಲಿ ಇರುತ್ತಾರೆ. ಆದರೆ ಅವರನ್ನು ಹುಡುಕುವುದೇ ಕಷ್ಟ. ತಮಗೆ ಬೇಕಾದಾಗ, ನಮ್ಮ ಕಡೆಯಿಂದ ಹಣ ಇಸಗೊಂಡು ಗೋಗಿಬಿಡುತ್ತಾರೆ. ಬಂದರೆ ಬರುತ್ತಾರೆ. ಇಲ್ಲವಾದರೆ ಇಲ್ಲವೇ ಇಲ್ಲ. ನೋಡಿರಿ, ಜನ ಅವರ ನಾಟಕ ಇಷ್ಟು ಮೆಚ್ಚುತ್ತಾರೆ! ಆದರೆ ಅವರ ಪತ್ತೆ ಯಾರಿಗೂ ಇರುವದಿಲ್ಲ!"

ದೈವದ ವಿಚಿತ್ರ ಘಟನೆಗಳನ್ನು ನೆನೆಯುತ್ತ ವೆಂಕಟೇಶ ಆವರು ಡಮಣಿಯ ಸಮೀಪ ಬಂದು, ಎಲ್ಲ ಸುದ್ದಿ ಹೇಳಿದರು. ತುತ್ತು ಬಾಯಿಯ ವರೆಗೆ ಬಂದು, ಬಾಯಿಯಲ್ಲಿ ಬೀಳದಂತಾಯಿತೆಂದು ಎಲ್ಲರೂ ಖೇದಬಟ್ಟರು. ದುರ್ವಿಧಿಯನ್ನು ಸ್ಮರಿಸಿ, ವಿಷಣ್ಣಮನಸ್ಕರಾಗಿ ಆ ರಾತ್ರಿ ಡಮಣಿಯಲ್ಲಿ ಎಲ್ಲರೂ ಮನೆಯ ಕಡೆಗೆ ಸಾಗಿದರು.

ಹೊರಗೆ ಡಿಶಂಬರ ತಿಂಗಳದ ಮೈಕೊರೆಯುವ ಚಳಿಯಿತ್ತು. ಆ ಚಳಿಯನ್ನು ದೂರ ಮಾಡಿಕೊಳ್ಳಲು ಅವರೆಲ್ಲರು ಬೆಚ್ಚನ್ನ ಬಟ್ಟೆಗಳನ್ನು ಹೊದ್ದು

ಕೊಂಡಿದ್ದರು. ಆದರೆ ಕಟುತರವಾದ ಸತ್ಯದ ಚಳಿಯಿಂದ ಬೆಚ್ಚಗಾಗಲು ಯಾವ ಉಣ್ಣೆಯ ಬಟ್ಟೆಗಳಿವೆ!! ಬಹಳ ದಿವಸಗಳಿಂದ ಸುಂದರಾ ತನ್ನ ತಂದೆಯನ್ನು ಕಂಡಿರಲಿಲ್ಲ. ಇಂದಾದರೂ ಅವರು ಭೆಟ್ಟಿಯಾಗುವರೇನೋ ಎಂದು ಬಹಳ ಆಶಿಸಿದಳು. ಆದರೆ ಅದೆಲ್ಲ ನಿರರ್ಥಕವಾಯಿತು!

೧೨

ಪ್ರತಿಸಲದಂತೆ ಶೀನಪ್ಪನವರು ತಮ್ಮ ಕೆಲಸ ಅಂದರೆ ಮನೆಯ ಖರ್ಚಿಗಾಗಿ ಹಣ ಕೊಡುವ ಕೆಲಸವನ್ನು ತೀರಿಸಿಕೊಂಡು ಕಳಸಾಪೂರಿಗೆ ಹೋಗಲಿಲ್ಲ. ಈ ಸಲ ಅವರು ಬಂದ ಕೂಡಲೆ ಲಕ್ಷ್ಮಿಗೆ ಒಂದು ಆನಂದದ ಸಂಗತಿಯನ್ನು ಹೇಳಿದರು—"ನೋಡು ಲಕ್ಕಮ್ಮಾ, ಹೋಳಿಗೆಯ ಸುದ್ದಿಯನ್ನು ಈ ಸಲ ತಂದಿದ್ದೇನೆ. ಇನ್ನು ನೀವು ಮತ್ತೆ ಕಳಸಾಪೂರಿಗೆ ಬರಬೇಕಾಗುವುದು."

ಹೋಳಿಗೆಯ ಸುದ್ದಿ ಯಾವುದೆಂಬುದು ಲಕ್ಷ್ಮಿಗೆ ಬೇಗ ಹೊಳೆಯಲಿಲ್ಲ. ಸ್ವಲ್ಪ ವಿಚಾರಿಸಬೇಕಾಯಿತು. "ಯಾವುದು ಶೀನುಕಾಕಾ? ನಿನ್ನ ಹೋಳಿಗೆಯ ಸುದ್ದಿ ಯಾವುದು?"

"ನನ್ನದೇನು ಹೋಳಿಗೆ! ನಿಮ್ಮದೇ............ ಅಂದರ ನಿಮ್ಮ ಮನೆತನದ್ದು....! ನೆನಪು ಮಾಡಿಕೋ ಲಕ್ಕಮ್ಮಾ...."

"ಅಂದರೆ ಗೋವಿಂದರಾಯರು ;ತಮ್ಮ ಮಗಳ ಲಗ್ನ ಏನಾದರೂ ಮಾಡುವರೇನು?"

"ಅದು ಅಲ್ಲ, ಲಕ್ಕಮ್ಮಾ. ಸುಂದರಾನದು! ತಿಳಿಯಿತೇನು? ಅವಳೇ ಹೋಳಿಗೆ ಕೊಡಿಸುವವಳು!" ಶೀನಪ್ಪನವರು ಈ ಮಾತುಗಳನ್ನು ಹೇಳಿ ಅತ್ಯಾನಂದದಿಂದ ನಕ್ಕರು.

"ಸುಂದರಾ ಇದ್ದಾಳೆ ಇಲ್ಲಿ! ನನ್ನ ಹತ್ತಿರ!! ಅದು ಹೇಗೆ ಲಗ್ನ ನಿಶ್ಚಯವಾಯಿತು?"

ಸಂಶಯದಿಂದ ಕೇಳಿದ ಲಕ್ಷ್ಮಿಯ ಪ್ರಶ್ನೆಗೆ, ಶೀನಪ್ಪನವರು ಹೇಳಿದರು, "ಹೊರಗಿನ ವರ ಅಲ್ಲ! ಏನೂ ಇಲ್ಲ! ನಮ್ಮ ಸೀತಕ್ಕ ಅವರ ಖಾಸ ಕಕ್ಕನ ಮಗ! ತಮ್ಮ ಆಗಬೇಕು. ಶ್ರೀಮಂತ ಮನೆತನ! ಗೌರವಸ್ಥರು! ಮಾತು ಕತೆ ನಡೆದಿದೆ. ಸೀತಕ್ಕ ಅವರ ಮನಸ್ಸಿನಲ್ಲಿ ಸುಂದರಾಳ ಮದುವೆ ಇದೇ ಲಗ್ನದ ಮಾಸದಲ್ಲಿ ಮಾಡಿಸಿ ಬಿಡಬೇಕೂ ಅಂತ ಅದೆ. ಅದಕ್ಕೇ ಅವಳನ್ನು ಕರೆದುಕೊಂಡೇ ಹೋಗಬೇಕೆಂದು ಬಂದೆ........ಏನವಾ ಸುಂದರಾ ??........ ನೋಡು ಇನ್ನು ಹಾಸಿಗೆ ಕಟ್ಟು........ತಿಳಿಯಿತೋ ಇಲ್ಲೋ? ಇಲ್ಲಿಂದಲೂ ಕಟ್ಟಬೇಕು! ಕಳಸಾಪೂರದಿಂದನೂ ಕಟ್ಟಬೇಕು! ಹ್ಞಾ?"

ಶೀನಪ್ಪನವರು ಆತ್ಮಸಂತೋಷದಿಂದಲೇ ಈ ಮಾತುಗಳನ್ನು ಹೇಳಿದರು. ಲಕ್ಷ್ಮಿಯನ್ನು ಬಿಟ್ಟು ಸುಂದರಾಗೆ ಹೋಗಲು ಮನಸ್ಸಿರಲಿಲ್ಲ. ಅದರಂತೆಯೇ ಸುಂದರಾಳನ್ನು ಬಿಡುವುದು ಲಕ್ಷ್ಮಿಗೂ ಸೇರಲಿಲ್ಲ. ಮನೆಯ ಅಧಿಕಾರ ಸೀತಕ್ಕ ಅವರ ಕಡೆಗೆ ಇದ್ದುದರಿಂದ, ಆ ಕಾಲಾವಧಿಯಲ್ಲಿ ಒಂದು ಸಮಾರಂಭವನ್ನು ಜರುಗಿಸಿ ಬಿಡಬೇಕೆಂದು ಸೀತಕ್ಕನವರ ಮನೀಷೆ. ಮೇಲಾಗಿ ಸುಂದರಾಳ ಲಗ್ನವನ್ನು ಮಾಡಿಬಿಟ್ಟರೆ, ಅದೂ ತನ್ನ ತಮ್ಮನಿಗೆ ಅವಳನ್ನು ಕೊಡಿಸಿದರೆ ಹಲವು ಉದ್ದೇಶಗಳು ಸಾಧಿಸುವವೆಂದು ಸೀತಕ್ಕ ಅವರಿಗೆ ಅನಿಸಿತ್ತು. ಸುಂದರಾ ಲಕ್ಷ್ಮಿಯ ಜೊತೆಗಿರುವುದನ್ನು ಬಿಟ್ಟುಬಿಡಬಹುದು. ಮತ್ತು ಆನಂದರಾಯರನ್ನು ತಮ್ಮ ಕಡೆಗೇ ಮಾಡಿಕೊಂಡು ತಮ್ಮ ಆಸ್ತಿಯನ್ನು ಇನ್ನೂ ಹೆಚ್ಚಿಗೆ ಬೆಳೆಯಿಸಿಕೊಳ್ಳಬಹುದು. ಒಳಗೊಳಗೆ ಮನಸ್ಸಿನಲ್ಲಿ ಈ ಆಶೆಯಿದ್ದರೂ ಸೀತಕ್ಕ ಅದನ್ನು ಹೊರಗೆ ತೋರಗೊಡಲಿಲ್ಲ. 'ಸುಬ್ಬಕ್ಕನವರೇನೊ ಕಾಶೀ ಯಾತ್ರೆ, ರಾಮೇಶ್ವರ ಯಾತ್ರೆ ಎಂದು ಹೋಗಿಬಿಟ್ಟರು. ಮನೆಯಲ್ಲಿ ಹೆಣ್ಣು ಮಕ್ಕಳ ಮದುವೆ ಚಿಂತೆ ಯಾರು ಮಾಡಬೇಕು?' ಎಂದು ಮನೆತನದ ಭಾರವನ್ನೆಲ್ಲ ಹೊತ್ತವರಂತೆ ಮಾತನಾಡುತ್ತಿದ್ದಳು. ಸೀತಕ್ಕ ಹೇಳಿದ ಮಾತುಗಳನ್ನೆಲ್ಲ ಶೀನಪ್ಪನವರು ಲಕ್ಷ್ಮಿ ಮತ್ತು ಸುಂದರಾ ಅವರ ಎದುರಿಗೆ ಹೇಳಿದರು.

"ಮಾವನವರು ಅತ್ತೆಯವರು ಕಳಸಾಪೂರಿಗೆ ಬರದ ಹೊರತು, ತಾವು ಅಲ್ಲಿಗೆ ಬರುವದಿಲ್ಲ" ಎಂದು ಲಕ್ಷ್ಮಿ ಮತ್ತು ಸುಂದರಾ ಶೀನಪ್ಪನವರಿಗೆ ಹೇಳಿದರು.

" ಸುಬ್ಬಕ್ಕನವರಿಗೆ ಸುಂದರಾ ಮೊಮ್ಮಗಳು ಅಲ್ಲದಿದ್ದರೆ, ರಾಯರಿಗೆ ಅಲ್ಲವೇನು ? ಬಂದೇ ಬರುತ್ತಾರೆ ! ನಾವು ಈ ಸುದ್ದಿಯನ್ನು ತಿಳಿಸಿದರೆ ನಾಳೆಯೆ ಹೊರಟುಬರುತ್ತಾರೆ. ಲಕ್ಕಮ್ಮಾ, ದೇವರ ದರ್ಶನವಾದ ಮೇಲೆ ಎಲ್ಲ ಸಿಟ್ಟು ಹೋಗಿಬಿಟ್ಟದೆ. ರಾಯರು ಮೊನ್ನೆ ಬಂದಿದ್ದರು; ಕಾಶೀ ಯಾತ್ರೆ ಮುಗಿದಿದೆ. ಸುಬ್ಬಕ್ಕನವರೇನೋ ತಮ್ಮ ತವರುಮನೆಯಲ್ಲಿ ನಿಂತುಕೊಂಡು, ಕಳಸಾಪೂರಕ್ಕೆ ಬರಲಿಕ್ಕೆ ಆಗಲಿಲ್ಲ. ಈಗ ಇಬ್ಬರೂ ರಾಮೇಶ್ವರಕ್ಕೆ ಹೋಗಿದ್ದಾರೆ. ಬರುತ್ತಾರೆ. ಭೂಮಿ, ಊರು, ಕೆರೆ ಬಿಟ್ಟು ಎಷ್ಟು ದಿವಸ ಇರಲಿಕ್ಕೆ ಸಾಧ್ಯ ನೀನೆ ಹೇಳು. "

ಶೀನಪ್ಪನವರು ಕಳಸಾಪೂರದ ವಾತಾವರಣವನ್ನೆಲ್ಲ ತಿಳಿಸಿ ಹೇಳಿದರು. ಲಕ್ಷ್ಮಿ ಮತ್ತು ಸುಂದರಾ ಅವರಿಗೆ ಏನು ಮಾಡಬೇಕು ತಿಳಿಯಲಿಲ್ಲ. ಸುಂದರಾ ಮಾತ್ರ ಮುಂದೆ ಹೋಗಬಹುದು. ಮುಂದೆ ರಾಮೇಶ್ವರದಿಂದ ಸುಬ್ಬಕ್ಕನವರು ಬಂದಮೇಲೆಯೇ ತಾನು ಹೋಗಬೇಕು ಎಂದು ಲಕ್ಷ್ಮಿ ಯೋಚಿಸಿದಳು. ಸೀತಕ್ಕಳ ದಬ್ಬಾಳಿಕೆಗೆ ಅವಳು ಹೆದರಿದ್ದಳಲ್ಲದೆ, ತನ್ನ ಪತಿಗೂ ಅಲ್ಲಿಯ ವಾತಾವರಣ ಸ್ವಾಸ್ಥ್ಯವನ್ನುಂಟು ಮಾಡುವುದಿಲ್ಲವೆಂದು ಲಕ್ಷ್ಮಿ ಬಗೆದಿದ್ದಳು. ಯಾವುದೂ ನಿರ್ಣಯವಾಗದಿದ್ದುದರಿಂದ, ಒಂದೆರಡು ದಿನಗಳು ಹಾಗೆಯೇ ಹೋದವು.

ಶೀನಪ್ಪನವರೂ ಹಲವು ಕೆಲಸಗಳ ನೆವ ಮಾಡಿಕೊಂಡು ಅಲ್ಲಿಯೇ ನಿಂತರು. ಎರಡು ಮೂರು ದಿನಗಳಲ್ಲಿಯೆ ಅವರು ಲಕ್ಷ್ಮಿಗೆ ಹೇಳಿದರು—" ಲಕ್ಕಮ್ಮ, ಬೆಳಗಾವಿಯ ಹವೆಯಲ್ಲಿ ಏನೋ ಮಾಯೆಯಿದೆ ನೋಡು. ಈ ಎರಡು ದಿನಗಳಲ್ಲಿಯೆ ಏನೋ ಹೊಸ ಉತ್ಸಾಹ ಬಂದಂತೆ ಆಗುತ್ತಿದೆ. ಈ ಊರಲ್ಲಿ ಜನ ಆದರೂ ಎಷ್ಟು ಸುಧಾರಿಸಿದವರು ! ಹೆಂಗಸರೂ ಸಹ ಓಣಿಯಲ್ಲಿ ಅಡ್ಡಾಡುತ್ತಾರೆ !........ ಆ ಹೆಂಗಸರೂ ಸಹ ಎಂಥವರು !!............ ನಮ್ಮ ಕಳಸಾಪೂರದಲ್ಲಿ ಇಂಥವರು ಸಿಗುವುದೇ ದುರ್ಲಭ !........ ಆ ರಂಭೆ, ಊರ್ವಶಿಯರಿಗಿಂತ ಚೆನ್ನಾಗಿ ಇದ್ದಾರೆ........ !! ರಾಮೇಶ್ವರದಿಂದ ರಾಯರು ಬಂದಮೇಲೆ ಹೇಳುತ್ತೇನೆ. ಇಲ್ಲಿ ಒಂದು ಕಾಯಂ ಮನೆ ಇಟ್ಟುಬಿಡಬೇಕೂ ಎಂದು....! ನಿನಗೆ ಹೇಗೆ ಅನಿಸುತ್ತದೆ ಲಕ್ಷ್ಮಿ ? "

ಶೀನಪ್ಪನವರು ಮಾತನಾಡುವಾಗ, ಅವರ ಮುಖಚರ್ಯೆಯಲ್ಲಿ ಏನೋ

ಬದಲಾವಣೆಯಿತ್ತು. ಅವರ ಕಣ್ಣುಗಳು ಪ್ರತಿದಿನದಂತೆ ಇರಲಿಲ್ಲ. ಯಾವುದೆ
ದುರಾಶೆಯ ಬೆಳಕು ಅದರಲ್ಲಿ ಕಂಡುಬರುತ್ತಿದ್ದಿತು. ಲಕ್ಷ್ಮಿಗೆ ಏನೋ ಸಂಶಯ
ಬಂದಿತು. " ಶೀನುಕಾಕಾ, ನೀನು ಮನಸ್ಸು ಮಾಡಿದರೆ, ಏನು ಮಾ
ಬಹುದು ಮತ್ತು ಏನು ಮಾಡಲಿಕ್ಕಿಲ್ಲ ? " ಹೀಗೆಂದವಳೆ ಲಕ್ಷ್ಮಿ ಒಳಗೆ ಹೋ
ಬಿಟ್ಟಳು—ಕೆಲಸದ ನೆವ ಮಾಡಿಕೊಂಡು.

ತನ್ನಷ್ಟಕ್ಕೆ ತಾನು ಜಾಗರೂಕಳಾಗಿಯೆ ಇರಬೇಕೆಂದು ಲಕ್ಷ್ಮಿಗೆ ಅನಿ
ತೊಡಗಿತು. ಆದಷ್ಟು ಅವಳು ಸುಂದರಾ ಮತ್ತು ನಾರಾಯಣರಾಯ
ಜೊತೆಗೇ ಇರುತ್ತಿದ್ದಳು. ನಾರಾಯಣರಾಯರ ಮನಸ್ಸಿಗೆ ಆಹ್ಲಾದವಾಗ
ವಂತೆ, ಅದರಿಂದ ಅವರ ಪ್ರಕೃತಿ ಸುಧಾರಿಸುವಂತೆ ಲಕ್ಷ್ಮಿ ತನ್ನ ನಿತ್ಯ ಕಾಯ
ಕ್ರಮ ಏರ್ಪಡಿಸಿಕೊಂಡಿದ್ದಳು. ಅವರನ್ನು ಪ್ರತಿದಿನ ಬೆಳಿಗ್ಗೆ ಮತ್ತು ಸಂಜೆ
ಲಕ್ಷ್ಮಿ ತಿರುಗಾಡಿಸಿಕೊಂಡು ಬರುವುದನ್ನು ಶೀನಪ್ಪನವರು ನೋಡಿ "ಲಕ್ಕವ್ವಾ
ನೀನೂ ಬಹಳ ಸುಧಾರಿಸಿರುವಿ. ಮುಂಬೈ ಫ್ಯಾಶನ್ !!.... " ಎಂದು ಹೇ
ಮುಗುಳುನಗೆ ನಗುತ್ತಿದ್ದರು.

ಸಂಕ್ರಾಂತಿಯ ಹಬ್ಬ ! ಶೀನಪ್ಪನವರು ಸಂಜೆಯೆ ಮನೆಬಿಟ್ಟು ಹೋದ
ವರು, ರಾತ್ರಿ ಹತ್ತು ಗಂಟೆಯಾದರೂ ಮನೆಗೆ ತಿರುಗಿ ಬರಲಿಲ್ಲ. ಕುಸುರೆಳ್ಳ
ಕೊಟ್ಟು ' ಸವಿ ಮಾತನಾಡಿರಿ ' ಎಂದು ಹೇಳುವ ಕಾರ್ಯವೆಲ್ಲ ಮುಗಿದಿತ್ತು
ನಾರಾಯಣರಾಯರು, ಸುಂದರಾ, ಹನುಮಂತ ಎಲ್ಲರೂ ತಮ್ಮ ರಾತ್ರಿಯ
ಕಾರ್ಯಕ್ರಮ ಮುಗಿಸಿ ನಿದ್ದೆಹೋದರು. ಲಕ್ಷ್ಮಿಯೂ ಶೀನಪ್ಪನವರ ದಾ
ನೋಡಿ ನೋಡಿ ಬೇಸತ್ತು ತಾನೂ ಮಲಗಿಕೊಳ್ಳುವ ಸಿದ್ಧತೆ ಮಾಡಿಕೊಂಡಳು
ಹಾಸುಗೆಯಲ್ಲಿ ಕುಳಿತಾಗ ಅವಳಿಗೆ ಒಂದು ವಿಚಾರ ಬಂದಿತು. ' ತಾನು ಸುಂದ
ರಾಳನ್ನು ಕಳಿಸಿಕೊಡಲಿಲ್ಲ. ಸುಂದರಾ ಸಹ ಹೋಗಲಿಲ್ಲ. ಇದಕ್ಕೆ ಸಿಟ್ಟಾಗಿ
ಶೀನಪ್ಪನವರು ತಿರುಗಿ ಕಳಸಾಪೂರಿಗೆ ಹೋದರೋ ಹೇಗೆ ? ಅಲ್ಲಿಗೆ ಹೋಗಿ
ತನ್ನ ಬಗ್ಗೆ ಸೀತಕ್ಕಳ ಎದುರು ಇಲ್ಲದ್ದು ಸುಳ್ಳು ಸುದ್ದಿ ಏನಾದರೂ ಹೇಳುವರೊ
ಹೇಗೆ ?............ಸಂಕ್ರಾಂತಿಯ ಹಬ್ಬ. ಮನೆಯಲ್ಲಿಯೇ ಕುಳಿತು ನಾಲ
ಸಂತೋಷದ ಮಾತುಗಳನ್ನು ಏಕೆ ಆಡಲಿಲ್ಲ ?............... ' ಲಕ್ಷ್ಮಿಯ
ಮನಸ್ಸಿನಲ್ಲಿ ಶೀನಪ್ಪನವರ ಬಗ್ಗೆ ಏನೇನೊ ವಿಚಾರಗಳು ಬಂದವು. ಮತ್ತೊಂದ
ಸಲ ಅವಳಿಗೆ ಅನಿಸಿತು– ತಾನೇ ಏನೋ ಅವರ ಬಗ್ಗೆ ತಪ್ಪು ತಿಳಿದುಕೊಳ್ಳುತ್ತಿ

ವುದೆಂದು. ಶೀನಪ್ಪನವರೇ ಅವಳನ್ನು ಮುಂಡೆ ತಂದದ್ದು. ಶೀನಪ್ಪನವರೆ ಅವಳಿಗೆ ಒಳ್ಳೆಯದು ಆಗಬೇಕೆಂದು ಲಗ್ನ ಮಾಡಿದವರು. ಲಕ್ಷ್ಮಿಗೆ ಕೆಡುಕು ಆಗಬೇಕೆಂದು ಅವರ ಮನಸ್ಸು ಇರಲಿಕ್ಕಿಲ್ಲ. ತನ್ನ ಮನಸ್ಸೇ ಏನೋ ತಪ್ಪು ಮಾಡುತ್ತಿರಬೇಕು, ಇದನ್ನು ಸುಧಾರಿಸುವುದು ಒಳ್ಳೆಯದು ಎಂದೂ ಒಮ್ಮೊಮ್ಮೆ ಅವಳಿಗೆ ತೋಚಿತು. ಪಿಳಪಿಳನೆ ಕಣ್ಣುಬಿಡುತ್ತ, ಶೀನಪ್ಪನವರ ಬಗ್ಗೆ ಹೀಗೆ ವಿಚಾರಿಸುತ್ತ ಲಕ್ಷ್ಮಿ ಒರಗಿಕೊಂಡಳು. ಅವಳಿಗೆ ನಿದ್ರೆ ಹತ್ತಲಿಲ್ಲ.

ಬಾಗಿಲು ತಟ್ಟಿದ ಸಪ್ಪಳವಾಯಿತು. ಲಕ್ಷ್ಮಿ ಕೂಡಲೆ ದೀಪ ಹಚ್ಚಿ 'ಯಾರು ?' ಎಂದು ಕೂಗುತ್ತ ಪಡಸಾಲೆಗೆ ಬಂದಳು.

ಶೀನಪ್ಪನವರು ಒಳಗೆ ಬರುವಾಗ ೨-೩ ಕೈಚೀಲಗಳ ತುಂಬ ಸಾಮಾನುಗಳನ್ನು ಹಿಡಿದಿದ್ದರು. "ಇದೇನು ಶೀನುಕಾಕಾ, ಬಹಳ ಸಾಮಾನು ತಂದಿರುವಿ ? ವಿಶೇಷವೇನು ?" ಎಂದು ಲಕ್ಷ್ಮಿ ಕೇಳಿದಳು.

ಶೀನಪ್ಪನವರು ಕೈಚೀಲಗಳನ್ನು ಒಳಗೆ ಇಡುತ್ತ ಲಕ್ಷ್ಮಿಗೆ ಹೇಳಿದರು "ಊಟವಾಗಲಿ, ಹೇಳುತ್ತೇನೆ............ಲಕ್ಕಮ್ಮ, ನನಗೇನು ನಿಜವಾಗಿ ಅಷ್ಟು ಹಸಿವೆ ಇಲ್ಲ. ಏನೋ ಹಬ್ಬದ ದಿನ ಹಾಗೆಯೆ ಮಲಗಿಕೊಳ್ಳಬಾರದು !........ ಏನೋ ಶಾಸ್ತ್ರ !........"

ಶೀನಪ್ಪನವರು ಮಾತನಾಡುತ್ತಿರುವಾಗ, ಲಕ್ಷ್ಮಿ ಒಳಗೆ ಹೋಗಿ ಹನುಮಂತನನ್ನು ಕೂಗಿದಳು. ಶೀನಪ್ಪನವರು ಲಕ್ಷ್ಮಿಗೆ ಕೇಳಿದರು "ಏಕೆ ಎಲ್ಲರೂ ಮಲಗಿಕೊಂಡರೇನು ? ಎಲ್ಲರದೂ ಊಟವಾಯಿತೇನು ?........"

"ಆಗಿ ಬಹಳ ಹೊತ್ತಾಯಿತು. ೯ ಗಂಟೆಗೇ ಊಟ ಮುಗಿಯಿಸಿ ಮಲಗಿಕೊಂಡಿದ್ದಾರೆ........"

"ಲಕ್ಕಮ್ಮ ಹಾಗಾದರೆ ಏಕೆ ಹನುಮಪ್ಪನಿಗೆ ಸುಮ್ಮನೆ ತ್ರಾಸ?? ಇರಲಿ ಬಿಡು........ ಒಂದು ತುತ್ತು ಮಸರು ಅನ್ನ ಊಟ ಮಾಡುವುದು !........"

"ಶೀನುಕಾಕಾ, ನಾನೇ ತಾಟು ಬಡಿಸುತ್ತೇನೆ, ಬೇಗ ಬಂದುಬಿಡು."

ಲಕ್ಷ್ಮಿ ಶೀನಪ್ಪನವರಿಗೆ ಒಂದು ಬೆಳ್ಳಿಯ ತಾಟಿನಲ್ಲಿ ಊಟ ಬಡಿಸಿದಳು. ವಿರಾಜಮಾನರಾಗಿ ಮಣೆಯ ಮೇಲೆ ಕುಳಿತ ಶೀನಪ್ಪನವರಿಗೆ ಆ ದಿನ ಊಟದ ಕಿಂತಲೂ ಲಕ್ಷ್ಮಿಯ ಕಡೆಗೆ ಹೆಚ್ಚು ಮನಸ್ಸು ಹೋಯಿತು. ಚಿಕ್ಕವಳಿದ್ದಾಗಿ

ನಿಂದ ಅವರು ಲಕ್ಷ್ಮಿಯನ್ನು ನೋಡಿದ್ದರು. ಅವಳು ಚಿಕ್ಕವಳಿದ್ದಾಗ, ಅ
ಳನ್ನು ಅಕ್ಕರತೆಯಿಂದ ರಕ್ಷಿಸಿದ್ದರು. ಸಂಜೀವರಾಯರ ವಾತ್ಸಲ್ಯವೆಷ್ಟೊ, ಅ
ಅವರದೂ. ಶೀನಪ್ಪನವರಿಗೆ ಸಂಜೀವರಾಯರ ಮನೆಯಲ್ಲಿ ಅಷ್ಟು ಸಲಿ
ಯಿತ್ತು !........ ಆದರೆ ಈಗ ಲಕ್ಷ್ಮಿಯು ಯೌವನಾವಸ್ಥೆಯಲ್ಲಿರುವಾಗ, ಅವ
ಚೆಲುವೇ ಬೇರೆ ರೀತಿಯದಾಗಿತ್ತು. ಒಂದು ಗುಲಾಬಿಯ ಹೂವಿನಂ
ಆಕಾಶದಲ್ಲಿಯ ಚಂದ್ರಮನಂತೆ ಶೀನಪ್ಪನವರಿಗೆ ಲಕ್ಷ್ಮಿಯು ಕಂಡಳು. ಊಟ
ಕುಳಿತಾಗಲೆ ಅವರ ಮನಸ್ಸು ಚಂಚಲವಾಗತೊಡಗಿತು.

" ಲಕ್ಕಮ್ಮಾ, ಸಾಮಾನುಗಳು ಏನು ಎಂದು ಕೇಳಿದಿಯಲ್ಲಾ, ಈ
ತೋರಿಸುತ್ತೇನೆ ಬಾ " ಎಂದು ಲಕ್ಷ್ಮಿಗೆ ಕೂಗಿ, ಹೊರಗಿನ ಕೋಣೆಗೆ ಕರೆದರ
ವಾಸನೆ ಎಣ್ಣೆಯ ಬಾಟ್ಲಗಳು, ಸ್ನೋ ಬಾಟ್ಲಗಳು, ಪಾವಡರ ಡಬ್ಬಿಗಳ
ಊದಿನ ಕಡ್ಡಿಗಳನ್ನು ಚುಚ್ಚುವ ಬೆಳ್ಳಿಯ ಗಿಡಗಳು ಮುಂತಾದ ಅನೇ
ಸಾಮಾನುಗಳು ಆ ಚೀಲದಲ್ಲಿದ್ದವು. ಒಂದೊಂದನ್ನು ತೆಗೆಯುತ್ತ ಲಕ್ಷ್ಮಿ
ತೋರಿಸಿಹತ್ತಿದರು.

" ಶೀನುಕಾಕಾ ಇವುಗಳೆಲ್ಲ ಏತಕ್ಕೆ ? ಯಾರಿಗಾಗಿ ?" ಎಂದು ಲಕ್ಷ್
ಕೇಳಿದಳು.

" ನಿಮಗಾಗಿ........... ! " ಎಂದು ಶೀನಪ್ಪನವರು ಲಕ್ಷ್ಮಿಯ ಕಡೆ
ನೋಡಿ ನಕ್ಕರು.

" ನಿಮಗಾಗಿ—ಅಂದರೆ ನಿನ್ನ ಜಾಗಿರದಾರ ಮನೆತನಕ್ಕಾಗಿ. ಈ ಮ
ತನ ಮುಂದು ಬರಬೇಕೆಂದು ಮೊದಲಿನಿಂದ ನಾನು ದುಡಿಯುತ್ತಿದ್ದೇನ
ಹಗಲೂ ರಾತ್ರಿ ಅದೇ ಚಿಂತೆ ನನಗೆ. ಅದಕ್ಕಾಗಿ........ "

" ಶೀನುಕಾಕಾ, ನೀನು ಏನು ಹೇಳುವಿ ನನಗೆ ತಿಳಿಯಲಿಲ್ಲ. "

" ಲಕ್ಕಮ್ಮಾ ತಿಳಿಯಲಿಲ್ಲವೇ ನಿನಗೆ ?........ ನೋಡು....ಹೊಲ, ಮ
ತೋಟ, ಪಟ್ಟಿ ಎಲ್ಲ ಆದವು. ಇದರ ಉತ್ಪನ್ನ ಎಷ್ಟು ಸ್ಥಿರ ನೋಡು
ಇದಕ್ಕೂ ಹೆಚ್ಚಿಗೆ ಉತ್ಪನ್ನ ಅಂಗಡಿಯಿಂದ, ವ್ಯಾಪಾರದಿಂದ ಬರುವುದು
ಅದಕ್ಕೆ ಒಂದು ಅಂಗಡಿಯನ್ನು ತೆರೆಯಬೇಕೆಂದು ಮಾಡಿದ್ದೇವೆ. ಬರುವ
ಯುಗಾದಿಗೇ ಆರಂಭಿಸಬೇಕು. ಅದಕ್ಕೇನೆ ಈಗಿನಿಂದ ಸಾಮಾನು ಸಂಗ್ರ
ಮಾಡುತ್ತಿದ್ದೇನೆ. ಈ ಕೆಲಸವೂ ಆಯಿತು, ಸುಂದರಾಳನ್ನು ಕರೆದುಕೊಂಡ

ಹೋಗುವ ಕೆಲಸವೂ ಆಯಿತು. ಅಂತೆಯೆ ಒಂದು ವಾರ ಬಿಡುವು ಇಟ್ಟು ಕೊಂಡೇ ಇಲ್ಲಿಗೆ ಬಂದೆ..........ಅದು ಇರಲಿ ಬಿಡು, ಈ ಎಣ್ಣೆಯ ವಾಸನೆ ನೋಡು, ಹೇಗಿದೆ?" ಶೀನಪ್ಪನವರು ಒಂದು ಬಾಟ್ಲಿಯ ಬೂಚು ತೆರೆದು, ಆ ಬಾಟ್ಲಿಯನ್ನು ಲಕ್ಷ್ಮಿಯ ಮೂಗಿಗೆ ಹಿಡಿದರು.

"ಮಲ್ಲಿಗೆ ಹೂವಿನ ವಾಸನೆ ಇದೆ!" ಎಂದು ಲಕ್ಷ್ಮಿ ವಾಸನೆ ತೆಗೆದು ಕೊಳ್ಳುತ್ತ ಹೇಳಿದಳು.

"ಇಗೋ ಇದು ನೋಡು, ಅತ್ತರ" ಎಂದು ಒಂದು ಅರಳೆಯ ಚೂರಿನಿಂದ ಲಕ್ಷ್ಮಿಯ ಕೈಹಿಡಿದು ಆ ಅತ್ತರನ್ನು ಹಚ್ಚಿದರು. "ಲಕ್ಕವ್ವಾ ಹೇಗಿದೆ ನೋಡು ವಾಸನೆ!........"

"ಅಹುದು, ಶೀನುಕಾಕಾ ಕೋಣೆಯ ತುಂಬ ಹರಡಿದೆ!"

"ಲಕ್ಕವ್ವಾ, ಈ ಸುವಾಸನೆ ಎಲ್ಲಿಂದ ಬರುತ್ತಿದೆ ಗೊತ್ತಿದೆಯೇನು?"

"ಈ ಬಾಟ್ಲಿಯಿಂದ........"

"ಹುಚ್ಚೀ, ಬಾಟ್ಲಿಯಿಂದ ಅಲ್ಲ........ನಿನ್ನಿಂದ........ನಿನ್ನ ಕೈಯಿಂದ ........ನೋಡೋಣ ಇನ್ನೊಮ್ಮೆ........" ಶೀನಪ್ಪನವರು ಕೈಹಿಡಿದು ಅವಳನ್ನು ಜಗ್ಗಿದರು.

"ಅಯ್ಯೋ ಇದೇನು? ಶೀನೂಕಾಕಾ, ಇದೇನು?"

"ಏನೂ ಇಲ್ಲ, ನಿನ್ನೆದುರಿಗೆ ಯಾವ ಸುವಾಸನೆಯೂ ಇಲ್ಲ...."

"ಕೈ ಬಿಡು, ಕೈಬಿಡು...."

"ಇನ್ನು ಕೈಬಿಡಲು ಸಾಧ್ಯವೇ....ಇಲ್ಲ...."

"ಅಯ್ಯೋ! ಅಯ್ಯೋ!!" ಲಕ್ಷ್ಮಿ ಚೀರಿಕೊಂಡಳು. ತನ್ನ ಮೈಯಲ್ಲಿಯ ಆವೇಶವನ್ನೆಲ್ಲ ಉಪಯೋಗಿಸಿ, ಕೈ ಕೊಸರಿಕೊಳ್ಳಲು ಯತ್ನಿಸಿದಳು. ಶೀನಪ್ಪನವರು ಅವಳನ್ನು ಬಿಡಲಿಲ್ಲ. ಗಂಡಸಿನ ಸಾಮರ್ಥ್ಯದೆದುರು ಅವಳು ಹೇಗೆ ನಿಲ್ಲಬೇಕು?........

"ಲಕ್ಕೂ, ಸುಮ್ಮನೆ ಏಕೆ ಚೀರಿಕೊಳ್ಳುವೆ? ಎಲ್ಲರೂ ಮಲಗಿದ್ದಾರೆ. ಈ ಕತ್ತಲೆಯಲ್ಲಿ ನಿನ್ನನ್ನು ಯಾರೂ ಬದುಕಿಸುವದಿಲ್ಲ. ನಾನೊಬ್ಬನೇ ನಿನಗೆ ಬೆಳಕು. ನಿನಗೆ ನಾನು ಮಾಡಿದ್ದಾದರೂ ಏನು? ಸುಮ್ಮನೇ ಕೈ ಹಿಡಿದರೆ ಎಷ್ಟು ಒದರುವೆ? ಲಕ್ಕು, ನೀನು ಸುಂದರಿ ಇರುವಿ. ಈಗ ಎರಡು ವರ್ಷ

ಗಳಲ್ಲಿ ಹುಣ್ಣಿಮೆ ಚಂದ್ರಮನಂತೆ ಆಗಿರುವಿ. ನಿನ್ನನ್ನು ನಾರಾಯಣರಾಯರು ಎಷ್ಟು ಪ್ರೀತಿಸುವರೆಂಬುದು ನನಗೆ ಗೊತ್ತಿದೆ........"

"ಪಾಪಿ, ಏನೂ ಮಾತನಾಡಬೇಡ...."

"ಲಕ್ಶ್ಮಿ, ಸಿಕ್ಕ ಸಿಕ್ಕ ಹಾಗೆ ಮಾತನಾಡಬೇಡ. ಸಂಪೂರ್ಣ ನೀನು ಈಗ ನನ್ನ ಕೈಯಲ್ಲಿರುವಿ...."

"ಅಯ್ಯೋ! ಬಿಡು—ನನ್ನ ಕೈ....!"

"ಈ ಚೆಲುವನ್ನು ಬಿಡುವುದು ಹೇಗೆ ಸಾಧ್ಯ?........ ಅತ್ತೆಯ ಮನೆಯಲ್ಲಿ ನಿನಗೆ ಸುಖವಾಗಬೇಕಿದ್ದರೆ, ನೀನು ನನ್ನನ್ನು ನಂಬು. ನನ್ನಂತೆ ಕೇಳು. ನಾರಾಯಣರಾಯರು ನಿನಗೆ ನಿಜವಾದ ಗಂಡನಾಗಲು ಶಕ್ಯವೇ ಇಲ್ಲ........" ಶೀನಪ್ಪನವರು ಅವಳನ್ನು ಕೈಯಿಂದ ಹಿಡಿದು ಜಗ್ಗುತ್ತ ದೀಪವಾರಿಸಲು ಹೋದರು.

ಅವರ ಕೃತಿ ನೋಡಿ, ದೀಪ ಚಕ್ಕನೆ ಆರುವಾಗ ಲಕ್ಷ್ಮಿ ಸಂಕಟಪಟ್ಟು ಜೋರಾಗಿ ಕೂಗಿದಳು.

"ಯಾರು? ಏನಾಯಿತು? ಬಾಯಿಸಾಹೇಬರೆ, ಬಾಯಿಸಾಹೇಬರೇ?........"

ಹನುಮಂತನ ಧ್ವನಿ ಕೇಳಿ, ಶೀನಪ್ಪನವರು ಲಕ್ಷ್ಮಿಯ ಕೈಬಿಟ್ಟರು. ಕತ್ತಲೆಯಲ್ಲಿಯೆ ದೂರ ಸರಿದರು. ಧ್ವನಿಯನ್ನು ಬದಲಾಯಿಸುತ್ತ ಹನುಮಂತನಿಗೆ ಕೇಳಿದರು. "ಲಗೂನೆ ದೀಪಾ ಹಚ್ಚೊ ಹನುಮಂತ! ಮನೆಯೆಲ್ಲ ಕತ್ತಲೆ! ಯಾರಿಗೆ ಏನಾಯಿತೋ ಏನೋ?........" ಎಂದು ಕೂಗಿದರು. ಹನುಮಂತ ಪಡಸಾಲೆಯಲ್ಲಿಯೇ ದೀಪ ಹಚ್ಚಿದ.

ಬಾಗಿಲದ ಹತ್ತಿರ ಲಕ್ಷ್ಮಿ ಬಿದ್ದಿದ್ದಳು. ಅವಳಿಗೆ ಮಾತುಗಳೇ ಹೊರಡುತ್ತಿರಲಿಲ್ಲ. ಮೈಯೆಲ್ಲ ಬೆವರಿತ್ತು. "ಅಯ್ಯೋ ಸಾಹೇಬ ಚಿಕ್ಕಬಾಯಿಯವರ! ಏನಾಯಿತು? ಏನಾಯಿತು?........" ಎಂದು ಹನುಮಂತ ಲಕ್ಷ್ಮಿಯನ್ನು ಎಬ್ಬಿಸಹೋದನು.

ಶೀನಪ್ಪನವರೂ ಬಾಗಿಲದ ಹತ್ತಿರ ಬಂದು, "ರಾತ್ರಿ ಒಂದು ದೀಪವನ್ನಾದರೂ ಇಡುವುದಿಲ್ಲ ಹನುಮಂತ! ನೋಡು ಹೀಗೆ ಏನಾದರೂ ಅನಾಹುತವಾದರೆ?........ ನಾನು ಇದೇ ಈಗ ಊಟಮಾಡಿ ಹೊರಗೆ ಬಂದೆ. ಲಕ್ಕಮ್ಮಾ

ಕುಸರೆಳ್ಳು ಕೊಡುತ್ತೇನೆ ಎಂದು ಹೊರಗೆ ಬರುತ್ತಿದ್ದಳು........! ಛೀ! ಛೀ! ಲಕ್ಕವ್ವಾ ಹೊಡೆತ ಬಿದ್ದಿತೇನು?........"

"ಹೂಂ! ಭಯಂಕರ ಹೊಡೆತ ಬಿದ್ದಿದೆ!........"

"ಎಲ್ಲಿ ಬಿದ್ದಿದೆ ಸಾಹೇಬ ಚಿಕ್ಕಬಾಯಿಯವರ?" ಹನುಮಂತ ಕರುಳಿನಿಂದ ಕೇಳಿದ.

"ಆ ಹೊಡೆತ ಯಾರಿಗೂ ಕಾಣಿಸುವದಿಲ್ಲ....! ಹನುಮಂತ ನನಗೆ ಒಳಗೆ ಕಳಿಸು. ಉಶ್ಶ್ಯ!.... ಏನೂ ಆಗಿಲ್ಲ....ಯಾರೂ ಮಾತನಾಡಬೇಡಿರಿ. ಬೇಗನೆ ಎಲ್ಲ ಬಾಗಿಲು ಬಂದು ಮಾಡು. ಉಶ್ಶ್ಯss........"

ಹನುಮಂತ ಲಕ್ಷ್ಮಿಯನ್ನು ಸಾವಕಾಶ ಒಳಗೆ ಕರೆದುಕೊಂಡುಹೋದನು. ಲಕ್ಷ್ಮಿಗೆ ಜಗ್ರನೆ ಜರಿದು, ಅಶಕ್ತರಾದವರಂತೆ ನರಳುತ್ತಿದ್ದಳು. ಯಾರ ಎದುರಿಗೂ ಏನೂ ಮಾತನಾಡಲು ಇಚ್ಛಿಸಲಿಲ್ಲ. ಸುಂದರಾ ಮತ್ತು ನಾರಾಯಣರಾಯರು ಕೇಳಿದ ಪ್ರಶ್ನೆಗಳಿಗೆ ಸುಮ್ಮನೇ ಇದ್ದಳು. "ಬಾಯಿಸಾಹೇಬರ, ಇದು ದೆವ್ವದ ಜಾಗೆ ಇದೆಯೋ ಏನೋ! ಒಮ್ಮೆಲೆ ಹೀಗೇಕೆ ದೀಪ ಆರಿತು! ನಾಳೆ ನಮ್ಮೂರಿಗೇ ಹೋಗಿ ಬಿಡೋಣ!" ಹನುಮಂತ ಪರಿಪರಿಯಾಗಿ ಲಕ್ಷ್ಮಿಗೆ ಸಹಾನುಭೂತಿ ತೋರಿಸಿದ.

ಎಲ್ಲ ಬಾಗಿಲುಗಳೂ ಇಕ್ಕಿದ್ದವು. ಎಲ್ಲ ಕಡೆಗೂ ಸ್ತಬ್ಧತೆ ಇತ್ತು. ಲಕ್ಷ್ಮಿ ಬಿರಬಿರನೆ ಶೂನ್ಯ ಮನಸ್ಕಳಾಗಿ ಜಂತೆಯ ಕಡೆಗೆ ನೋಡುತ್ತಿದ್ದಳು. ನಡುನಡುವೆ ಅವಳ ಮುಖ ಬೆವರೊಡೆಯುತ್ತಿತ್ತು. ನಾರಾಯಣರಾಯರು ೩-೪ ಸಲ ಅವಳ ಕಡೆಗೆ ನೋಡಿದರು. ಲಕ್ಷ್ಮಿ ಮೌನವಾಗಿದ್ದನ್ನು ಕಂಡು, ಅವರಿಗೆ ಹೇಗೆ ಹೇಗೋ ಅನಿಸಹತ್ತಿತು. "ಏಕೆ? ಏನಾಗಿದೆ ನಿನಗೆ? ಹೀಗೇಕೆ ನೋಡುತ್ತಿರುವಿ?" ನಾರಾಯಣರಾಯರ ಈ ಮಾತುಗಳು ಲಕ್ಷ್ಮಿಯ ಅಂತಃಕರಣವನ್ನು ಕಲಕಿದವು. ತನ್ನ ಪತಿಯ ಸ್ವಭಾವದಲ್ಲಿ ಅಪೂರ್ವ ಬದಲಾವಣೆ ಅವಳಿಗೆ ಕಂಡಿತು.

ತನ್ನ ತಲೆಯನ್ನು ಅವರ ತೊಡೆಯ ಮೇಲಿಟ್ಟು ಲಕ್ಷ್ಮಿ ಕಂಬನಿ ಸುರಿಸಿದಳು. "ಹೀಗೇಕೆ ಮಾಡುತ್ತಿರುವಿ? ಹೇಳು" ಎಂದು ಅವಳ ಮುಂಗುರುಳುಗಳನ್ನು ತೀಡುತ್ತ ನಾರಾಯಣರಾಯರು ಕೇಳಿದರು. "ನೀವೇ ನನ್ನ ಪತಿ ಅಲ್ಲವೆ? ನನ್ನ ಕೈಹಿಡಿದವರು ನೀವೇ ಅಲ್ಲವೆ?" ಲಕ್ಷ್ಮಿ ಕಂಬನಿದುಂಬಿದ

ಕಣ್ಣುಗಳನ್ನೆತ್ತಿ ನಾರಾಯಣರಾಯರನ್ನು ನಿಟ್ಟಿಸಿದಳು.

" ಅಹುದು ! ಅಹುದು ! " ಎಂದು ಪುನಃ ಪುನಃ ನುಡಿಯುತ್ತ ಅವಳ ಕೈಗಳನ್ನು ಗಟ್ಟಿಯಾಗಿ ಹಿಡಿದರು.

" ನೀವು ಬಹಳ ಜಾಣರಿರುವಿರಿ ! ನೀವು ಹೀಗೆ ಇರುವಿರಿ ಎಂದು.... ! "

" ನೀನೂ ನನ್ನನ್ನು ಹುಚ್ಚನೆಂದು ತಿಳಿಯುವಿಯೇನು ? ಅಲ್ಲs ? "

" ಇಲ್ಲ ! ಪತಿಯೆಂದು, ಪತಿದೇವರೆಂದು ತಿಳಿದಿದ್ದೇನೆ ! "

" ಹೂಂ !....ಹಾಗಿದ್ದರೆ ಇಷ್ಟಕ್ಕೇ ಏಕೆ ಅಳುವೆ ? "

ನಾರಾಯಣರಾಯರ ಮಾತುಗಳು ಪ್ರೀತಿಯ ಹೃದಯದಿಂದ ಬಂದಿದ್ದವು. ಯಾವುದೋ ಹೃದಯ ಅಂತರಂಗದ ಬಾಗಿಲು ತೆರೆದು ತನ್ನನ್ನು ಬರಮಾಡಿಕೊಳ್ಳುತ್ತಿದೆ ಎಂದು ಲಕ್ಷ್ಮಿಗೆ ಅನಿಸಿತು. ನಾರಾಯಣರಾಯರ ಸಹವಾಸದಲ್ಲಿ ಇಂಥ ಅನುಭವ ಅವಳಿಗೆ ಬಂದುದು ಇದೇ ಮೊದಲ ಸಲ. ಲಕ್ಷ್ಮಿ ಏನೋ ಆನಂದವೆನಿಸಿ, ತನ್ನ ಕಂಬನಿಗಳನ್ನು ಒರಯಿಸಿಕೊಂಡಳು—ಸೀರೆಯ ಸೆರಗಿನಿಂದ. ನಾರಾಯಣರಾಯರೂ ಅದಕ್ಕೆ ಸಹಾಯಕರಾದರು.

" ನೋಡಿರಿ, ನಿಮ್ಮ ಪಾದ ಮುಟ್ಟಿ ಹೇಳುತ್ತೇನೆ " ಎಂದು ಲಕ್ಷ್ಮಿ ನಾರಾಯಣರಾಯರ ಎದುರು ತನ್ನ ಮಾತು ಪ್ರಾರಂಭಿಸಿದಳು " ನಾವು ನಿಮ್ಮವಳಾಗಿದ್ದರೆ, ನನ್ನದೊಂದು ಮಾತು ನಡೆಯಿಸಬೇಕು.... "

" ಏನು ಹೇಳು.... "

" ಇನ್ನು ಮೇಲೆ ನೀವು ನಾನು ಹೇಳಿದಂತೆ ಕೇಳಬೇಕು. ಎಂದಿಗೂ ಒಲ್ಲೆನ್ನಬಾರದು. "

" ನಾನು ನಿನಗೆ ಒಲ್ಲೆನೆಂದು ಯಾವಾಗ ಅಂದಿರುವೆ ? ನೀನು ಹೇಳಿದ್ದೆಲ್ಲಾ ಕೇಳುವೆ.... "

" ನನ್ನ ಕೈಮೇಲೆ ಕೈಹಾಕಿ ವಚನವನ್ನು ಕೊಡಿರಿ. "

ಲಕ್ಷ್ಮಿ ವಚನವನ್ನು ತೆಗೆದುಕೊಂಡಳು. ಶೀನಪ್ಪನವರ ಸುದ್ದಿಯನ್ನು ಮೊದಲು ಹೇಳಬಾರದೆಂದು ಅವಳಿಗೆ ಮೊದಲು ಅನಿಸಿದ್ದರೂ, ನಾರಾಯಣರಾಯರ ಅಂದಿನ ಸ್ವಭಾವವನ್ನು ನೋಡಿ. ಅವಳ ಹೃದಯ ಉಕ್ಕೇರಿ ಬಂದು, ನಡೆದ ಸಂಗತಿ ಎಲ್ಲವನ್ನೂ ಇದ್ದಕ್ಕಿದ್ದಂತೆ ಹೇಳಿಬಿಟ್ಟಳು. ಆ ಕತೆ ಹೇಳುವುದು ಮುಗಿಯುತ್ತಲೆ, ಅವಳು ನಿಟ್ಟುಸಿರು ಬಿಟ್ಟಳು !

ಈ ಸಂಗತಿ ಕೇಳಿ ನಾರಾಯಣರಾಯರಿಗೆ ಭಯಂಕರ ಸಿಟ್ಟು ಬಂದು ಟ್ಟಿತು. ಬಾಗಿಲ ತೆರೆದು ಶೀನಪ್ಪನವರ ಜೊತೆಗೆ ಮಾರಾಮಾರಿ ಮಾಡಿ ಡುವರೇನೋ ಎಂದೆನಿಸಿತು ಲಕ್ಷ್ಮಿಗೆ. ಅವಳೇ ಅವರನ್ನು ತಡೆದು ಹೇಳಿ ಳು "ಅವನ ಸ್ವಭಾವ ನಿಮಗೆ ಗೊತ್ತಿದೆ! ಅವನನ್ನು ಈಗ ಮುಟ್ಟಿದರೆ, ಾಗರಹಾವನ್ನು ತಡವಿದಂತೆ !!" ಲಕ್ಷ್ಮಿ ಮನಸ್ಸನ್ನು ಹಿಡಿತದಲ್ಲಿ ತಂದು ಕೊಂಡು ಹೇಳಿದಳು "ಶೀನುಕಾಕಾ ಇರುವಲ್ಲಿ ನಾನು ಇರುವುದು ಸಾಧ್ಯವೇ ಇಲ್ಲ!.... ಅವನನ್ನು ಹೊರಗೇ ಹಾಕಬೇಕು" ಎಂದು. ನಾರಾಯಣ ರಾಯರೂ ಅದಕ್ಕೆ ಹೂಂಗುಟ್ಟಿದರು.

ಮರುದಿನ ಬೆಳಿಗ್ಗೆ ಏನಾದರೂ ಭಯಂಕರವಾಗುವುದು ಎಂದು ಲಕ್ಷ್ಮಿ ತರ್ಕಿಸಿದಳು. ಮುಂಜಾವಿನಲ್ಲಿ ಶೀನಪ್ಪನವರನ್ನು ಹೇಗೆ ನೋಡಬೇಕು! ಹುತರ ಶೀನಪ್ಪನವರು ಇನ್ನುಮುಂದೆ ತನ್ನನ್ನು ನೋಡುವುದೇ ಇಲ್ಲ!........ ನೇನು ಆಗುವುದೋ ಎಂದು ಅವಳು ಸ್ವಲ್ಪ ಹೆದರಿಯೂ ಹೆದರಿದಳು.

ಶೀನಪ್ಪನವರು ಪ್ರತಿನಿತ್ಯ ಏಳುವಂತೆ ಸಹಜವಾಗಿ ಎದ್ದರು. ಮುನ್ನಾ ಾತ್ರಿಯ ಘಟನೆಯ ಯಾವ ಅಂಶವೂ ಅವರ ಮುಖಮುದ್ರೆಯಲ್ಲಿ ಕಾಣಲಿಲ್ಲ. ಪ್ರಸನ್ನವದನರಾಗಿಯೇ ಇದ್ದರು. ಬೆಳಗಿನಲ್ಲಿ ಅವರು ಎರಡುನೂರು ರೂಪಾ ಯಿಗಳನ್ನು ನಾರಾಯಣರಾಯರಿಗೆ ಕೊಟ್ಟು, ತಮ್ಮ ಒಂದು ನೋಟಬುಕ್ಕಿನಲ್ಲಿ ನಾರಾಯಣರಾಯರ ಸಹಿ ತೆಗೆದುಕೊಂಡರು. ಪ್ರತಿಸಲ ಅವರು ಲಕ್ಷ್ಮಿಯ ಕಡೆಗೆ ರೂಪಾಯಿ ಕೊಟ್ಟು, ನಾರಾಯಣರಾಯರ ಕಡೆಯಿಂದ ಸಹಿ ಮಾಡಿಸಿ ಕೊಳ್ಳುತ್ತಿದ್ದರು. ಈಸಲ ಮಾತ್ರ ಪದ್ಧತಿ ಬದಲಾಯಿತು! ಇದೊಂದೇ ಬದ ಲಾವಣೆ ಅವರಲ್ಲಿ ಕಂಡುಬಂದಿತು. ನಾರಾಯಣರಾಯರು ಏನೋ ಮಾತನಾ ಡಬೇಕೆಂದರು! ಆದರೆ ಲಕ್ಷ್ಮಿ ಆ ವಿಷಯದಬಗ್ಗೆ ಹೊರಗೆ ಮಾತನಾಡದಿರಲು ಮೊದಲೆ ಆಜ್ಞೆ ಮಾಡಿದ್ದಳು. ನಾರಾಯಣರಾಯರೂ ಅವಳ ಅಪ್ಪಣೆ ಪಾಲಿ ದರು.

ಮಧ್ಯಾಹ್ನ ಶೀನಪ್ಪನವರು ಹೇಳಿದರು— "ಈ ದಿನ ನಾನು ಊರಿಗೆ ಹೋಗುತ್ತೇನೆ. ಸುಂದರಾ, ನಿನ್ನದೇನು ಕೆಲಸವಿದೆ ಇಲ್ಲಿ? ನಡೆ ಊರಿಗೆ ಹೋಗೋಣ" ಎಂದು ಗಟ್ಟಿಸಿ ಹೇಳಿದರು.

"ವೈನಿ ಬಂದರೆ ಬರುತ್ತೇನೆ...." ಎಂದು ನಗುತ್ತ ಸುಂದರಾ ಹೇಳಿದಳು.

ಲಕ್ಷ್ಮಿಯನ್ನು ಅಷ್ಟು ಹಚ್ಚಿಕೊಂಡು ಮಾತನಾಡಿದ್ದನ್ನು ಕಂಡು, ಶಿ
ಪ್ಪನವರು ಕೋಪಗೊಂಡರು. "ಮೊದಲಿನಿಂದ, ಲಕ್ಕಮ್ಮನೇ ಏನು ನಿನ್ನ
ನೋಡಿಕೊಂಡವರು? ನಾನೇನು ನಿನಗೆ ಮಾಡಿಲ್ಲವೆ?...."

ಲಕ್ಷ್ಮಿ ಮೊದಲು ಮಾತನಾಡದೆ ಸುಮ್ಮನೇ ಇದ್ದಳು. ಆದರೆ ಶೀನ
ನವರು ಜೋರಿನಿಂದ ಮಾತನಾಡುವುದನ್ನು ಕೇಳಿ, ಲಕ್ಷ್ಮಿಯ ಮನಸ
ಸುಮ್ಮನೇ ನಿಲ್ಲಲಿಲ್ಲ— "ಏನೋ ನನ್ನ ಹತ್ತಿರ ಇರುತ್ತೇನೆ ಅನ್ನುತ್ತಾಳೆ
ಇದ್ದರಾಯಿತು! ನಿನ್ನದೇನು ಅಷ್ಟು ಜುಲುಮೆ??"

"ಹೂಂ! ಇರಲಿ! ಇಲ್ಲಿಯೇ ಇರಲಿ!" ತಮ್ಮ ದರ್ಪದಿಂದ ಕಾ
ಅಪ್ಪಳಿಸುತ್ತ ಶೀನಪ್ಪನವರು ಹೊರಟುಹೋದರು. "ಲಕ್ಕು, ನಿನಗೆ ಇನ
ತಲೆಯ ಮೇಲಿನ ಮಾಸ ಆರಿಲ್ಲ........ಹಿಂದುಗಡೆ ತಿಳಿಯುವುದು" ಎಂ
ವಟವಟನೆ ಹೋಗುವಾಗ ನುಡಿದರು.

ಶೀನಪ್ಪನವರು ಆಡಿದ ಮಾತುಗಳು ಶಾಪದಿಂದಲೇ ಬಂದಿದ್ದವೊ
ಏನೋ! ಮುಂದೆ ಎಂಟು ದಿನಗಳಲ್ಲಿಯೆ ಬಹಳ ಆಘಾತದ ಸುದ್ದಿಯೊಂ
ಬಂದಿತು! ಗದಗಿನಿಂದ ತಾರು ಬಂದಿತು—ರಾಮೇಶ್ವರದಲ್ಲಿಯೆ ಕೃಷ್ಣರಾಯ
ತೀರಿಕೊಂಡರೆಂದು!

ಬೆಳಗಾವಿಯ ಬಂಗಲೆ ಕಂಬನಿಯಿಂದ ತೊಯ್ದುಹೋಯಿತು. ನಾರಾ
ಣರಾಯರು ಕೂಸಿನಂತೆ ಅತ್ತರು! ಬೆಳಗಾವಿಯ ವಾಸ ಮುಗಿಯಿತು
ಮನೆಯ ಬಾಗಿಲ ಇಕ್ಕಿದವು! ಕಂಬನಿ ತೊಡೆದ ಕೈಯಿಂದಲೇ ಕೀಲಿಯನ
ಹಾಕಬೇಕಾಯಿತು!

## ೧೩

ಸುಬ್ಬಕ್ಕನವರು ತಮ್ಮ ಸಿಟ್ಟಿನಿಂದ ಕಳಸಾಪೂರವನ್ನು ಬಿಟ್ಟಿದ್ದರ
ಸೀತಕ್ಕ ಮಹಾಮಾಯೆ! ಇನ್ನೊವೆ್ಮ ಅವಳ ಮುಖವನ್ನೇ ನೋಡಬಾರದ
ಎಂದು ನಿರ್ಧರಿಸಿದ್ದರು! ತಿರುಪತಿಯಾಯಿತು. ಅಲ್ಲಿಂದ ಉತ್ತರಕ್ಕೆ ಅಭಿಮ
ಖರಾಗಿ ಕಾಶೀ ಯಾತ್ರೆಗೆ ಹೊರಟರು. ದಾರಿಯಲ್ಲಿ ಬೇರೆ ಬೇರೆ ಕ್ಷೇತ್ರ

ಳನ್ನು ಸಂದರ್ಶಿಸಿದರು. ಕೃಷ್ಣಾಸ್ನಾನ, ಗೋದಾವರಿ ಸ್ನಾನ, ಗಂಗಾಸ್ನಾನ ಲ್ಲವೂ ಆದವು. ಧನವನ್ನು ನೀರಿನಂತೆ ಖರ್ಚು ಮಾಡಿ, ಪುಣ್ಯಕಟ್ಟಿಕೊಂಡು ್ಗರ್ಗ ಮುಟ್ಟುವ ದಾರಿಯನ್ನು ಸುಬ್ಬಕ್ಕನವರು ಸಾಧ್ಯ ಮಾಡಿಕೊಂಡರು. ಾಶೀಯಾತ್ರೆಯಿಂದ ತಿರುಗಿ ಬರುವಾಗ, ಕಳಸಾಪೂರಿಗೆ ಹೋಗಬೇಕೆಂದು ಂದು ಯೋಜನೆ! ಸಿಟ್ಟು ಸುಬ್ಬಕ್ಕನವರದು! ಕೃಷ್ಣರಾಯರ ಕರುಳು ೀಗೆ ನಿಲ್ಲಬೇಕು ?? ಸೀತಕ್ಕ ಅವರ ಸೊಸೆಯೇ! ತಮ್ಮ ಸ್ವಂತ ಮಗನ ಲ್ಯಾಣಕ್ಕಾಗಿ ಏನಾದರೂ ಒಪ್ಪಂದ ಮಾಡುವುದು ಲೇಸೆಂದು ಅವರಿಗೆ ೋಚಿತು. ಪುಣೆಯನ್ನು ಬಿಟ್ಟು ಸೊಲ್ಲಾಪೂರ ಮಾರ್ಗವಾಗಿ ಹೊರಟಾಗ ೃಷ್ಣರಾಯರು ಸುಬ್ಬಕ್ಕನವರಿಗೆ ಹೇಳಿದರು, “ನೋಡು, ಊರು ಬಿಟ್ಟು ಬಹಳ ಸಗಳಾದವು. ಅಲ್ಲಿ ಏನೇನು ಆಗಿವೆಯೋ ಏನೋ! ಬರಿ ಶೀನಪ್ಪನವರ ತ್ರಗಳ ಮೇಲಿಂದ ನಂಬಿಕೊಂಡು ನಾವು ಎಷ್ಟು ಹೀಗೆ ಊರು ಊರು ಪಿರಿ ರಿ ತಿರುಗಬೇಕು ? ಇದು ನಮಗೆ ಶೋಭಿಸುವದಿಲ್ಲ. ಕಳಸಾಪೂರಿಗೆ ಹೋಗೋಣ. ಮುಂದೆ ಅನುಕೂಲ ಮಾಡಿಕೊಂಡು ರಾಮೇಶ್ವರಕ್ಕೆ ಹೋಗೋಣ.” ಸುಬ್ಬಕ್ಕನವರಿಗೂ ಕಳಸಾಪೂರಿಗೆ ಹೋಗಬೇಕೆಂದು ಏನೋ ಅನಿಸುತ್ತಿತ್ತು. ಆದರೆ ತಮ್ಮ ಅಪಮಾನದ ದೃಶ್ಯ ಅವರಿಗೆ ನೆನಪಾಗಿ, ಕಿಡಿ ಕಿಡಿಯಾಗುತ್ತಿದ್ದರು. ಊರು ಬಿಟ್ಟು ಮೂರು ತಿಂಗಳಾಗಿದ್ದರೂ, ಅವರ ಈ ಕೋಪಕ್ಕೆ ಮುಕ್ತಿಯಾಗಿರಲಿಲ್ಲ. ರೈಲಿನಲ್ಲಿಯೇ ಸುಬ್ಬಕ್ಕನವರು ಕೃಷ್ಣರಾಯ ರಿಗೆ ಹೇಳಿದರು, “ನಾನೇನು ಅಲ್ಲಿ ಬರಲಿಕ್ಕೆ ಒಲ್ಲೆನ್ನುವುದಿಲ್ಲ. ಆದರೆ ಆ ಸೀತೆ ತನ್ನ ತಪ್ಪನ್ನು ಒಪ್ಪಿಕೊಳ್ಳಬೇಕು. ನನ್ನ ಕ್ಷಮೆ ಕೇಳಿಕೊಳ್ಳಬೇಕು, ಇನ್ನೊಮ್ಮೆ ೀಗೆ ಮಾಡುವುದಿಲ್ಲ ಎಂದು ಅನ್ನಬೇಕು. ಅವಳು ಹೀಗೆ ಮಾಡಿದರೆ ಮಾತ್ರ ನಾನು ಅಲ್ಲಿಗೆ ಬರುತ್ತೇನೆ........”

ಕೃಷ್ಣರಾಯರು ಸಮಾಧಾನದಿಂದ ಸುಬ್ಬಕ್ಕನವರ ಮಾತುಗಳನ್ನು ಕೇಳಿ ರು. “ಅಲ್ಲ, ಅವಳು ಕ್ಷಮೆ ಕೇಳುವಳೋ ಬಿಡುವಳೋ ನನಗೆ ಹೇಗೆ ತಿಳಿಯ ಬೇಕು?”

“ಅದಕ್ಕೇ ಹೀಗೆ ಮಾಡಿರಿ. ನೀವು ಕಳಸಾಪೂರಿಗೆ ಹೋಗಿರಿ ಮುಂದೆ. ನಾನು ವಿಜಾಪೂರದಲ್ಲಿಯೆ ಇಳಿದು ತಮ್ಮನ ಹತ್ತಿರ ಒಂದೆರಡು ದಿನ ಇರು ್ತೇನೆ. ನೀವು ಕಳಸಾಪೂರದಿಂದ ಸುದ್ದಿಯನ್ನು ತೆಗೆದುಕೊಂಡು ಬರ್ರಿ.

ಆಮೇಲೆ........?? ನಾನು ನೋಡುತ್ತೇನೆ!........ ಹೂಂ! ನಾನು ಹೇಳುತ್ತೇನೆ!"

ಇಷ್ಟಾದರೂ ದಯೆದೋರಿ ಸುಬ್ಬಕ್ಕನವರು ಮಾತನಾಡಿದ್ದು, ಕೃಷ್ಣರಾಯರಿಗೆ ಸಮಾಧಾನ ಕೊಟ್ಟಿತು. ಆನಂದದಿಂದ ಕೃಷ್ಣರಾಯರು ಹೇಳಿದರು, "ಸುಗ್ಗಿಯ ದಿನ ಇವೆ!........ಕಾಳುಗಳ ರಾಶಿಯ ಬಗ್ಗೆ ಕೇಳಿದಂತೆಯೂ ಆಗುವುದು. ಈ ಕೆಲಸವೂ ಆಗುವುದು........ನೋಡು, ನನಗೆ ಅನಿಸುತ್ತದೆ ಎಲ್ಲ ಒಳ್ಳೆಯದು ಆಗುವುದು ಎಂದು. ಕಾಶೀ ಯಾತ್ರೆಯ ಪುಣ್ಯ ಸಿಕ್ಕೇ ಸಿಗುವುದು!........ಈಗಾಗಲೆ ಸೀತಕ್ಕ ಕೆಡುಕು ಅನಿಸಿಕೊಂಡಿರಬೇಕು. ಅವಳಿಗೆ ಈ ಮನೆತನದ ಭಾರ ಹೊತ್ತು ಪಶ್ಚಾತ್ತಾಪವೂ ಆಗಿರಬೇಕು........ನೋಡು ಸುಗ್ಗಿಯ ದಿನಗಳಲ್ಲಿ ಸಂತೋಷದ ಸುದ್ದಿಯನ್ನೇ ತರುವೆ........"

"ನೀವು ಇನ್ನೂ ಕಳಸಾಪೂರ ಮುಟ್ಟದೆಯೇ, ಈಗಾಗಲೆ ಎಲ್ಲ ಭವಿಷ್ಯ ಹೇಳಿಬಿಟ್ಟಿರಿ........ಆಯಿತು! ನಾನು ಹೇಳುತ್ತೇನೆ. ಬಾಳು ಇಷ್ಟು ಸರಳವಿರುತ್ತದೆಯೆ?.......... ನೀವು ಸರಳ ಸ್ವಭಾವದವರು. ನಿಮ್ಮ ಕಣ್ಣಿಗೆ ಎಲ್ಲ ಜಗತ್ತು ಸರಳವಾಗಿಯೆ ಕಾಣುವುದು. ಸೀತಕ್ಕಳ ಡೊಂಕು ಸ್ವಭಾವ ನನಗೆ ಗೊತ್ತಿದೆ. ಹೆಂಗಸರದು ಹೆಂಗಸರಿಗೇ ಗೊತ್ತು. ನಿಮಗೇನು ತಿಳಿಯುವುದು? ನಾನು ಹೇಳುತ್ತೇನೆ...."

ಮಾತಿನ ಓಘ ಅಡ್ಡದಾರಿ ಹಿಡಿಯಬಾರದೆಂದು, ಸುಬ್ಬಕ್ಕನವರ ಎಲ್ಲ ಮಾತುಗಳಿಗೆ, ಕೃಷ್ಣರಾಯರು ಹೂಂಗುಟ್ಟುತ್ತಲೆ ಇದ್ದರು. ದೊಡ್ಡ ಆಸ್ತಿಯ ಅಧಿಕಾರವುಳ್ಳ ಜಾಗಿರದಾರ ಕೃಷ್ಣರಾಯರಿಗೆ ಹೆಂಡತಿಯ ಮೇಲೆ ಏನೂ ಅಧಿಕಾರವಿಲ್ಲ. ಯಾವಾಗಲೂ ಅವಳ ಬಲೆಯಲ್ಲಿಯೇ ಇದ್ದರು. ಸುಬ್ಬಕ್ಕನವರ ಒಂದು ಮಾತನ್ನು ಅವರು ಮೀರುವುದು ಸಾಧ್ಯವಿರಲಿಲ್ಲ.

ಧಡಕ್! ಧಡಕ್!! ರೈಲು ಜೋರಾಗಿ ಓಡುತ್ತಿದ್ದಿತು. ಕೃಷ್ಣರಾಯರ ಮನಸ್ಸೂ ತ್ವರಿತವಾಗಿ ಕಳಸಾಪೂರದ ಕಡೆಗೆ ಸಾಗಿತು. ಕಿಟಕಿಯನ್ನು ತೆರೆದು ಹೊರಗಡೆ ನೋಡಿದರು. ನಿಬಿಡವಾದ ಕತ್ತಲೆಯಿತ್ತು! ಆ ಕತ್ತಲೆಯಲ್ಲಿಯೂ ಎಂಜಿನ್ನು ತನ್ನ ದೀಪದ ಬೆಳಕಿನಿಂದ ಸುಲಲಿತವಾಗಿ ವೇಗವಾಗಿ ಸಾಗಿತ್ತು! ಕೃಷ್ಣರಾಯರಿಗೆ ಅದೇನೋ ಆನಂದವೆನಿಸಿತು. ಕಿಟಕಿಯಲ್ಲಿಯ ಮುಖ ತೆರೆದು ತಮ್ಮ ಹೆಂಡತಿ ಸುಬ್ಬಕ್ಕನವರ ಕಡೆಗೆ ಮುಗುಳುನಗೆ

ಯಲ್ಲಿ ನುಡಿದರು.

ತಮ್ಮ ಮನೆತನದಲ್ಲಿಯ ಅಂಧಕಾರವನ್ನು ದೂರ ಮಾಡಬಹುದೆಂದು ಅವರಿಗೆ ಅನಿಸಿತು! ಧಡಕ್! ಧಡಕ್! ಎಂದು ರೈಲು ಸಪ್ಪಳ ಮಾಡುವಾಗ ಅದೆಲ್ಲ ತಮ್ಮ ಮನೆತನದ ಕತೆಯನ್ನೇ ಹೇಳುವಂತೆ ಅವರಿಗೆ ಭಾಸವಾಯಿತು!

ಸುಬ್ಬಕ್ಕನವರನ್ನು ವಿಜಾಪೂರದಲ್ಲಿ ಬಿಟ್ಟು ಹೋಗುವಾಗ, ಸುಬ್ಬಕ್ಕನವರು ಕೃಷ್ಣರಾಯರಿಗೆ ಹೇಳಿದರು, "ನೋಡಿರಿ, ನೀವು ಬೇಗನೇ ಬರಬೇಕು. ಬಹಳ ದಿನ ಅಲ್ಲಿ ನಿಲ್ಲಬೇಡಿರಿ........ ನಾನು ಹೇಳುತ್ತೇನೆ! ಎರಡು ದಿನಗಳಲ್ಲಿಯೇ ಬಂದುಬಿಡಿರಿ!"

ಕಳಸಾಪೂರದಲ್ಲಿ ಗೋವಿಂದರಾಯರು ಕೃಷ್ಣರಾಯರಂತೆ ಮಾತನಾಡಿದರು. ಆದರೆ ಸೀತಕ್ಕ ಒಡಂಬಡಲಿಲ್ಲ. "ಅವರ ಪಾದ ಬಿದ್ದು ಕ್ಷಮೆ ಕೇಳಿಕೊಳ್ಳಲು ನಾನೇನು ತಪ್ಪು ಮಾಡಿದ್ದೇನೆ" ಎಂದು ಅವಳು ನುಡಿದಳು ಅಸಮಾಧಾನದಿಂದ. "ಬೇಕಾದರೆ ಅವರು ಬರಲಿ, ಮೊದಲಿನಂತೆಯೆ ಇರಲಿ. ಆದರೆ ನಾನು ಮಾತ್ರ ನನ್ನದು ತಪ್ಪಾಗಿದೆ ಎಂದು ಹೇಳಲಾರೆ" ಎಂದು ತನ್ನ ಅಭಿಪ್ರಾಯ ವ್ಯಕ್ತ ಮಾಡಿದಳು. ಇಡೀ ದಿನವೂ ಹಾಗೂ ಹೀಗೂ ಮಾತುಗಳು ಸಾಗಿದುವು. ಆ 'ವಾಟಾಘಾಟ' ವನ್ನೆಲ್ಲ ಕೇಳಿ, ಸೀತಕ್ಕ ತನ್ನ ಸ್ಪಷ್ಟ ಅಭಿಪ್ರಾಯ ಗೋವಿಂದರಾಯರ ಮುಖಾಂತರ ಹೇಳಿಸಿದಳು, "ನನ್ನ ಮೇಲೆ ಅತ್ತೆಯವರಿಗೆ ಸಂಶಯವಿದ್ದರೆ, ಅವರು ನಮ್ಮನ್ನು ಹೊರಗೆ ಹಾಕಲಿ! ನಮ್ಮ ಪಾಲು ನಮಗೆ ಕೊಡಲಿ. ನಾವು ಎಲ್ಲಿಯಾದರೂ ಮನೆ ಕಟ್ಟಿಸಿಕೊಂಡು ಸುಖದಿಂದ ಇರುತ್ತೇವೆ."

"ಹೊರಗೆ ಹಾಕಲಿ! ಪಾಲು ಮಾಡಲಿ!!" ಈ ಮಾತುಗಳು ಕೃಷ್ಣರಾಯರ ಮನಸ್ಸನ್ನು ಬಹಳ ನೋಯಿಸಿದವು. ಹೃದಯದಲ್ಲಿ ನೆಟ್ಟ ಆ ಮಾತುಗಳ ಬಾಣಗಳು ಅವರಿಗೆ ದುಃಖವನ್ನುಂಟು ಮಾಡಿದವು. ಆ ವೇಳೆಯಲ್ಲಿ ಶೀನಪ್ಪನವರು ಅವರ ಸಹಾಯಕ್ಕೆ ಬರದಿದ್ದರೆ ಕೃಷ್ಣರಾಯರಿಗೆ ಏನಾಗುತ್ತಿತ್ತೋ ಏನೋ!

ಕೃಷ್ಣರಾಯರಿಗೆ ಶೀನಪ್ಪನವರೇ ಸಮಾಧಾನ ಮಾಡಿದರು, "ರಾಯರೇ, ನಿಮ್ಮ ಮನೆತನವನ್ನು, ನಿಮ್ಮನ್ನು ನಂಬಿಕೊಂಡು ನಾನು ಅನೇಕ ದಿನದಿಂದ ಇದ್ದೇನೆ. ನೀವೇನು ಕಾಳಜಿ ಮಾಡಬೇಡಿರಿ—ನಾನು ಜೀವಂತ ಇರುವವರೆಗೆ

ಎಲ್ಲಾನೂ ಹೊಂದಿಕೆ ಆಗುವಂತೆ ನಾನು ಮಾಡುವೆ..........." ಶೀನಪ್ಪನವರು ಸ್ವಲ್ಪ ಸಮಯ ಯೋಚಿಸಿ, ಕೃಷ್ಣರಾಯರಿಗೆ ಹೇಳಿದರು "ರಾಯರೇ, ನನಗೊಂದು ಉಪಾಯ ಹೊಳೆದಿದೆ. ನೋಡಿರಿ, ಪಾಪ! ನಿಮ್ಮ ಸುಬ್ಬಕ್ಕನವರಿಗೆ ಇಷ್ಟೆಲ್ಲ ತ್ರಾಸವಾದದ್ದು ಏನು ಕಾರಣ? ಮೂರು ತಿಂಗಳ ಹೀಗೆ ಮನೆಬಿಟ್ಟು ದಿಕ್ಕಿಲ್ಲದವರಂತೆ ಹೋದದ್ದು ಏನು ಕಾರಣ? ನೀವು 'ಸೀತಕ್ಕನವರೂ' ಎಂದು ಹೇಳಬಹುದು. ಅಲ್ಲಾ, ಸೀತಕ್ಕನವರಾದರೂ ಹೀಗೆ ಏಕೆ ಮಾಡಿದರು?.... ಮುಖ್ಯ ನಾವು ಬೇರು ತಿಳಕೊಳ್ಳಬೇಕು. ನೋಡಿರಿ ರಾಯರೇ, ಇಷ್ಟೆಲ್ಲ ಆದದ್ದು ಏಕೆ?.... ನನಗೆ ಅನಿಸುವುದು ನಮ್ಮ ಲಕ್ಕಮ್ಮನೇ ಕಾರಣ....ಅದಕ್ಕೇ ಹೀಗೆ ಮಾಡಿಬಿಡೋಣ....।" ಶೀನಪ್ಪನವರು ರಾಯರ ಸಮಿಸಮೀಪ ಸರಿದರು; ಮತ್ತು ರಾಯರ ಕಿವಿಯಲ್ಲಿ ಮಾತನಾಡಿದರು "ನಮ್ಮ ಸುಂದರಾಳನ್ನು ಸೀತಕ್ಕ ಅವರ ತಮ್ಮನಿಗೆ ಕೊಡಿಸಿಬಿಡೋಣ!"

ರಾಯರು ಹಿಗ್ಗಿದರು—ಮೊದಲು! ತರುವಾಯ ಅವರಿಗೆ ಏನೋ ಸಂಶಯ ಬಂದಿತು; ಆದ್ದರಿಂದ ಶೀನಪ್ಪನವರಿಗೆ ಕೇಳಿದರು, "ಅಲ್ಲ, ಅವಳು ಹೇಗೆ ಒಪ್ಪುವಳು?.... ತನ್ನ ಮಗಳನ್ನು ಕೊಡುವವಳು ಅವಳು! ಸುಂದರಾಳ ಲಗ್ನಕ್ಕೆ ಹೇಗೆ ಒಪ್ಪುವಳು!"

"ರಾಯರೇ ಒಪ್ಪದೇ ಏನು?.... ತನ್ನ ಮಗಳನ್ನು ಇನ್ನೊಬ್ಬ ತಮ್ಮನಿಗೆ ಕೊಡಬಹುದು. ಆದರೆ ಸುಂದರಾಳ ಲಗ್ನ ಹಾಗೆ ಮಾಡುವಲ್ಲಿ ಮಹತ್ವವಿದೆ! ಸೀತಕ್ಕನವರು ಒಪ್ಪದೇ ಏನು?...."

"ಶೀನಪ್ಪ, ನಿನ್ನ ಕಾರಸ್ಥಾನ ನಮಗೆ ಬೇಗನೇ ತಿಳಿಯುವುದೇ ಇಲ್ಲ ನೋಡು. ಸಂಕಟ ಬಂದಾಗ ವೆಂಕಟರಮಣ ಅನ್ನುತ್ತಾರೆ. ನೀನು ಮಾತ್ರ ಯಾವಾಗಲೂ ನಮಗೆ ವೆಂಕಟರಮಣನೇ ನೋಡು!"

"ರಾಯರೇ, ಮೊನ್ನೆ ಮೊನ್ನೆ ತಿರುಪತಿಗೆ ಹೋಗಿಬಂದಿರುವಿರಿ. ಆ ವೆಂಕಟರಮಣನ ಮಹತ್ವ ನಿಮಗೇ ಗೊತ್ತು ನೋಡಿರಿ. ನಮಗೇನು ಮಣ್ಣು ಅದರಲ್ಲಿ ತಿಳಿಯುವುದು!"

"ಇರಲಿ, ಶೀನಪ್ಪ!.... ಆ ಎಲೆಯಡಿಕೆಯ ತಾಟು ತಾ...." ಕೃಷ್ಣರಾಯರು ಮಾತು ಕೇಳಿಸುವದೊಂದೇ ತಡ. ಶೀನಪ್ಪನವರು ಎಲೆಯಡಿಕೆಯನ್ನು ಶಿಸ್ತುಮಾಡಿ ಕುಟ್ಟತೊಡಗಿದರು. "ಶೀನಪ್ಪ, ಆ ಯಾತ್ರೆಯ ಮಾತು

ಈಗ ಪುನಃ ಎತ್ತಬೇಡ. .......ಆ ಸುಂದರಾಳ ಲಗ್ನದ ಮಹತ್ವವೇನು ಹೇಳಿಯಾದರೂ ಹೇಳು."

"ರಾಯರೇ, ಆಸ್ತಿ, ಭಂಗಾರ ಯಾರನ್ನು ಮರುಳು ಮಾಡುವುದಿಲ್ಲ?.... ಈಗ ನಮ್ಮ ಸಂಜೀವರಾಯರದೇ ಆಗಲಿಲ್ಲವೆ? ಅದರಂತೆಯೇ ಸೀತಕ್ಕನ ವರದು!........?

"ಆದರೆ........??"

"ಹೂಂ! ಹೂಂ! ಅದೇ!" ಶೀನಪ್ಪನವರು ಚಪ್ಪಾಳೆ ತಟ್ಟಿ ಹೇಳಿದರು "ಸೀತಕ್ಕನವರಿಗೆ ಆಸ್ತಿಯ ತಮ್ಮ ಪಾಲೂ ಅಲ್ಲದೇ, ಆನಂದರಾಯರ ಪಾಲೂ ಸಿಗುವುದು."

"ಒಳ್ಳೇ ಉಪಾಯ!" ಎಂದು ಕೃಷ್ಣರಾಯರು ಮನದಲ್ಲಿಯೆ ಶೀನಪ್ಪನವರ ಚಾಣತನಕ್ಕೆ ಬೆನ್ನುತಟ್ಟಿ ನಕ್ಕರು, "ಶೀನಪ್ಪ, ನಿನ್ನ ಬುದ್ಧಿ ಚುರುಕು! ಅಕಬರನ ಕಾಲದಲ್ಲಿ ಬದುಕಿದ್ದರೆ, ನೀನು ಎಲ್ಲಿಯೋ ದರ್ಬಾರದಲ್ಲಿ ಮಂತ್ರಿಯಾಗುವವ. ಆ್ಞ?"

"ರಾಯರೇ, ಆ ಯೋಗ್ಯತೆ ನನಗೆಲ್ಲಿ? ಏನೋ ನಿಮ್ಮ ಕೃಪೆಯಿಂದ ಎಲ್ಲ ಸಾಗುತ್ತ ಬಂದಿದೆ!—.... ನೋಡಿರಿ, ರಾಯರೇ, ಈಗಂತೂ ನೀವು ರಾಮೇಶ್ವರ ಯಾತ್ರೆಗೆ ಹೋಗುವ ಕಾರ್ಯಕ್ರಮ ಮುಗಿಸಿರಿ. ನೀವು ತಿರುಗಿ ಬರುವಷ್ಟರಲ್ಲಿಯೇ, ಅಷ್ಟೆ ಹದಿನೈದು ದಿನಗಳಲ್ಲಿಯೇ ಕಳಸಾಪೂರದ ನೋಟವನ್ನು ಬದಲು ಮಾಡಿಬಿಡುತ್ತೇನೆ. ನಾರಾಯಣರಾಯರೂ ಬರುವರು! ಮಗಳ ಲಗ್ನದ ಸುದ್ದಿ ಕೇಳಿ ಆನಂದರಾಯರೂ ಬರುವರು! ಎಲ್ಲ ಮೊದಲಿನಂತೆಯೇ ಆಗುವುದು. ಸುಬ್ಬಕ್ಕನವರಿಗೆ ಹೇಳಿರಿ, ಏನೂ ಚಿಂತೆ ಮಾಡಬಾರದೆಂದು!"

ಶೀನಪ್ಪನವರ ಹೇಳಿಕೆಯಂತೆ ಅತ್ತ ಕೃಷ್ಣರಾಯರು ಹೊರಟುಹೋದರು. ಇತ್ತ ಶೀನಪ್ಪನವರು ತಮ್ಮ ನಾಟಕವನ್ನು ಆರಂಭಿಸಿದರು!

ಸುಬ್ಬಕ್ಕನವರು ಪಾಲು ಕೇಳಿದ ಸೀತಕ್ಕನನ್ನು ಶಪಿಸುತ್ತಾ ರಾಮೇಶ್ವರ ಯಾತ್ರೆ ಕೈಕೊಂಡರು. ಶೀನಪ್ಪನವರ ಕಡೆಯಿಂದ ಕೆಲಸವಾಗದಿದ್ದರೆ, ತಾನೇ ಸೂತ್ರಧಾರಿಯಾಗಿ ಸೀತಕ್ಕಳ ಗರ್ವಭಂಗ ಮಾಡುವುದಾಗಿ ಪಣ ತೊಟ್ಟರು. ಉಣವಂತೆ ಅವರ ಮನಸ್ಸಾಗಿತ್ತು. ಹಿಡಿದ ಹಿಡಿತವನ್ನು ಅವರು ಬಿಡಲಿಲ್ಲ.

ಆದರೆ ಕೃಷ್ಣರಾಯರದು ಅದೆಂಥ ದುರ್ದೈವವೋ! ರಾಮೇಶ್ವರದಲ್ಲಿ ದೇವರ ದರ್ಶನವನ್ನು ಪಡೆದುಕೊಂಡು ತಿರುಗಿ ಬರುತ್ತಿರುವಾದ, ದಾರಿಯಲ್ಲಿ ಉಶ್ಶ್ಯ ಎಂದು ಕುಳಿತರು. ಒಬ್ಬ ಭಿಕ್ಷುಕನಿಗೆ ಭಿಕ್ಷೆಯನ್ನು ಹಾಕಲು ಹೋದ ಕೈಯೂ ಹಾಗೆಯೇ ನಿಂತಿತು. ಕಣ್ಣು ಮುಚ್ಚಿಕೊಂಡು ಕುಳಿತವರು, ಕಣ್ಣು ತೆರೆಯಲೇ ಇಲ್ಲ. ಹೃದಯವಿಕಾರದಿಂದ ಅವರ ಪ್ರಾಣಪಕ್ಷಿ ಪಂಜರದಿಂದ ಹಾರಿಹೋಗಿತ್ತು!

ಸುಬ್ಬಕ್ಕನವರ ದುಃಖಕ್ಕೆ ಎಲ್ಲೆಯಿಲ್ಲದಂತಾಯಿತು. ಎದೆ ಬಡಿಬಡಿದು ಕೊಂಡು ಗೋಳಿಟ್ಟರು! ಕಂಬನಿ ಸುರಿಸಿದರು!

ಶವಸಂಸ್ಕಾರ ರಾಮೇಶ್ವರದಲ್ಲಿಯೇ ಆಯಿತು. ಕಳಸಾಪೂರದಿಂದ ಶೀನಪ್ಪ, ಗೋವಿಂದರಾಯ, ಸೀತಕ್ಕ ಎಲ್ಲರೂ ಹೋಗಿ ಸುಬ್ಬಕ್ಕನವರನ್ನು ಸಮಾಧಾನಬಡಿಸಿ ಕರೆದುಕೊಂಡು ಬಂದರು. "ರಾಮು! ರಾಮು! ಎಂದು ಅವರು ದೇವರ ಕಡೆಗೆ ಹೋದರು! ಅವರ ಪುಣ್ಯ ಹೆಚ್ಚಿನದು! ಪುಣ್ಯಕ್ಷೇತ್ರ ದಲ್ಲಿಯೇ ಜೀವ ಬಿಟ್ಟರು! ಅಯ್ಯೋ ಹೀಗೆ ನಾನು ಇರುವುದು ನನ್ನ ನಸೀಬ ಎಂತಹದು!" ಎಂದು ದುಃಖಿಸಿ ರೋದಿಸಿದರು. ಸುಬ್ಬಕ್ಕನವರ ಯಾತ್ರೆಯ ಮುಕ್ತಾಯವು ಹೀಗೆ ಆದುದನ್ನು ಕೇಳಿ, ಕಳಸಾಪೂರದವರೆಲ್ಲರೂ ಕಂಬನಿ ದುಂಬಿ ಅತ್ತರು!!

* * * *

ಜಗತ್ತಿನಲ್ಲಿ ಯಾವುದೂ ಸ್ಥಿರವಿಲ್ಲ. ದುಃಖದ ಸಂಗತಿ ಎಷ್ಟು ದಿನ ಇರಬಹುದು? ಕಾಲವೆಂಬ ಪಕ್ಷಿ ಮುಂದೆ ಮುಂದೆ ಹಾರುತ್ತ, ಹಳೆಯದೆಲ್ಲ ವನ್ನು ಮುಸಳಿಸಿ ಬಿಡುತ್ತದೆ. ಕಳಸಾಪೂರದಲ್ಲಿ ಜಾಗಿರದಾರರ ವಾಡೆಯಲ್ಲಿರುವ ಎಲ್ಲರೂ ವಜ್ರಾಘಾತದ ಆ ದುಃಖದ ಸುದ್ದಿಯನ್ನು ಮರೆಯಹತ್ತಿದರು. ಪ್ರತಿ ನಿತ್ಯದಂತೆ, ಮತ್ತೆ ಎಲ್ಲ ಕಾರ್ಯಕ್ರಮಗಳು ಸಾಗಿದುವು. ಯಾವ ಬಿರುಗಾಳಿ ಬೀಸಿದರೂ, ಅದನ್ನು ಎದುರಿಸಲು ಸಾಮರ್ಥ್ಯವಿದ್ದ ಶೀನಪ್ಪನವರು ವಾಡೆಯ ಲ್ಲಿಯ ಬಂಧುಬಳಗದವರಿಗೆ ಸಮಾಧಾನವನ್ನು ಮಾಡಿ, ಚೇತನೆಯನ್ನು ನೀಡಿ ದರು. ಯಾರಿಗೆ ಏನು ಬೇಕಾದರೂ ಈಗ ಎಲ್ಲರೂ ಶೀನಪ್ಪನವರನ್ನು

ಕೇಳುತ್ತಿದ್ದರು. ರಾಯರು ಜೀವಂತವಿರುವಾಗಲೇ ಆ ಅಧಿಕಾರ ಅವರಿಗಿತ್ತು! ಈಗಂತೂ ಶೀನಪ್ಪನವರದೇ ಸರ್ವಾಧಿಕಾರ!

ಸುಬ್ಬಕ್ಕನವರನ್ನು ಮಾತನಾಡಿಸಲು ಬಂದ ಸಂಜೀವರಾಯರು, ತಿರುಗಿ ಊರಿಗೆ ಹೋಗುವಾಗ ತಮ್ಮ ಮಗಳನ್ನು ಕರೆದುಕೊಂಡು ಹೊರಟರು. ಮದುವೆಯಾದ ಮೇಲೆ ಲಕ್ಷ್ಮಿ ತವರೂರಿಗೆ ಹೋಗಿರಲೇ ಇಲ್ಲ. ಸಂಜೀವರಾಯರೇ ಕಳಸಾಪೂರಿಗೆ ಮೇಲಿಂದ ಮೇಲೆ ಬಂದು ಭೆಟ್ಟಿಯಾಗಿ ಹೋಗುತ್ತಿದ್ದರು. ಹೀಗಾಗಿ ಅವಳಿಗೆ ತನ್ನ ತಂದೆಯ ಭೆಟ್ಟಿಗೆಂದು ಊರಿಗೆ ಹೋಗುವ ಕಾರಣವು ಬರುತ್ತಿರಲಿಲ್ಲ. ಈ ಸಲ ಸಂಜೀವರಾಯರು ಲಕ್ಷ್ಮಿಗೆ ಆಮಂತ್ರಣ ಕೊಟ್ಟ ಕೂಡಲೆ, ಅದನ್ನು ಅವಳು ಬೇಗನೆ ಸ್ವೀಕರಿಸಿದಳು.

ಮುರನಾಳದಲ್ಲಿ ಲಕ್ಷ್ಮಿಗೆ ಬಹಳ ದಿವಸ ಇರುವ ವಿಚಾರವಿರಲಿಲ್ಲ. ಕಳಸಾಪೂರದಲ್ಲಿ ನಿಲ್ಲುವ ಮನಸ್ಸೂ ಇರಲಿಲ್ಲ. ಬೆಳಗಾವಿಯಲ್ಲಿ ನಡೆದುಹೋದ ಶೀನಪ್ಪನವರ ಘಟನೆ, ಹೂವಿನಲ್ಲಿ ಒಳಹೊಕ್ಕ ಹುಳದಂತೆ ಆಗಿತ್ತು. ಎಲ್ಲರಿಗೂ ಗೊತ್ತಾಗುವಂತೆ ಆ ರಾತ್ರಿಯಾಗಿದ್ದರೆ, ಮುಂದೆ ಏನು ಆಗುತ್ತಿತ್ತೊ! ಶೀನಪ್ಪನವರೂ ಅದನ್ನು ಬಹಿರಂಗಪಡಿಸಲಿಲ್ಲ. ಲಕ್ಷ್ಮಿಯೂ ಹಾಗೆ ಮಾಡಲಿಲ್ಲ—ಅವಳಿಗೆ ತನ್ನ ಮರ್ಯಾದೆಯ ಪ್ರಶ್ನೆಯಿತ್ತು! ಹಾರಸುದ್ದಿಗಳನ್ನು ನಂಬಿ ಏನೇನೊ ಮಾಡುವ ಕಳಸಾಪೂರದ ಜನ, ಲಕ್ಷ್ಮಿಯ ಬಗ್ಗೆ ಏನು ಆಡಿಕೊಳ್ಳುತ್ತಿದ್ದರೋ ಏನೋ!........ ಹೆದರಿಕೆಯಿಂದ ಅವಳು ಸುಮ್ಮನಾದಳು. ಆದರೆ ಸತ್ಯಸಂಗತಿಯನ್ನು ಮರೆಯಲು ಹೇಗೆ ಸಾಧ್ಯ? ಶೀನಪ್ಪನವರ ಎದುರು ನಿಲ್ಲುವುದೇ ಲಕ್ಷ್ಮಿಗೆ ಸಾಧ್ಯವಿರಲಿಲ್ಲ. ಅವರನ್ನು ನೋಡಿದ ಕೂಡಲೇ ಅವಳ ಮುಖಮಲ್ಲಿಗೆ ಬಾಡಿಕೊಳ್ಳುತ್ತಿತ್ತು. ಶೀನಪ್ಪನವರ ಅಧಿಕಾರವೇ ಕಳಸಾಪೂರದಲ್ಲಿ ನಡೆದಮೇಲೆ, ತಾನು ಬಾಳುವುದಾದರೂ ಹೇಗೆ? ಹೆಜ್ಜೆಹೆಜ್ಜೆಗೂ ಶೀನಪ್ಪನವರನ್ನು ಹೇಗೆ ಮಾತನಾಡಿಸುವುದು? ಶೀನಪ್ಪನವರ ಸ್ವಭಾವ, ಎಲ್ಲವನ್ನು ತಮ್ಮ ಕೈಯಲ್ಲಿ ತೆಗೆದುಕೊಳ್ಳುವ ಅವರ ಚಾಣಕ್ಯ ರೀತಿ ಇವುಗಳನ್ನೆಲ್ಲ ನೆನೆದು ಲಕ್ಷ್ಮಿಯ ಹೃದಯ ಕುದಿಯುತ್ತಿತ್ತು. ಅವಳ ಅಂತರಾಳವೆಲ್ಲ ಕುದಿಯುತ್ತಿದ್ದರೂ, ಮಾತು ಮಾತ್ರ ಹೊರಬೀಳುತ್ತಿರಲಿಲ್ಲ. ಯಾರದಾದರೂ ಎದುರು ಏನಾದರೂ ಮಾತನಾಡಬೇಕಾಗಿದ್ದರೆ, ಅವಳು ಅನೇಕ ಸಲ ವಿಚಾರಿಸುತ್ತಿದ್ದಳು. ಮಾತು ಕೃತಿಯಲ್ಲಿ ಬರಬೇಕಾದರೂ, ಅವಳದು ಹಾಗೆಯೇ ಆಗುತ್ತಿತ್ತು. ಶೀನ

ಪ್ಪನವರ ಕಡೆಯಿಂದ ಅಧಿಕಾರವನ್ನು ಕಸಿದುಕೊಂಡು ಬಿಡಬೇಕು. ನಾರಾಯಣ ರಾಯರ ಪಾಲನ್ನು, ಸುಬ್ಬಕ್ಕನವರ ಪಾಲನ್ನು ತಾನು ಬೇಡಿದರೆ ಎಲ್ಲವೂ ಸುರ ಳಿತವಾಗಬಹುದು. ಸುಬ್ಬಕ್ಕನವರನ್ನು ಕರೆದುಕೊಂಡು ತಾವು ಬೇರೆಯಾಗಿಯೆ ಬಾಳಲು ಬರಬಹುದು. ತನ್ನ ಸಂಸಾರದ ನೌಕೆಯನ್ನು ಸುರಳಿತವಾಗಿ ಸಾಗಿ ಸಬಹುದು. ಹೀಗೆ ಅವಳಲ್ಲಿ ತನ್ನ ಬಾಳಿನ ಬಗ್ಗೆ ಅನೇಕ ವಿಚಾರಗಳು ಬಂದವು. ಕಳಸಾಪೂರದಲ್ಲಿ ತಾನೇ ಈ ಮಾತು ತೆಗೆದರೆ, ಜನರು ಏನಾದರೂ ಅನ್ನಬಹುದು. ಆದ್ದರಿಂದ ಸಂಜೀವರಾಯರಿಗೆ ಹೇಳಿ, ಅವರ ಮುಖಾಂತರವೆ ಈ ಕೆಲಸ ಮಾಡಿಸಬೇಕೆಂದು ಲಕ್ಷ್ಮಿಗೆ ತೋಚಿತು. ತನ್ನ ತವರೂರನ್ನು ಮುಟ್ಟುವುದಕ್ಕಿಂತ ಮೊದಲು, ತನ್ನ ತಂದೆಯವರ ಎದುರು ಶೀನಪ್ಪನವರ ವಿರುದ್ಧ ಏನೇನು ಮಾತನಾಡಬೇಕು? ಹೇಗೆ ಮಾತನಾಡಬೇಕು? ಇವೆಲ್ಲವು ಗಳನ್ನು ಅವಳು ವಿಚಾರಿಸಿ, ಬಹಳೆ ಸಿದ್ಧತೆ ಮಾಡಿಕೊಂಡಳು. ನಾಟಕದಲ್ಲಿ ಹೊಸ ನಟಿಯು ತನ್ನ ಮಾತುಗಳನ್ನು ಮುಖಪಾಠ ಮಾಡುವಂತೆ ಅವಳ ಸ್ಥಿತಿಯಾಗಿತ್ತು.

ರಸ್ತೆಯ ಮೇಲೆ ಬಸ್ಸು ನಿಲ್ಲುವ ಸ್ಥಳದಿಂದ ಸಂಜೀವರಾಯರು ತಮ್ಮ ಮಗಳನ್ನು ಕರೆದುಕೊಂಡು ಹೊರಟಾಗ ಹಳ್ಳಿಯ ಜನ ಬೊಟ್ಟುಕಚ್ಚಿ ಲಕ್ಷ್ಮಿಯ ಕಡೆಗೆ ನೋಡಿದರು. ಅವಳ ವೇಷದಲ್ಲಿ ಅಪೂರ್ವ ಬದಲಾವಣೆಯಿತ್ತು. ಯೌವನದಲ್ಲಿರುವ ಅವಳ ಮುಖಮುದ್ರೆಯೂ ಚೆಲುವಾಗಿತ್ತು. ಲಕ್ಷ್ಮಿ ಎರಡು ವರ್ಷಗಳ ನಂತರ ಹಳ್ಳಿಗೆ ಬಂದ ಸುದ್ದಿ, ಒಂದು ನಿಮಿಷದಲ್ಲಿ ಎಲ್ಲರಿಗೂ ಗೊತ್ತಾಯಿತು. ಅವಳ ಹಳೆಯ ಜನರೆಲ್ಲರೂ ಅವಳನ್ನು ಭೆಟ್ಟಿಯಾಗಲಿಕ್ಕೆ, ಆನಂದದಿಂದ ಮಾತನಾಡಿಸಲಿಕ್ಕೆ ಬರುವವರೇ! ಅವಳಿಗೆ ಎಲ್ಲರೂ ಏನಾದರೂ ಗಂಡನ ಚೇಷ್ಟೆ ಮಾಡುವವರೇ! ಹೀಗಾಗಿ ಸಂಜೀವರಾಯರ ಜೊತೆಗೆ ಲಕ್ಷ್ಮಿಗೆ ಎರಡು ದಿನ ಮಾತನಾಡುವುದೇ ಆಗಲಿಲ್ಲ.

ಮಾರನೆಯ ದಿನ ಮಧ್ಯಾಹ್ನ, ಸಂಜೀವರಾಯರ ಎದುರು ಲಕ್ಷ್ಮಿ ಸಹಜ ವಾಗಿ ಮಾತು ತೆಗೆದಳು. “ಅಪ್ಪ, ಈ ಸಲ ಯುಗಾದಿಗೆ ನೀನು ಕಳಸಾಪೂ ರಿಗೇ ಬಾ. ಇಲ್ಲಿ ಒಬ್ಬನೇ ಇದ್ದು ಏನು ಮಾಡುವಿ?”

“ಲಕ್ಕಮ್ಮಾ ಬರಬಹುದು! ನೀನೇ ಇರುವಿಯೆಂದಮೇಲೆ ಬರದೇ ಏನು? ಇನ್ನೂ ದಿವಸ ಇವೆ. ನೋಡೋಣ!”

" ಹಾಗಲ್ಲ ಅಪ್ಪ ! ಬರಿ ಹಬ್ಬಕ್ಕೆ ಇಷ್ಟೇ ಅಲ್ಲ. ಅಲ್ಲಿಯೇ ಕೆಲವು ದಿನ ಇದ್ದುಬಿಡಲು ಬರಬೇಕು ! "

" ಲಕ್ಕಮ್ಮ, ಹಾಗೆಂದರೆ ಹೇಗೆ? ಒಂದು ದಿನ ಬಂದು ಹೋಳಿಗೆಯ ಊಟ ಮಾಡಿ ತಿರುಗಿ ಬರಬಹುದು. ಅಲ್ಲಿಯೇ ಇದ್ದುಬಿಡಲು ಹೇಗೆ ಬರುತ್ತದೆ ನೋಡು ಮಗು. ಅದು ನಿನ್ನೊಬ್ಬಳದೇ ಮನೆಯಲ್ಲ ! "

" ಅಂದರೆ ನನ್ನ ಮನೆ ಅಲ್ಲವೇನು ? "

" ನಿನ್ನದೇ ಮನೆ ! ಆದರೂ........ ? "

" ನನ್ನದೇ ಮನೆಯೆಂದಮೇಲೆ ಏಕೆ ಬರಬಾರದು ?.... "

" ಎಲ್ಲರೂ ಕೂಡಿ ಇರುವಿರಿ, ಲಕ್ಕಮ್ಮಾ. ಹಿರಿಯರು ಇದ್ದಾರೆ. ಮತ್ತೆ ಬೇರೆ ಜನ ಇದೆ........ ನಾನು ನೋಡು, ಬರಿ ನಿನ್ನ ಆಮಂತ್ರಣ ಸ್ವೀಕಾರ ಮಾಡಿ ಹೇಗೆ ಬರಬೇಕು ? ಇರಲಿ ಬಿಡು ಲಕ್ಕಮ್ಮಾ. ಅದನ್ನೆಲ್ಲ ತೆಗೆದು ಕೊಂಡು ಏನು ಮಾಡುವಿ ? ಬರುತ್ತೇನೆ ಒಂದು ದಿನ ! "

" ಅಪ್ಪ ಹಾಗಲ್ಲ........ಒಂದು ದಿನ ಅಲ್ಲ........ನಾನು ಈಗ ಹೋಗುವಾಗ, ಮತ್ತೆ ನೀನು ಬರಬೇಕು........ "

ಲಕ್ಷ್ಮಿಯ ಮಾತುಗಳು ತಡೆತಡೆದು ಬಂದವು. ಅವಳ ಮುಖ ಬೆವರೊಡೆಯಿತು. ತನ್ನ ಸೀರೆಯ ಸೆರಗಿನಿಂದ ಆ ಬೆವರನ್ನು ಒರೆಯಿಸಿಕೊಂಡಳು.

ಸಂಜೀವರಾಯರಿಗೆ ತಮ್ಮ ಮಗಳ ಮಾತುಗಳನ್ನು ಕೇಳಿ ಏನೋ ಸಂಶಯ ಬಂದಿತು. " ಲಕ್ಕಮ್ಮಾ, ಏಕೆ ?........ ಈ ಸಲ ಹೀಗೇಕೆ ಮಾತನಾಡುವೆ ?.... ನಿನಗೆ ಏನಾದರೂ ತ್ರಾಸವಾಗಿದೆಯೇನು ಹೇಳು. ನಾನು ನಿನಗೆ ಹೇಳಿದ್ದೆನಲ್ಲವೆ ? ಏನೇ ಆದರೂ ನೀನು ಶೀನಪ್ಪನವರನ್ನು ಕೇಳು. ನನ್ನಂತೆಯೇ ಅವರು ! ಪಾಪ ! ಅವರು ನಿನ್ನ ಸಲುವಾಗಿ ಎಷ್ಟು ಕಾಳಜಿ ತೆಗೆದುಕೊಳ್ಳುವರು. ಪ್ರತಿ ವಾರ ಅವರು ಪತ್ರ ಬರೆದು ನನಗೆ ನಿನ್ನ ಸಮಾಚಾರ ಸುದ್ದಿ ತಿಳಿಸುವರು. ನೀನು ಸುಖವಾಗಿರುವಿ ಎಂದು ಬರೆಯುವರು. ನಿನ್ನ ಮನಸ್ಸಿಗೆ ಸ್ವಲ್ಪವೂ ತೊಂದರೆಯಾದರೂ ಅವರಿಗೆ ಹೇಳು........ "

ಲಕ್ಷ್ಮಿ ತನ್ನ ಮನಸ್ಸನ್ನು ಗಟ್ಟಿಮಾಡಿಕೊಂಡಳು. " ಅಪ್ಪ ಅವರಿಗೇ ಹೇಳುವೆ........ಅದಕ್ಕೂ ಮೊದಲು ನಿನಗೂ ಹೇಳಬೇಕಾಗಿದೆ ! "

" ಏನು ಮಗು ? ಅದೇನು ಸುದ್ದಿ ಹೇಳಬೇಕಾದದ್ದು ? "

"ಅಪ್ಪ.......... ಈ ಸಲ ನಾನು ಆಸ್ತಿಯ ಪಾಲು ಬೇಡಬೇಕೆಂದಿದ್ದೇನೆ....... !"

ಸಂಜೀವರಾಯರು ಅರ್ಧ ಮಾತಿಗೆ ಲಕ್ಷ್ಮಿಯನ್ನು ತಡೆದರು.

"ಪಾಲು !!" ಸಂಜೀವರಾಯರ ಮನಸ್ಸು ಒಮ್ಮೆಲೆ ಪ್ರಕ್ಷುಬ್ಧವಾಯಿತು. "ಪಾಲು!! ಲಕ್ಕಮ್ಮ, ನಿನಗೆ ಈ ಬುದ್ಧಿ ಯಾರು ಕಲಿಸಿದರು? ಎಂದಿನಿಂದಲೋ ಒಟ್ಟುಗೂಡಿ ನಡೆದು ಬಂದ ದೊಡ್ಡ ಮನೆತನ ಅದು! ನೀನು ??— ನನ್ನ ಮಗಳು ಅದನ್ನು ಇಬ್ಭಾಗ ಮಾಡುವುದೆಂದರೆ ??" ಸಂಜೀವರಾಯರು ಚಟಚಟನೆ ಅಡಿಗಳನ್ನಿಡುತ್ತ ಅತ್ತಿಂದಿತ್ತ ಓಡಾಡಹತ್ತಿದರು.

ಕೋಪದಿಂದ ಸಂಜೀವರಾಯರು ಹಾಕುತ್ತಿರುವ ಹೆಜ್ಜೆಗಳನ್ನು ಲಕ್ಷ್ಮಿ ನಿರೀಕ್ಷಿಸಿದಳು. "ಅಪ್ಪ, ನಿನಗೆ ಸಿಟ್ಟು ಬರಬಹುದು. ಆದರೂ....... ?"

"ಲಕ್ಕಮ್ಮ, ನಿನಗೆ ಏನು ಕಡಿಮೆಯಾಗಿದೆ ಅಲ್ಲಿ? ಆನಂದರಾಯ, ಗೋವಿಂದರಾಯ ಮುತ್ತಿನಂಥ ಸ್ವಭಾವದವರಾಗಿದ್ದಾರೆ. ಮೇಲಾಗಿ ಮೇಲ್ವಿಚಾರಣೆ ಮಾಡಲು, ಸುಬ್ಬಕ್ಕನವರಿದ್ದಾರೆ. ಶೀನಪ್ಪನವರು ಇದ್ದಾರೆ. ನಿನಗೆ ಹೊಟ್ಟೆ, ಬಟ್ಟೆಗೆ ಅವರೇನು ಕಡಿಮೆ ಮಾಡಿದ್ದಾರೆ?.......

"ಅಪ್ಪ, ದೂರದ ಗುಡ್ಡ ಎಲ್ಲರಿಗೂ ಚೆಂದವಾಗಿಯೇ ಕಾಣುತ್ತದೆ!"

"ಅಂದರೆ?....... ನಿನ್ನ ಮೈದುನರು ನಿನಗೆ ವಿರುದ್ಧವಾಗಿದ್ದಾರೇನು? ಶೀನಪ್ಪನವರಿಗೆ ಹೇಳುವೆ......."

"ಅಪ್ಪ, ಪುನಃ ಪುನಃ ಶೀನಪ್ಪ ಎಂದು ಅನ್ನಬೇಡ. ಅವರ ಸಲುವಾಗಿಯೇ ನಾನು ಪಾಲು ಬೇಡುತ್ತೇನೆ!"

"ಹೂಂ!" ಸಂಜೀವರಾಯರು ಕಣ್ಣು ಕೆಂಪಗೆ ಮಾಡಿದರು. ತಮ್ಮ ಮಗಳು ಇಷ್ಟು ಬದಲಾಗಬಹುದೆಂದು ಅವರು ತರ್ಕಿಸಲಿಲ್ಲ. "ಏನೆಂದಿ? ಶೀನಪ್ಪನವರ ಸಲುವಾಗಿ ಪಾಲೆ?.........." ಒಂದು ಕ್ಷಣ ಅವರು ಲಕ್ಷ್ಮಿ ತಮ್ಮ ಮಗಳೇ ಎಂಬುದನ್ನು ಮರೆತುಬಿಟ್ಟರು.

ಇಂಥ ಸಂದರ್ಭದಲ್ಲಿ ಯಾವ ಗುಪ್ತ ಮಾತು ಹೇಳುವುದು ಲಕ್ಷ್ಮಿಗೆ ಶಕ್ಯವಿರಲಿಲ್ಲ. "ಅಹುದು ಅಪ್ಪ, ಅವರು ನನ್ನನ್ನು ಸರಿಯಾಗಿ ನೋಡಿಕೊಳ್ಳುವುದಿಲ್ಲ!...." ಎಂದು ಲಕ್ಷ್ಮಿ ಇಷ್ಟೆ ಉತ್ತರವಿತ್ತಳು.

ಸಂಜೀವರಾಯರು ಲಕ್ಷ್ಮಿಯ ಮಾತನ್ನು ಏನೂ ನಂಬಲಿಲ್ಲ. "ಲಕ್ಕಮ್ಮಾ

ಇನ್ನೂ ನೀನು ಚಿಕ್ಕವಳು. ನಿನಗಿನ್ನೂ ಈ ಲೋಕದ ವ್ಯವಹಾರ ತಿಳಿಯುವು ದಿಲ್ಲ. ಶೀನಪ್ಪನವರನ್ನು ನಾನು ಮೊದಲಿನಿಂದ ಬಲ್ಲೆ. ಅವರು ಹದಿನೆಂಟು ವರ್ಷದವರಿರುವಾಗಲೆ, ಅವರ ಹೆಂಡತಿ ತೀರಿಹೋದಳು––ಲಗ್ನವಾಗಿ ಎರಡೇ ವರ್ಷಗಳಲ್ಲಿ. ಅಂದಿನಿಂದ ಈವರೆಗೆ, ಇಪ್ಪತ್ತು ವರ್ಷವಾಯಿತು, ಅವರು ನಿಸ್ವಾರ್ಥ ಬುದ್ಧಿಯಿಂದ ಕೆಲಸ ಮಾಡುತ್ತಿದ್ದಾರೆ. ಲಕ್ಕಮ್ಮಾ, ಅವರು ಹೀಗೆ ಇರದೇ ಇದ್ದರೆ ಜಾಗಿರದಾರರ ತಿಜೋರಿ ಕೀಲಿಕೈ ಅವರ ಕಡೆಗೆ ಹೇಗೆ ಇರು ತ್ತಿತ್ತು? ನೀನು ಶ್ರೀಮಂತರ ಪದರಿನಲ್ಲಿ ಹೇಗೆ ಬೀಳುತ್ತಿದ್ದಿ? ಲಕ್ಕಮ್ಮಾ, ಅವರು ನಮಗೆ ಉಪಕಾರ ಮಾಡಿದ್ದು ಅಷ್ಟಿಷ್ಟಲ್ಲ. ನಮಗೇನಾದರೂ ಬುದ್ಧಿ ಇದ್ದರೆ, ಅವರ ಹೆಸರು ನೆನೆದು ನಾವು ದಿನಾಲು ಊಟ ಮಾಡಬೇಕು. ಇಲ್ಲಿ ಒಳಗೆ ಬಾ ಲಕ್ಕಮ್ಮಾ........ಶೀನಪ್ಪನವರು ನಮ್ಮನ್ನು ಎಷ್ಟು ಹಚ್ಚಿಕೊಂಡಿರು ವರೆಂಬುದನ್ನು ತೋರಿಸುವೆ........"

ಸಂಜೀವರಾಯರ ಮಾತಿನ ಓಘಕ್ಕೆ ಅಡ್ಡಗಟ್ಟಲು ಲಕ್ಷ್ಮಿಗೆ ಶಕ್ಯವಾಗ ಲಿಲ್ಲ. ಸಂಜೀವರಾಯರ ಬೆಂಬತ್ತಿ ಲಕ್ಷ್ಮಿ ಒಳಗಿನ ಕೋಣೆಗೆ ಹೋದಳು.

ಸಂಜೀವರಾಯರು ಒಂದು ದೊಡ್ಡ ಪೆಟ್ಟಿಗೆಯ ಚಿಲಕವನ್ನು ತೆರೆಯುತ್ತ, ಹೇಳಿದರು " ಲಕ್ಕಮ್ಮಾ, ತನಗೆ ಸಿಗುವ ಹಣದ ಆಶೆಯಿಂದ ಶೀನಪ್ಪನವರು ನಿನ್ನ ಲಗ್ನ ಮಾಡಿಸಲಿಲ್ಲ. ಅವರು ಆಸ್ತಿಕರು, ಧಾರ್ಮಿಕರು. ದೇವರಲ್ಲಿ ಸಂಪೂರ್ಣ ನಂಬಿಗೆಯುಳ್ಳವರು!........ ಅಂತೆಯೆ ಅವರು ಇಷ್ಟು ದೊಡ್ಡ ಮನಸ್ಸಿನವರಾಗಿದ್ದಾರೆ........ ಒಂದು ಸಲ ಕೃಷ್ಣರಾಯರು ನವರಾತ್ರಿಯಲ್ಲಿ ವೆಂಕಟೇಶದೇವರ ಗುಡಿಯಲ್ಲಿ ಮಂಗಳಾರತಿ ಮಾಡಿಸಿ ರಾತ್ರಿ ೧೦ ಗಂಟೆಗೆ ಬಂದು ಮಲಗಿಕೊಂಡರಂತೆ. ಅವರು ವೆಂಕಟೇಶ ದೇವರ ಕೇವಲ ಭಕ್ತರು. ರಾತ್ರಿ ಅವರ ಕನಸಿನಲ್ಲಿ ಆರತಿ ಬೆಳಕು ಕಂಡಿತಂತೆ! ಆ ಬೆಳಕಿನಲ್ಲಿಯೇ ವೆಂಕಟೇಶದೇವರು ಪ್ರತ್ಯಕ್ಷರಾದರಂತೆ! ಅವರು ಕೈಮಾಡಿ ತೋರಿಸಿದರಂತೆ! ರೈಲು ಹೋಯಿತು! ಬಸ್ಸು ಹೋಯಿತು! ಆ ಬಸ್ಸು ಬಂದು ನಮ್ಮ ಊರ ಮುಂದೆಯೆ ನಿಂತಿತಂತೆ! ಮುಂದೆ ನಮ್ಮ ಮನೆಯ ವರೆಗಿನ ರಸ್ತೆ ಕಾಣಿಸಿ ತಂತೆ! ನೀನು ಬಾಗಿಲಲ್ಲಿ ಬಂದು ನಿಂತು ನಕ್ಕೆಯಂತೆ!............ ಕೂಡಲೇ ಅವರ ಮಗ ನಾರಾಯಣರಾಯರ ಜೊತೆಗೆ ನೀನು ನಿಂತಿದ್ದೆಯಂತೆ! ಮಂಗಳ ವಾದ್ಯಗಳು ಬಾರಿಸಿದವು! ಹೂಮಳೆ ಸುರಿಯಿತು!............ ಪರಮಾತ್ಮ

ವೆಂಕಟೇಶ ತನ್ನ ಎರಡೂ ಕೈಗಳಿಂದ ನಿಮ್ಮನ್ನು ಆಶೀರ್ವದಿಸುತ್ತಲೆ ಮಾಯ
ವಾದನಂತೆ !.......... ನಿನ್ನ ಲಗ್ನದ ಹಿಂದೆಯೆ ಇಷ್ಟೆಲ್ಲ ಕತೆಯಿದೆ ಲಕ್ಷ್ಮ
ಇಲ್ಲವಾದರೆ ಕೃಷ್ಣರಾಯರಂಥ ದೊಡ್ಡ ಜಾಗಿರದಾರರು ಈ ಬಡವರ ಮನೆಯ
ಹೆಣ್ಣನ್ನು ಏಕೆ ಕರೆದುಕೊಂಡು ಹೋಗುತ್ತಿದ್ದರು !!.... ಶೀನಪ್ಪನವರೇ ನನ
ಈ ಎಲ್ಲ ಕತೆ ಹೇಳಿದರು. ”

ಕನಸಿನ ನನಸನ್ನು ನೆನೆಯುತ್ತ ಕೃಷ್ಣರಾಯರು ಪೆಟ್ಟಿಗೆಯ ಮುಚ್ಚ
ತೆರೆಯದೆ ಹಾಗೆಯೆ ಕುಳಿತಿದ್ದರು. ಕಳಸಾಪೂರ ದಿನ್ನೆಯ ಮೇಲೆ ಕುಳಿತಾಗ
ಸುಂದರಾ ಹೇಳಿದ ಕನಸನ್ನು ಲಕ್ಷ್ಮಿ ಸ್ಮರಿಸಿದಳು.

“ ಅಪ್ಪಾ, ನನಗೂ ಕನಸು ಬಿದ್ದಿತ್ತಂತೆ ! ನಾನೇನೋ ದೇವರ ಸೇ
ಮಾಡುತಿದ್ದೆನಂತೆ !.... ಆಗ ಕನಸಿನಲ್ಲಿ ದೇವರು ಪ್ರತ್ಯಕ್ಷನಾಗಿ ಇವರಿಗೇ ಹಾ
ಹಾಕು ಎಂದು ಹೇಳಿದನಂತೆ ! ”

“ ಅಂತೆ ಅಂತೆ ಎಂದು ಏನು ಹೇಳುವಿ. ನಿನಗೆ ಯಾರು ಹೇಳಿದರು
ಇದನ್ನೆಲ್ಲ ? ”

“ ಹೀಗೆಯೆ ಕಳಸಾಪೂರದಲ್ಲಿ ಒಬ್ಬರು ! ”

ಸಂಜೀವರಾಯರು ನಕ್ಕರು. “ ಕಳಸಾಪೂರದವರೇ ! ಏನಾದರೂ
ಹೇಳಿರಬಹುದು. ಅದಕ್ಕೇ ಮಗು, ನಿನಗೆ ಇನ್ನೂ ಲೋಕದ ವ್ಯವಹಾ
ತಿಳಿಯುವದಿಲ್ಲ ಎಂದು ಆಗಲೆ ನಾನು ಹೇಳಿದ್ದು. ನೋಡು ಇಲ್ಲಿ ಶೀನಪ್ಪ
ನವರು ನಮ್ಮನ್ನು ಎಷ್ಟು ಹಚ್ಚಿಕೊಂಡಿದ್ದಾರೆ. ಅವರು ನಿನಗೆ ಕೆಡುಕನ್ನು
ಬಯಸುವುದು ಸಾಧ್ಯವೇ ಇಲ್ಲ. ಅವರೇ ನಿನ್ನ ಮದುವೆ ಮಾಡಿದವರು. ಅವ
ನಿನಗೆ ಹೇಗೆ ಕೆಟ್ಟುದನ್ನು ಮಾಡುವರು ?........”

ಸಂಜೀವರಾಯರು ಪೆಟ್ಟಿಗೆಯೊಳಗಿನ ಸಾಮಾನುಗಳನ್ನು ತೆರೆದರು.
ಎಷ್ಟು ಬೆಲೆಯುಳ್ಳ ಬಟ್ಟೆಗಳು ! ಎಷ್ಟು ಬೆಳ್ಳಿಯ ಸಾಮಾನುಗಳು ! ಮೇಲಾಗಿ
ರೂಪಾಯಿಯ ನೋಟುಗಳು !

ಈ ಎಲ್ಲ ಪದಾರ್ಥಗಳ ದೇಣಿಗೆಯಲ್ಲಿ ಶೀನಪ್ಪನವರ ಕುಹಕ ನಾಟಕದ
ಚಿತ್ರ ಸ್ಫುಟವಾಗಿ ಕಂಡಿತು ಲಕ್ಷ್ಮಿಗೆ ! ಸಂಜೀವರಾಯರು ಸಂತೋಷದಲ್ಲಿ
ದ್ದರು. ಲಕ್ಷ್ಮಿ ದುರದುರನೆ ಅವುಗಳ ಕಡೆಗೆ ನೋಡಿದಳು !

ಸಂಜೀವರಾಯರು ಒಂದು ಭಂಗಾರದ ಉಡುದಾರವನ್ನು ತೆರೆದು

"ನೋಡು ಶೀನಪ್ಪನವರ ನಿಸ್ವಾರ್ಥ ಬುದ್ಧಿ. ನಾಳೆ ನಿನ್ನ ಮಗನಿಗಾಗಿ ಈ ಉಡದಾರ........ "

ಲಕ್ಷ್ಮಿ ಚಿಟ್ಟನೇ ಚೀರಿದಳು ! ಆ ಉಡದಾರವನ್ನು ಸಂಜೀವರಾಯರ ಕಡೆಯಿಂದ ಕಸಿದುಕೊಂಡು ಚೆಲ್ಲಿದಳು. ಅವಳಲ್ಲಿ ಸಹನೆ ಉಳಿಯಲಿಲ್ಲ. ಅಡುಗೆಯ ಮನೆಗೆ ಹೋಗಿ ಸೆರಗು ಮುಚ್ಚಿಕೊಂಡು ಅಳಹತ್ತಿದಳು.

ಲಕ್ಷ್ಮಿಯು ಚೀರಿಕೊಂಡದ್ದನ್ನು ನೋಡಿ, ಸಂಜೀವರಾಯರು ಮೊದಲು ಗಾಬರಿಯಾದರು. ತಮ್ಮ ಮಗಳಿಗೆ ಅಂಥ ಸಂಕಟವೇನಾಯಿತೋ ಎಂದು ವ್ಯಥೆಬಟ್ಟರು. ತರುವಾಯ ಅವರಿಗೆ ತಮ್ಮ ಮಗಳ ಅಳುವಿನ ಅರ್ಥ ಹೊಳೆದಂತಾಯಿತು !

ಅಡುಗೆಯ ಮನೆಗೆ ಲಕ್ಷ್ಮಿಯ ಹತ್ತಿರ ಹೋಗಿ, ಪ್ರೀತಿಯಿಂದ ಅವಳ ಬೆನ್ನಮೇಲೆ ಕೈಯಾಡಿಸುತ್ತ "ಲಕ್ಕಮ್ಮಾ, ಮನಸ್ಸಿಗೆ ಹಚ್ಚಿಕೊಳ್ಳಬೇಡ. ಸುಮ್ಮನೆ ಏಕೆ ಅಳುವಿ? ಅದು ದೇವರ ದೇಣಿಗೆ!........ ನಾನು ಉಡದಾರ ತೋರಿಸಿದ್ದೇ ತಪ್ಪಾಯಿತು!........ ಇಂದಿಲ್ಲ ನಾಳೆಯಾದರೂ ನಾನು ಮೊಮ್ಮಗನನ್ನು ನೋಡಬಹುದು !"

## ೧೪

"ಏನು, ಸುಮ್ಮನೇ ಏಕೆ ಕುಳಿತಿರುವೆ?"

"ಛೀ........!"

"ಹೀಗೇಕೆ ಕುಳಿತುಕೊಳ್ಳುವೆ ಹಿತ್ತಲದ ಬಾಗಿಲದಲ್ಲಿ? ನಿನ್ನೆಯೂ ನೋಡಿದೆ! ಈ ದಿನವೂ ನೋಡಿದೆ! ಏನು ಚಿಂತೆ ಮಾಡುತ್ತಿರುವೆ?"

"ಛೀ........ಏನೂ ಇಲ್ಲ!"

"ಏನೋ ಇರಬೇಕು! ಇಲ್ಲವಾದರೆ ಸಂಜೆಯ ಹೊತ್ತಿನಲ್ಲಿ ಹೀಗೆ ಸುಮ್ಮನೆ ಯಾರು ಕುಳಿತುಕೊಳ್ಳುವರು?"

"ಛೀ....ಏನೂ ಕೆಲಸವಿರಲಿಲ್ಲ. ಆದುದರಿಂದ ಹಾಗೆಯೆ ಕುಳಿತಿದ್ದೆ!"

"ನೀನು ಹೇಳದೆಯೆ ಇದ್ದರೂ ನನಗೆ ಗೊತ್ತಿದೆ!"

"ಆ್ಞs ? ಏನಂದಿರಿ ? "

"ಎರಡು ದಿನಗಳಲ್ಲಿಯೆ ನನಗೆಲ್ಲ ತಿಳಿದಿದೆ........"

"ನಿಮಗೆ ಏನು ತಿಳಿಯಿತು ?"

"ಮನೆಯಲ್ಲಿ ಎಷ್ಟು ಗದ್ದಲವಿದೆಯೆಂಬುದು !"

"ನೋಡಿರಿ, ಇಲ್ಲಿ ಗದ್ದಲ ಯಾವಾಗಲೂ ಇದೆ !"

"ಬರಿ ಜನರ ಗದ್ದಲವಲ್ಲ!........ ಬೇರೆ ಗದ್ದಲವೂ ಇದೆ !.......... ಲಕ್ಷ್ಮೀವೈನಿ, ನಿನಗೆ ನಿಜವಾಗಿಯೂ ಇಲ್ಲಿ ತೊಂದರೆಯಾಗಿರಬಹುದು. ನಮ್ಮ ಷ್ಟಕ್ಕೆ ನಾವೇ ಇರಬೇಕೆಂದರೂ ಈ ಜನ ನಮ್ಮನ್ನು ಇರಿಸಗೊಡಲಿಕ್ಕಿಲ್ಲೆಂದು ಕಾಣುತ್ತದೆ........"

"ಅಹುದು ನೀವು ಗಂಡಸರು ! ಇದು ಎರಡೇ ದಿನಗಳಲ್ಲಿ ತಿಳಿಯಿತು. ನಮ್ಮಂಥ ಹೆಂಗಸರಿಗೆ ಇಷ್ಟು ತಿಳಿಯಲು ಎರಡು ವರ್ಷ ಬೇಕಾದವು.... !"

"ಪಾಪ! ಆನಂದರಾಯರು ದಾರಿಯಲ್ಲಿ ಬಿದ್ದುಬಿಟ್ಟಿದ್ದರು. ಯಾರೂ ದಿಕ್ಕಿರಲಿಲ್ಲ. ಅವರಿಗೆ ಯಾರೋ ಸೆರೆ ಕುಡಿಸಿರಬೇಕು ! ನನಗಾದರೂ ಏನು ಗೊತ್ತು ಅವರು ನಿನ್ನ ಬಳಗದವರೆಂಬುದು ! ಸಹಜವಾಗಿ ನಾನು ಅವರನ್ನು ಎಬ್ಬಿಸಿ, ಡಮಣಿಯಲ್ಲಿ ಕರೆದುಕೊಂಡು ಹೋಗಿ ದವಾಖಾನೆಯಲ್ಲಿ ಉಪಚರಿ ಸಿದೆ. ಅವರಿಗೆ ಎಚ್ಚರಿಕೆ ಬಂದ ತರುವಾಯ ಕಳಸಾಪೂರದ ಸಂಬಂಧ ಹೇಳಿ ದರು !........ ಆಗ ನನಗೆ ಬಹಳ ಆನಂದವಾಯಿತು. ಲಕ್ಷ್ಮೀವೈನಿ, ನೀನು ಮತ್ತು ಸುಂದರಾ ಅವರನ್ನು ಒಂದೇ ಸವನೆ ಹುಡುಕುತ್ತಿದ್ದಿರಿ. ಅದನ್ನು ಸ್ಮರಿಸಿ, ಅವರಿಗೆ ಜುಲುಮೆ ಮಾಡಿ ಕರೆದುಕೊಂಡು ಬಂದೆ. ಮೊದಲನೆಯ ದಿನ ಎಲ್ಲರೂ ಆನಂದಬಟ್ಟರು. ಈ ದಿನ ಮಧ್ಯಾಹ್ನ ನನಗೆ ಕೇಳುತ್ತಾರೆ, 'ಇಷ್ಟೆಲ್ಲ ಪ್ರಯತ್ನ ಮಾಡಲು, ಆನಂದರಾಯರಿಗೂ ನನಗೂ ಏನು ಸಂಬಂಧ?' ಎಂದು. ಮತ್ತೆ ಕಿಲಕಿಲನೆ ನಗುತ್ತಾರೆ, ಇರಲಿ ಲಕ್ಷ್ಮೀವೈನಿ. ನಾನು ಸಮಾಜ ಕಾರ್ಯ ಮಾಡುವಾಗ ಇಂಥ ಎಷ್ಟೋ ಪ್ರಸಂಗಗಳು ಬಂದಿವೆ. ಅವುಗಳಂತೆ ಇದೂ ಒಂದು. ಮುಖ್ಯ ನಿನ್ನ ಸಲುವಾಗಿ ಅವರನ್ನು ಕರೆದುಕೊಂಡು ಬಂದೆ. ನಿನ್ನ ಗೆಳತಿಯೂ ಹಾಗೆ ಮಾಡಲು ಹೇಳಿದಳು........"

ಲಕ್ಷ್ಮಿ ವೆಂಕಟೇಶ ಅವರು ಹೇಳಿದ ಮಾತುಗಳನ್ನು ಸಾವಧಾನದಿಂದ ಕೇಳಿಕೊಂಡಳು. ತನ್ನ ಸಲುವಾಗಿ ಸಹಾನುಭೂತಿ ತೋರಿಸಿದ ಅವರಿಗೆ

ಮನಸ್ಸಿನಲ್ಲಿಯೆ ಹೃತ್ಪೂರ್ವಕ ನೆನಿಕೆಗಳನ್ನು ಸಲ್ಲಿಸಿದಳು. "ನೋಡಿರಿ, ನೀವು ನನಗೆ ಅಣ್ಣನ ಸಮಾನ ಎಂದು ತಿಳಿದುಕೊಳ್ಳುವೆ. ನಿಮ್ಮ ಉಪಕಾರ ಎಷ್ಟು ಸ್ಮರಿಸಿದರೂ ಕಡಿಮೆಯೆ.........ನೀವು ನಾಳೆಯೆ ಶಹಪೂರಿಗೆ ಹೋಗಬೇಡಿರಿ. ಒಂದೆರಡು ದಿನ ನಿಲ್ಲಿರಿ........... ನಿಮಗೆ ಒಂದು ವಿಚಾರವನ್ನು ಹೇಳಬೇಕಾಗಿದೆ."

"ಏನು ಅದು? ಇಂದೇ ಹೇಳಬಹುದಲ್ಲವೆ?"

"ಇಲ್ಲ, ಈ ದಿನ ಹೇಳಲಿಕ್ಕೆ ಬರುವಂತಿಲ್ಲ........"

ಮರುದಿನ ಲಕ್ಷ್ಮಿ ಆನಂದರಾಯರನ್ನು ಏಕಾಕಿಯಾಗಿದ್ದಾಗ ಕಾಣಬೇಕೆಂದು ಆತುರಬಟ್ಟಳು. ಯಾವ ಸಮಯದಲ್ಲಿ ಅವರನ್ನು ಭೆಟ್ಟಿಯಾಗಬಹುದು? ಮಧ್ಯಾಹ್ನ ನಾಲ್ಕು ಗಂಟೆಗೆ ಅವರೊಬ್ಬರೆ ಹಿತ್ತಲ ಬಾಗಿಲಿನಿಂದ ಹಾಯ್ದು ಕಳಸಾಪೂರದ ದಿಬ್ಬದ ಕಡೆಗೆ ಹೋದರು. ಅವರನ್ನು ಕಾಣಲು ಇದೇ ಯೋಗ್ಯ ವೇಳೆಯೆಂದು ಭಾವಿಸಿ, ಲಕ್ಷ್ಮಿ ಸ್ವಲ್ಪ ಸಮಯದ ನಂತರ ಆ ದಿಬ್ಬವನ್ನು ಏರಿ ಹೋದಳು.

ಹುಣಸೆಯ ಮರದ ಕೆಳಗೆ ಸ್ವಸ್ಥವಾಗಿ ಆನಂದರಾಯರು ಕುಳಿತುಕೊಂಡಿದ್ದರು. ಪಶ್ಚಿಮದಲ್ಲಿ ಕೆಳಗಿಳಿಯುವ ಸೂರ್ಯನ ಕಡೆಗೆ ಅವರ ಲಕ್ಷ್ಯವಿತ್ತು. ಅವರು ದೇವರ ಅನಂತಲೀಲೆಯಲ್ಲಿ ಧ್ಯಾನಸ್ಥರಾದವರಂತೆ ಕಂಡಿತು. ಅವರನ್ನು ಕಂಡೊಡನೆಯೆ ಪೂಜ್ಯಭಾವನೆ ಲಕ್ಷ್ಮಿಯಲ್ಲಿ ಉತ್ಪನ್ನವಾಯಿತು. ಅವಳ ಮನಸ್ಸು ಬಾಗಿತು! ಲಕ್ಷ್ಮಿ ಬಾಗಿ ಆನಂದರಾಯರಿಗೆ ನಮಸ್ಕರಿಸಿದಳು.

"ಹಾಂ!" ಆನಂದರಾಯರು ಅಚ್ಚರಿಯಿಂದ ಮಾತನಾಡಿದರು "ಲಕ್ಷ್ಮಿ ಅದೇನು ಇಲ್ಲಿಗೆ ಬಂದೆ? ಯಾವಾಗ ಬಂದೆ?"

"ಇದೇ ಈಗ ಬಂದೆ! ನೀವು ನಮ್ಮ ಮನೆತನದಲ್ಲಿ ಹಿರಿಯರು. ಮೇಲಾಗಿ ತಿಳಿದವರು........ನಿಮ್ಮ ನಾಟಕವನ್ನು ನಾನು ನೋಡಿದ್ದೇನೆ."

"ಎಲ್ಲಿ ನೋಡಿದೆ?"

"ಬೆಳಗಾವಿಯಲ್ಲಿ...."

"ನನ್ನದೇ ಎಂದು ನಿನಗೆ ಯಾರು ಹೇಳಿದರು?"

"ನಾವೆಲ್ಲ ತಿಳಿದುಕೊಂಡೆವು...."

"ನನ್ನದಲ್ಲ. ಹಾಗಿದ್ದರೆ ಪ್ರಿಂಟು ಮಾಡಿಸುತ್ತಿದ್ದರು. ಇರಲಿ. ಅಂದರೆ

ಲಕ್ಷ್ಮಿ, ನೀನೇ ಏನು ನನ್ನನ್ನು ಕೇಳಿಹೋಗಿದ್ದು ?.... "

"ಹೂಂ! ನಾನು ಸುಂದರಾ ಎಲ್ಲರೂ ಕೂಡಿ ಬಂದಿದ್ದೆವು."

"ಓ ! ಅಂದಿನಿಂದ ನಾನು ಆ ಊರನ್ನೇ ಬಿಟ್ಟುಬಿಟ್ಟೆ...."

"ನೀವು ಹೋದಂದಿನಿಂದ ಮನೆ ಭಣಭಣವಾಗಿತ್ತು. ಈಗ ಮತ್ತೆ ಮನೆ ಆನಂದದಿಂದ ತುಂಬಿದಂತಾಗಿದೆ. ಆದ್ದರಿಂದ ನೀವು ಇಲ್ಲಿಯೇ ಇದ್ದು ಬಿಡಬೇಕು.... "

"ನಾನಿದ್ದು ಏನು ಮಾಡಬೇಕು ? "

"ನೋಡಿರಿ, ನೀವು ಹಿರಿಯರು. ಈ ದೊಡ್ಡ ಮನೆತನ ನಡೆಯಿಸಿ ಕೊಂಡು ಹೋಗಬೇಕು........"

"ಲಕ್ಷ್ಮಿ, ನನಗೆ ಈ ಸಂಸಾರದಲ್ಲಿ ಏನೂ ಆಸಕ್ತಿ ಇಲ್ಲ. ಬರಬರುತ್ತ ಎಲ್ಲವೂ ಬೇಡವಾಗತೊಡಗಿದೆ. "

"ನೀವು ಹೀಗೆಂದರೆ ಹೇಗೆ? ಇಲ್ಲಿ ನಡೆಯುವದಾದರೂ ಹೇಗೆ ?.... ನೀವು ಇಲ್ಲಿಯೇ ಇರಬೇಕೆಂದು ಕೇಳಿಕೊಳ್ಳಲು ನಾನು ಇಲ್ಲಿಗೆ ಬಂದೆ. ಈ ಚಿಕ್ಕ ತಂಗಿಯ ಮಾತು........ "

"ಈ ಮನೆತನ ನಡೆಯಿಸಲು ಬೇಕಾದಷ್ಟು ಜನ ಇದೆ. ಮುಖ್ಯ ಶೀನಪ್ಪ ನವರು ಇದ್ದಾರಲ್ಲ?........" ಆನಂದರಾಯರು ಮೊಗ ಕೆಳಗೆ ಮಾಡಿ ಗಂಭೀರ ವಾಗಿ ಹೇಳಿದರು "ಏನೋ ಒಂದು ಆಶೆ. ಆ ಸುಂದರಾಗೆ ಮಂತ್ರಾಕ್ಷತೆ ಹಾಕಿ, ಅವಳನ್ನು ಅತ್ತೆಯ ಮನೆಗೆ ಕಳಿಸಿ ಹೋಗಬೇಕೆನ್ನುತ್ತೇನೆ."

ಎಲ್ಲರೂ ಶೀನಪ್ಪನವರ ಮೇಲೆ ಭಾರ ಹಾಕುವವರೇ. ಲಕ್ಷ್ಮಿಗೆ ಬಹಳ ನಿರಾಶೆಯಾಯಿತು. ನಿಡಿದಾದ ಉಸಿರನ್ನು ಬಿಟ್ಟು ಮನೆಗೆ ಮರಳಿದಳು.

ತನ್ನ ಕೋಣೆಯಲ್ಲಿ ವೆಂಕಟೇಶ ಅವರನ್ನು ಕರೆದು ಹೇಳಿದಳು "ನನ್ನ ದೊಂದು ಯೋಚನೆ ಇದೆಯೆಂದು ನಿಮಗೆ ನಿನ್ನೆ ಹೇಳಿದ್ದೆನಲ್ಲವೆ? ಅದಕ್ಕಾಗಿ ಕರೆದೆ."

"ಯಾವ ಯೋಚನೆ?"

"ಅದೇ--ನನ್ನದು !....... ........... ನೀವು ಇಲ್ಲಿಯೇ ಇರಲು ಬರ ಬಹುದೇ? "

"ಬಂದು ಏನು ಮಾಡಬೇಕು ? "

" ಈ ಆಸ್ತಿಯ ಮೇಲ್ವಿಚಾರಣೆ ಮಾಡಬೇಕು.... "

" ನಾರಾಯಣರಾಯರು ಇದ್ದಾರೆ; ಉಳಿದವರು ಇದ್ದಾರೆ. ಮತ್ತೆ ನಾನೂ ಒಬ್ಬ ಏಕೆ ? "

" ಶಾಂತಾಳನ್ನು ಕೇಳಿರಿ. ಅವಳಿಗೆ ಎಲ್ಲ ಗೊತ್ತಿದೆ!.... ನೀವು ಬರಲು ಒಪ್ಪಿದರೆ ಬಹಳ ಗುಣವಾಗುವುದು. ನಾನು ನಿಮಗೆ ಎಲ್ಲ ಅನುಕೂಲತೆ ಮಾಡಿಕೊಡುವೆ. "

" ಲಕ್ಷ್ಮೀವೈನಿ ನೋಡುತ್ತೇನೆ.... ಮುಖ್ಯ ಅವಳ ಒಪ್ಪಿಗೆ ಸಿಗಬೇಕು. ಶಹಪೂರಿಗೆ ಹೋಗಿ ಪತ್ರ ಬರೆಯುವೆ."

ಶಹಪೂರದಿಂದ ಅನುಕೂಲ ಪತ್ರ ಬಂದಿತು. ಮೊದಲು ವೆಂಕಟೇಶ ಒಬ್ಬರೇ ಹೋಗಬೇಕೆಂದೂ, ಆಮೇಲೆ ಎಲ್ಲವೂ ಸರಿಯೆನಿಸಿದರೆ ಶಾಂತಾ ಕಳ ಸಾಪೂರದಲ್ಲಿಯೇ ಮನೆ ಮಾಡಬೇಕೆಂದೂ ನಿರ್ಣಯವಾಯಿತು. ಒಂದು ದೃಷ್ಟಿಯಿಂದ ತಮ್ಮ ಉದರಂಭರಣದ ಪ್ರಶ್ನೆಯೂ ಬಿಟ್ಟಂತಾಯಿತು. ಹೀಗೆ ಎರಡೂ ದೃಷ್ಟಿಯಿಂದ ಶಾಂತಾ ಲಕ್ಷ್ಮಿಯ ಸೂಚನೆಗೆ ಸಮ್ಮತಿಸಿದಳು.

ಕೃಷ್ಣರಾಯರು ಸಾಯಲು ಕಾರಣ ಸೀತಕ್ಕಳೇ ಎಂದು ಸುಬ್ಬಕ್ಕನವರು ದೃಢವಾಗಿ ನಂಬಿದ್ದರು. ಆದ್ದರಿಂದ ಸುಬ್ಬಕ್ಕ ಅವಳ ಸಂಗಡ ವಿಶೇಷ ಮಾತ ನಾಡುತ್ತಿದ್ದಿಲ್ಲ. ತಾವಾಯಿತು; ತಮ್ಮ ಕೋಣೆಯಾಯಿತು. ಹೊರಗೆ ಎಲ್ಲಿಯೂ ದುಸುಗಾಡುತ್ತಿರಲಿಲ್ಲ. ಸೀತಕ್ಕ ಕೀಲಿಕೈ ಸರವನ್ನು ಇವರ ವಶಕ್ಕೆ ಒಪ್ಪಿಸಿ, ಮುಖವನ್ನು ಡೊಗರಿಸಿಕೊಂಡು ಬಿಟ್ಟಿದ್ದಳು. ಅವಳು ಮಾತನಾಡುವುದೂ, ಅಷ್ಟಕ್ಕಷ್ಟೆ. ಲಕ್ಷ್ಮಿ ಶೀನಪ್ಪನವರ ಜೊತೆಗೆ ಮಾತನಾಡುತ್ತಿರಲಿಲ್ಲ. ಅವರ ಎದುರಿಗೆ ಹಾಯುತ್ತಲೂ ಇರಲಿಲ್ಲ. ಹೀಗಾಗಿ ಮನೆಯಲ್ಲಿ ಎರಡು ಪಂಗಡಗಳೆ ಇದ್ದಂತೆ ಆಗಿದ್ದಿತು. ಒಬ್ಬಳನ್ನು ಕಂಡರೆ ಮತ್ತೊಬ್ಬರಿಗೆ ಆಗುತ್ತಿರಲಿಲ್ಲ. ಇಂಥ ವೇಳೆಯಲ್ಲಿ ಗಾಂಧೀ ವೇಷಧಾರಿಯೊಬ್ಬನು ವಾಡೆಯಲ್ಲಿ ಓಡಾಡುತ್ತಿರುವುದು ಶಕುನಿಯಾಟದ ಪ್ರಾರಂಭವೆಂದು ಜನ ಮಾತನಾಡಹತ್ತಿತು. ಅದೂ ಅವರು ಲಕ್ಷ್ಮಿಯ ವಶೀಲಿಯಿಂದ ಬಂದದ್ದರಿಂದ, ಅನೇಕರ ಲಕ್ಷ್ಯ ಅವರಕಡೆಗೆ ಹೋಯಿತು. ಲಕ್ಷ್ಮಿ ತನ್ನ ವಿರುದ್ಧ ಏನೋ ಒಳಸಂಚು ಹೂಡಿದ್ದಾಳೆಂದು ಶೀನಪ್ಪನವರಿಗೆ ನಿಶ್ಚಿತವಾಯಿತು ! ಈ ಹೊತ್ತಿನಲ್ಲಿ ಸುಮ್ಮನೇ ಕುಳಿತರೆ ತಮ್ಮ ಬೇಳೆ ಬೇಯುವದಿಲ್ಲವೆಂದೂ ಅವರಿಗೆ ಮನವರಿಕೆಯಾಯಿತು.

ಲಕ್ಷ್ಮಿ ಸುಬ್ಬಕ್ಕನವರ ಕಡೆಗೆ ಹೋಗಿ ಸೀತಕ್ಕ ಮತ್ತು ಗೋವಿಂದರಾಯರ ಸ್ವಭಾವ ತನ್ನ ವಿರುದ್ಧವಿರುವದೆಂದೂ, ಅದರಿಂದ ಸುರಕ್ಷಿತವಿರಲು, ತಮ್ಮ ಯೋಗಕ್ಷೇಮವನ್ನು ನೋಡಿಕೊಳ್ಳಲು ಯಾರಾದರೊಬ್ಬರು ತಿಳಿದವರು ಬೇಕೆಂದೂ ಹೇಳಿದ್ದಳು. ಅದರಂತೆ ವೆಂಕಟೇಶ ಅವರು ಕಳಸಾಪೂರದಲ್ಲಿರಲು ಅನುಮತಿ ಕೊಡಬೇಕೆಂದೂ ಕೇಳಿಕೊಂಡಿದ್ದಳು. ನಾರಾಯಣರಾಯರ ಸ್ವಭಾವ ಸುಬ್ಬಕ್ಕನವರಿಗೆ ಗೊತ್ತು; ಅದನ್ನು ಬಹಿರಂಗವಾಗಿವ್ಯಕ್ತಪಡಿಸುತ್ತಿದ್ದಿಲ್ಲ. ಆದುದರಿಂದಲೆ ತಮ್ಮ ಪ್ರೀತಿಯ ಸೊಸೆಗೆ ಒಮ್ಮೆಲೆ ಒಪ್ಪಿಗೆ ಕೊಟ್ಟರು. ಸುಬ್ಬಕ್ಕನವರು ಹೇಳಿದರು "ಪಾಪ! ವೆಂಕಟರಾಯ ಒಳ್ಳೆ ಮನುಷ್ಯ. ಮನೆಯೊಳಗೆ ಹಿರಿಯವ ಆನಂದರಾಯ! ಹುಚ್ಚನಂತೆ ತಿರುಗುತ್ತಿದ್ದ—ತಂದೆ, ತಾಯಿ, ಮನೆಮಾರು ಇದೆಯೋ ಇಲ್ಲೊ ಅನ್ನುವ ಹಾಗೆ. ಯಾರು ಎಷ್ಟು ಹೇಳಿದರೂ ಮನೆಗೆ ಬಂದಿರಲಿಲ್ಲ. ವೆಂಕಟರಾಯ ಅವನನ್ನು ರಮಿಸಿ, ಮನೆಗೆ ಕರೆದುಕೊಂಡು ಬಂದ. ಏನೋ ಸನ್ಮಾರ್ಗಕ್ಕೆ ಹಚ್ಚಿದ. ಲಕ್ಷ್ಮೀಬಾಯಿ, ನಮ್ಮನ್ನು ಬಹಳೇ ಹಚ್ಚಿಗೊಂಡಿದ್ದಾನೆ–ಅವನು. ನಮ್ಮನ್ನು ಒಳ್ಳೇ ಹಾದಿಗೆ ಹಚ್ಚಬಹುದು!" ಸುಬ್ಬಕ್ಕನವರು ನಿಟ್ಟುಸಿರು ಬಿಡುತ್ತ ನುಡಿದರು. "ಮನೆಯಲ್ಲಿ ಹಿರಿಯರು ಇಲ್ಲದ ಹಾಗಾಯಿತು!.......... ಮನೆತನ ಎಲ್ಲಿ ಒಡೆದು ಹೋಗುವದೋ!!" ಕೃಷ್ಣರಾಯರನ್ನು ನೆನೆಸಿ ಅವರು ಕಂಬನಿ ಸುರಿಸಿದರು. "ಲಕ್ಷ್ಮೀಬಾಯಿ, ನನ್ನದೇನಿದೆ ಇನ್ನು ಇಲ್ಲಿ? ಅವರೇ ಕೈಬಿಟ್ಟು ಹೋದ ಮೇಲೆ?........ ನೀನು ಬೇಕಾದ್ದನ್ನು ಮಾಡು. ನೀನೇ ನಮ್ಮ ಮನೆಯಲ್ಲಿ ದೀಪ ಹಚ್ಚಬೇಕು. ನಿನ್ನ ಮೇಲೆಯೆ ಇನ್ನು ಎಲ್ಲ ಭಾರ!"

ಸುಬ್ಬಕ್ಕನವರ ಮಾತುಗಳು ಲಕ್ಷ್ಮಿಗೆ ಎಷ್ಟೋ ಸಂತೋಷವನ್ನುಂಟು ಮಾಡಿದವು. ಮನೆತನದ ಭಾರ ತನ್ನ ಮೇಲೆ ಬೀಳಲಿ! ಆ ಭಾರವನ್ನು ಹಗುರಾಗಿ ಸಾಗಿಸಿಕೊಂಡು ಹೋಗುವ ತ್ರಾಣವನ್ನು ದೇವರು ತನಗೆ ಕೊಡಲಿ! ಎಂದು ದೇವರನ್ನು ತನ್ನ ಮನದಲ್ಲಿಯೆ ಸ್ಮರಿಸಿದ್ದಳು.

ವೆಂಕಟೇಶ ಅವರು ಕಳಸಾಪೂರಿಗೆ ಒಂದು ವಿಶೇಷ ಉದ್ದೇಶಕ್ಕಾಗಿ ಬರುವ ಸುದ್ದಿ ಶೀನಪ್ಪನವರಿಗೆ ತಿಳಿಯಿತು. ಲಕ್ಷ್ಮಿಗೆ ಇನ್ನು ತಮ್ಮ ಮುಗದಾಣವನ್ನು ಉಪಯೋಗಿಸದೆ ನಿರ್ವಾಹವಿಲ್ಲವೆಂದು ಅವರಿಗೆ ಅನಿಸಿತು. ಮೊದಲು ನೇರವಾಗಿ ಲಕ್ಷ್ಮಿಯ ಕೋಣೆಗೆ ಹೋಗಬೇಕೆಂದರು. ಆದರೆ

ಲಕ್ಷ್ಮಿಯ ಮನಸ್ಸು ಹೇಗಿದೆಯೋ ಏನೋ! ಅವಳನ್ನು ಈ ವೇಳೆಯಲ್ಲಿ ಕೇಳಕಬೇಕೋ ಬೇಡವೋ! ಈ ವಿಚಾರಗಳಲ್ಲಿ ಅವರು ಲಕ್ಷ್ಮಿಯ ಕಡೆಗೆ ಹೋಗುವುದನ್ನು ಬಿಟ್ಟು, ನಾರಾಯಣರಾಯರ ಕಡೆಗೆ ಹೋಗಲು ನಿಶ್ಚಯಿಸಿದರು.

ಬೆಳಗಿನಲ್ಲಿ ತಮ್ಮ ದಿವಾಣಖಾನೆಯ ಆಫೀಸಿನಲ್ಲಿ ದೊಡ್ಡ ದೊಡ್ಡ ಖಾತೆ-ಕಿರ್ದಿಗಳನ್ನು ಗುಡ್ಡದಂತೆ ಏರಿಸಿಕೊಂಡು ಗಂಭೀರವಾಗಿ ಕುಳಿತಿದ್ದ ಶೀನಪ್ಪನವರು ಒಮ್ಮೆಲೆ ತಮ್ಮ ಕೆಲಸದಿಂದ ಎದ್ದುಬಿಟ್ಟರು. ಯಾವ ಜಮಾಖರ್ಚುಗಳನ್ನು ನೋಡಲೂ ಅವರಿಗೆ ಮನಸ್ಸಾಗಲಿಲ್ಲ. ಮನಸ್ಸಿನಲ್ಲಿ ಬಂದ ಕೆಲಸವನ್ನು ಮೊದಲಿಗೆ ಮುಗಿಸಿಯೇ ಬಿಡಬೇಕೆಂದು ಅವರು ತೀರ್ಮಾನಿಸಿದರು. ದಾರಿಯಲ್ಲಿ ಒಂದೊಂದೇ ಕೋಣೆಯನ್ನು ದಾಟಿ ಹೋಗುವಾಗ ಸುತ್ತುಮುತ್ತಲೂ ಅವರಿಗೆ ಎತ್ತಕಡೆಗೂ ಲಕ್ಷ್ಯವಿರಲಿಲ್ಲ.

ಅಟ್ಟದ ಮೇಲಿಂದ ಸರ್ರನೆ ಮೆಟ್ಟಲುಗಳನ್ನು ಕೆಳಗಿಳಿದು ಬರುವ ಹನುಮಂತ ಶೀನಪ್ಪನವರಿಗೆ ಡಿಕ್ಕಿ ಹೊಡೆದು ನೆಲದಮೇಲೆ ಉರುಳಿದನು.

ಆಗ ಶೀನಪ್ಪನವರಿಗೆ ಎಚ್ಚರವಾಗಿ "ಏನೋ ಹನುಮಂತ, ಜನರನ್ನು ನೋಡುವದಿಲ್ಲೇನು ?" ಎಂದು ಸಿಟ್ಟಿನಿಂದ ಗರ್ಜಿಸಿದರು.

"ನೋಡಲಿಲ್ರಿ ರಾಯರೇ, ನೋಡಲಿಲ್ರಿ ರಾಯರೇ" ಎಂದು ದೀನನಾಗಿ ಹನುಮಂತ ಶೀನಪ್ಪನವರ ಪಾದಗಳಿಗೆ ನಮಸ್ಕರಿಸಿದನು.

"ಇದೇ ಹಣೇಬರಹ ನಿನ್ನದು. ಥೂ ನಿನ್ನ! ತಪ್ಪು ಮಾಡುವುದು! ಪಾದ ಬೀಳುವದು !........... ಇರಲಿ ಬಿಡು. ಅಲ್ಲೋ ಹನುಮ, ರಾಯರು ಇದ್ದಾರೇನು ?"

"ಸಣ್ಣ ರಾಯರೇ?........ ಇದ್ದಾರ!"

"ಮತ್ತೆ ಯಾರ ಇದ್ದಾರ ?"

"ಯಾರೂ ಇಲ್ಲರಿ !"

"ಏನು ಮಾಡಲಿಕ್ಕೆ ಹತ್ತಿದ್ದಾರೆ ?"

"ಸುಮ್ಮನೇ ಕೂತಾರ್ರಿ."

"ಸುಮ್ಮನೇ ?"

"ಅಂದರ್ರಿ. ಮುದಡ ಬುದ್ಧಿ ನನ್ನದು. ಫೋಟೋದ ಮುಂದಿ ಕೂತಾರ್ರಿ.

ವೆಂಕಟೇಶ ದೇವರ ಫೋಟೋದ ಮುಂದೆ ಕೂತಾರ್ರಿ. ”

“ ಇದೆಲ್ಲಿ ಸನ್ಯಾಸ ಬಂದಿತೋ ರಾಯರಿಗೆ ? ಆ್ಞ ? ಹನುಮಂತ ? ”

“ ಸನ್ಯಾಸಲ್ರೀ........ ಬುದ್ಧಿ ಬಂತು ಅಂದೆ ! ........... ನಮ್ಮ ಚಿಕ್ಕ ಬಾಯಿಸಾಹೇಬರಿಂದ ಹೀಗೆಲ್ಲ ಆಯ್ತು ನೋಡ್ರಿ. ದೇವರು ಯಾವ ವೇಳೆ ಬುದ್ಧಿ ಕೊಡತಾನೋ ನನಗೂ........ ಹ್ಞಾ ! ಮಾತಿನೊಳಗ ನನ್ನ ಕೆಲಸಾನೆ ಮರೆತೆ.... ಶೀನಪ್ಪನವರ ಪೋಸ್ಟ ಹೊತ್ತಾತೇನು ? ”

“ ಆಗಲಿಕ್ಕೆ ಬಂತು. ಆ ಪೋಸ್ಟಮನ್ ಅಲ್ಲೆ ಆಫೀಸದ ಹತ್ತಿರ ನಿಂತಿದ್ದ ನೋಡು.”

“ ಲಗೂ ಹೋಗಬೇಕು........ ” ಹನುಮಂತ ಕಿಸೆಯಲ್ಲಿ ಹುಡುಕಿದ ! ಕೈ ನೋಡಿಕೊಂಡ ! ಗಾಬರಿಯಾದವನಂತೆ ಅತ್ತಇತ್ತ ನೋಡಿದ.

“ ಏನಾಯಿತೋ ಹನುಮ ? ಹೀಗೇಕೆ ನೋಡುತ್ತೀ ಹುಚ್ಚನ ಹಾಗೆ ? ”

“ ಪತ್ರ ! ರಾಯರು ಕೊಟ್ಟ ಪತ್ರ ! ”

ಆ ಪತ್ರ ಅಲ್ಲಿಯೆ ಕೆಳಗೆ ಹಾರಿಬಿದ್ದಿತ್ತು. ಸಾವರಿಸಿಕೊಂಡು ಹನುಮಂತ ಅದನ್ನು ತೆಗೆದುಕೊಳ್ಳುವಾಗ, ಶೀನಪ್ಪನವರು ಕೇಳಿದರು “ ಏನದು ಹನುಮ, ನೋಡೋಣ.”

ಆ ಪತ್ರವನ್ನು ಕೈಯಲ್ಲಿ ತೆಗೆದುಕೊಂಡು, ಅದರ ವಿಳಾಸವನ್ನು ನೋಡಿ, ಶೀನಪ್ಪನವರು ಹುಸಿನಗೆಯೊಂದನ್ನು ನಕ್ಕರು. ತಮ್ಮ ಗಲ್ಲಗಳ ಮೇಲೆ, ಕೈ ಯಾಡಿಸಿ ಮೀಸೆಯನ್ನು ತಿರುವಿಕೊಂಡರು. “ ಹನುಮ, ಈ ಕೆಲಸಕ್ಕೆ ಇಷ್ಟು ಗಡಿಬಿಡಿ ಎಕೆ ?........ ನಾನೆಲ್ಲ ಪೋಸ್ಟ ಮಾಡಿಸುತ್ತೇನೆ. ದಿವಾಣಖಾನೆಯಲ್ಲಿ ಇನ್ನೂ ಪೋಸ್ಟ ಮಾಡುವ ಟಪಾಲು ಇದೆ. ”

“ ರಾಯರು ಹೇಳಿದ್ದರು........! ” ಅನುಮಾನಿಸುವ ಧ್ವನಿಯಲ್ಲಿ ಹನುಮಂತನು ಮಾತನಾಡಿದ.

“ ರಾಯರಿಗೆ ಹೇಳು ! ನಾನೂ ಹೇಳುತ್ತೇನೆ........ ! ನೀನು ಹೋಗು ಬೇರೆ ಏನಾದರೂ ಕೆಲಸವಿದ್ದರೆ........ ” ಶೀನಪ್ಪನವರ ಆಜ್ಞೆಗೆ ಹನುಮಂತ ತಲೆಬಾಗಿಸಿದನು.

ವೆಂಕಟೇಶ ಅವರಿಗೆ ಬರೆದ ಪತ್ರವೆಂಬುದು, ಪತ್ರದ ಮೇಲಿನ ವಿಳಾಸ

ದಿಂದಲೆ ತಿಳಿಯಿತು. ಶೀನಪ್ಪನವರು ತಮ್ಮ ಒಳಕಿಸೆಯಲ್ಲಿ ಅದನ್ನು ಮುಚ್ಚಿಟ್ಟುಕೊಂಡರು.

ಶೀನಪ್ಪನವರು ಅಟ್ಟದ ಮೇಲಿನ ಒಳಗಿನ ಕೋಣೆಗೆ ಹೋದರು. ನಾರಾಯಣರಾಯರು ವೆಂಕಟೇಶ ದೇವರ ಫೋಟೋದ ಎದುರಿಗೆ ಕಣ್ಣುಮುಚ್ಚಿ ಕುಳಿತಿದ್ದರು. ಶೀನಪ್ಪನವರು ಸೋಫಾದ ಮೇಲೆ ಗಂಭೀರವಾಗಿ ಕುಳಿತು ಖೇಕರಿಸಿದರು. ನಾರಾಯಣರಾಯರು ಹೊರಳಲಿಲ್ಲ. ಮೇಜಿನ ಮೇಲಿಟ್ಟ ಬೆಳ್ಳಿ ತಾಟಿನ ಸಪ್ಪಳ ಮಾಡಿದರು. ಆದರೂ ಅವರು ಹೊರಳಲಿಲ್ಲ. ಕೊನೆಗೆ ಕೋಪದಿಂದ ಧ್ವನಿಯನ್ನು ಏರಿಸಿ " ನಾನಾ ! " ಎಂದು ಕೂಗಿದರು.

ನಾರಾಯಣರಾಯರು ಹೊರಳಿ ಶೀನಪ್ಪನವರ ಕಡೆಗೆ ಸಮಾಧಾನದಿಂದ ನೋಡಿದರು. ಅವರು ಪೆಚ್ಚು ಮುಖಮುದ್ರೆ ಮಾಡಿರಲಿಲ್ಲ. ಹೆದರಿರಲೂ ಇಲ್ಲ. ಈ ಮೊದಲು ಅವರು ಶೀನಪ್ಪನವರನ್ನು ಕಂಡರೆ ಬಹಳ ಹೆದರುತ್ತಿದ್ದರು. ಅವರು ಮಾತನಾಡುವಾಗಲಂತೂ ಗದಗದ ನಡುಗುತ್ತಿದ್ದರು. ತಮ್ಮ ಮಾತಿನ ಜೋರಿನಿಂದ, ನಾರಾಯಣರಾಯರಲ್ಲಿ ಏನೂ ಬದಲಾವಣೆಯಾಗದಿದ್ದುದನ್ನು ನೋಡಿ, ಶೀನಪ್ಪನವರಿಗೆ ಒಮ್ಮೆಲೆ ಅಚ್ಚರಿಯಾಯಿತು. ಆದರೂ ಅವರು ತಮ್ಮ ಮೊದಲಿನ ದರ್ಪದಿಂದಲೇ ಮಾತನಾಡತೊಡಗಿದರು. ಸೋಫಾದ ಮೇಲೆ ಎದೆಸೆಟೆಸಿ ಕುಳಿತುಕೊಂಡು, ತಮ್ಮ ಬೆರಳನ್ನೆತ್ತಿ ಸೊನ್ನೆ ಮಾಡುತ್ತ " ಇಲ್ಲಿ ಬಾ, ನಾನಾ " ಎಂದು ಆಜ್ಞೆಮಾಡಿದರು.

ನಾರಾಯಣರಾಯರು ನಗುತ್ತ ಅವರ ಹತ್ತಿರ ಒಂದು ಖುರ್ಚಿಯನ್ನು ಎಳೆದುಕೊಂಡು ಕುಳಿತರು. ಶೀನಪ್ಪನವರು ಒಬ್ಬ ರಾಜನು ಸೇವಕನಿಗೆ ಕೇಳುವಂತೆ ಕೇಳಿದರು " ವೆಂಕಟೇಶ ಎಂದು ಬರುತ್ತಾರೆ ? "

" ನನಗೆ ಗೊತ್ತಿಲ್ಲ ! "

" ನನಗೆ ಗೊತ್ತಿಲ್ಲ ?? " ಶೀನಪ್ಪನವರು ಹುಬ್ಬುಗಂಟಿಕ್ಕಿ ನೋಡಿದರು. " ಹೂಂ ! ಇಂಥ ಬುದ್ಧಿ ಎಂದು ಬಂದಿತು ? ಗೊತ್ತಿರದೇ ಏನು ? "

" ನನಗೇನು ಗೊತ್ತು ? " ನಾರಾಯಣರಾಯರು ಮುಖ ಮೇಲೆತ್ತಿಯೆ ನುಡಿದರು.

" ನಾನಾ, ಎಲ್ಲಾ ಗೊತ್ತಿದೆ ! " ಶೀನಪ್ಪನವರು ಗದ್ದರಿಸಿದರು. " ನಿಮಗೆ ಯಾರು ಹೇಳಿದರು ಅವರನ್ನು ಕರೆದುಕೊಂಡು ಬರಲಿಕ್ಕೆ ? ಮನೆಯಲ್ಲಿ ಕಾರ

ಭಾರ ಬೇಕಾದವರು ಮಾಡುವುದೇನು?........ ನಾನಾ! ಏನೂ ಪತ್ರ ಬರೆಯ
ತಕ್ಕದ್ದಲ್ಲ. ಹಿರಿಯರಾದ ಸುಬ್ಬಕ್ಕನವರು ಇದ್ದಾರೆ. ಎಲ್ಲರೂ ಅವ
ಮಾತನ್ನೆ ನಡೆಯಿಸಬೇಕು. ಏನು ನಾನಾ! ಏನೇ ಆದರೂ ನನಗೆ ಮೊದಲ
ತಿಳಿಸು. ಇಲ್ಲವಾದರೆ ನೋಡು!"

"ಶೀನಪ್ಪ, ನನ್ನನ್ನು ಏನೂ ಕೇಳಬೇಡ. ಎಲ್ಲಾ........"

"ಎಲ್ಲಾ ನಾನು ನೋಡಿಕೊಳ್ಳುತ್ತೇನೆ........"

"ಎಲ್ಲಾ ಅವಳನ್ನೇ ಕೇಳು...."

"ಅವಳನ್ನೇ? ಯಾರನ್ನು?" ಶೀನಪ್ಪನವರು ಮತ್ತೆ ಹುಬ್ಬುಗಂಟಿಕ್ಕಿ
ಕೇಳಿದರು. "ಹೂಂ! ಈಗಾಗಲೆ, ಇಷ್ಟು ಬದಲಾವಣೆಯೆನು? ಆ್ಞs
ಅವಳನ್ನೇ ಅಂತೆ! ಇಷ್ಟು ದಿನ ಯಾರು ನಿನ್ನನ್ನು ಸಲಹಿದವರು? ನಾನಾ
ಪಿಟ್ಟೆಂದು ಮಾತನಾಡಬೇಡ. ನಾನು ಹೇಳಿದಷ್ಟು ಕೇಳು. ವೆಂಕಟೇಶ
ಅವರಿಗೆ ಬರಲಿಕ್ಕೆ ಪರವಾನಿಗೆ ಸಿಗುವದಿಲ್ಲ. ತಿಳಿಯಿತೋ ಇಲ್ಲೋ?"

"ನನಗೇನೂ ಗೊತ್ತಿಲ್ಲ, ಶೀನಪ್ಪ. ಅವಳನ್ನೇ ಕೇಳು. ಅವಳನ್ನೇ
ಕೇಳು!" ಎಂದು ನಿಶ್ಚಯದ ಧ್ವನಿಯಲ್ಲಿ ನಾರಾಯಣರಾಯರು ನುಡಿದರು.

ನಾರಾಯಣರಾಯರ ಈ ಮಾತುಗಳನ್ನು ಕೇಳಿ ಶೀನಪ್ಪನವರಿಗೆ ಅತೀವ
ಸಂಕಟವಾಯಿತು. ನಾರಾಯಣರಾಯರು ಎಂದೂ ಅವರಾಡಿದ ಮಾತು
ಗಳನ್ನು ಮೀರಿದವರಲ್ಲ. ಶೀನಪ್ಪನವರು ಹೇಳುವುದೊಂದೇ ತಡ, ನಾರಾಯ
ಣರಾಯರು ಅದರಂತೆ ಕೆಲಸ ಮಾಡುತ್ತಿದ್ದರು. ಶೀನಪ್ಪನವರನ್ನು ಕಣ್ಣೆ
ತ್ತಿಯೂ ಸಹ ನೋಡುತ್ತಿರಲಿಲ್ಲ. ಅಂಥವರು ಈ ದಿನ ಧೈರ್ಯದಿಂದ ಅವರೆ
ದುರಿಗೇ, ಅವರ ಮಾತಿಗೆ ಒಪ್ಪಿಗೆ ಕೊಡದಿದ್ದುದನ್ನು ನೋಡಿ ಅವರ ಅಭಿಮಾ
ನಕ್ಕೆ ಶಲ್ಯ ನಟ್ಟಂತಾಯಿತು. "ಆಗಲಿ ನಾನಾ! ಅವಳನ್ನೇ ಕೇಳುತ್ತೇನೆ!
ಬಹಳ ದಿನವಾಯಿತು. ಬೆನ್ನ ಮೇಲೆ ಚಬಕವನ್ನು ಕಂಡಿಲ್ಲ. ಅಂತೆಯೇ
ಹೀಗೆ ಮಾತನಾಡುತ್ತಿರುವಿ. ಅವಳನ್ನೇ ಕೇಳಿ ಬರುತ್ತೇನೆ--ನಿಲ್ಲು—"

ನಾರಾಯಣರಾಯರ ಲಗ್ನವಾದ ಮೇಲೆ ಈ ಒಂದೆರಡು ವರ್ಷಗಳಲ್ಲಿ
ಶೀನಪ್ಪನವರು ತಮ್ಮ ಮನಸ್ಸಿನ ಸಮತೂಕವನ್ನು ಎಂದಿಗೂ ಕಳೆದುಕೊಂಡಿ
ದ್ದಿಲ್ಲ. ಆದರೆ ಈ ದಿನ ನಾರಾಯಣರಾಯರ ಮಾತುಗಳು, ಶೀನಪ್ಪನವರ ಬಲ
ವನ್ನು ಕುಗ್ಗಿಸಿದವು. ಶೀನಪ್ಪನವರು ಉಸಿರೆಳೆಯುತ್ತ ಕೆಳಗೆ ಮೆಟ್ಟಲುಗಳನ್ನಿಳಿ

ದರು. ಒಂದು ಕ್ಷಣದಲ್ಲಿಯೆ ಅವರು ಮೇಲೆ ಬಂದು ನಾರಾಯಣರಾಯರ ಬೆನ್ನ ಹಿಂದೆ ಹೋಗಿ ನಿಂತರು.

ನಾರಾಯಣರಾಯರು ಹೊರಳಿ ನೋಡುತ್ತಲೇ, ಶೀನಪ್ಪನವರು ಅವರಿಗೆ ಆ ಸುರುಳಿ ಸುತ್ತಿದ ಕರಿಚಬಕವನ್ನು ತೋರಿಸಿದರು. ನಾರಾಯಣರಾಯರು ಅಂಜಿಕೆ ತುಂಬಿದ ಕಣ್ಣುಗುಡ್ಡೆಗಳಿಂದ ಶೀನಪ್ಪನವರನ್ನು ನೋಡತೊಡಗಿದರು. ನಾರಾಯಣರಾಯರು ತಮ್ಮ ಮಾತುಗಳನ್ನು ಕೇಳುವಂತೆ ಮಾಡಲು ಶೀನಪ್ಪನವರು ಮೊದಲಿನಿಂದಲೂ ಆ ಚಬಕವನ್ನು ಉಪಯೋಗಿಸುತ್ತಿದ್ದರು. ಶೀನಪ್ಪನವರು ಛಟಲ್ಲನೆ ಅದರ ಸಪ್ಪಳವನ್ನು ಮಾಡಿ "ನಾನು ಹೇಳಿದಂತೆ ಕೇಳುತ್ತಿಯೋ ಇಲ್ಲವೋ ?" ಎಂದು ಗರ್ಜಿಸಿದರು.

ನಾರಾಯಣರಾಯರು ಚೀರಿದರು "ಇಲ್ಲಾ" ಎಂದು ರಭಸದಿಂದ ಕೂಗಿಕೊಂಡರು.

"ಹ್ಞಾ?" ಎಂದು ಶೀನಪ್ಪನವರು ಮತ್ತೊಮ್ಮೆ ಆ ಚಬಕವನ್ನು ಎತ್ತಲು ಎತ್ತಿದ ಕೈ ಹಾಗೆಯೆ ನಿಂತಿತು. ಆ ಕೈ ಕೆಳಗೆ ಬರಲೇ ಇಲ್ಲ.

"ಓಹೋ! ನೀನು!" ಶೀನಪ್ಪನವರು ಉದ್ಗಾರ ತೆಗೆದರು. ಲಕ್ಷ್ಮಿ ಅವರ ಕೈಯನ್ನು ಬಿಗಿಯಾಗಿ ಹಿಡಿದಿದ್ದಳು. "ನೀನು ಇಲ್ಲಿಗೆ ಹೇಗೆ ಬಂದೆ ಲಕ್ಷ್ಮೂ?"

ಲಕ್ಷ್ಮಿಯನ್ನು ನೋಡಿ ಸೀನಪ್ಪನವರಿಗೆ ನಾಚಿಕೆಯಾಯಿತು. ತಮ್ಮ ವಿಚಿತ್ರ ಆವೇಶದಲ್ಲಿ ಲಕ್ಷ್ಮಿ ಬಂದುದರಿಂದ ಅವರಿಗೆ ಹೇಗೆ ಹೇಗೊ ಅನಿಸಿತು. ಶೀನಪ್ಪನವರು ದೂರ ಸರಿದು ನಿಂತರು. ತಮ್ಮ ಮುಖದ ಮೇಲಿನ ಬೆವರು ಒರೆಯಿಸಿಕೊಂಡು ಮತ್ತೆ ಕೇಳಿದರು "ಲಕ್ಷ್ಮೂ ಎಲ್ಲಿ ಇದ್ದೆ ನೀನು ?"

"ಗಿಡದ ನೆರಳಿನಲ್ಲಿ.... "

"ಅಂದರೆ ?"

"ಪತಿಯ ಹಿಂದಿರುವ ನೆರಳಿನಲ್ಲಿ!"

"ಹೂಂ!"

"ಇಲ್ಲೆ ಮಾಳಿಗೆಯ ಮೇಲೆ ಕುಳಿತಿದ್ದೆ."

"ಯಾವಾಗ ?"

"ಬಹಳ ಹೊತ್ತಾಯಿತು!........"

“ಹೌದು. ನೀನು ಹೇಳಿದಂತೆ ನಾನು ಧ್ಯಾನ ಮಾಡುತ್ತ ಕುಳಿತಿದ್ದೆ ಆಗ....?” ನಾರಾಯಣರಾಯರು ನಡುವೆ ಬಾಯಿಹಾಕಿದರು.

ಅವರ ಮಾತನ್ನು ಮುಂದೆ ಸಾಗಿಸಗೊಡದೆ ಶೀನಪ್ಪನವರು ಕೇಳಿದರು “ಲಕ್ಶ್ಮೂ, ಈ ಆಟ ನೋಡಿದಿಯೇನು ಹಾಗಾದರೆ? ನಾರಾಯಣರಾಯರಿಗೆ ಈ ಆಟದ ಮೇಲೆ ಬಹಳ ಪ್ರೀತಿ. ಮೊದಲಿನಿಂದ ಅವರು ಈ ಆಟಪಾಡುತ್ತಿದ್ದಾರೆ. ಅವರು ಘೋಡಾ. ನಾನು ಸವಾರ !!........ ಈ ಚಬುಕ ತರದಿದ್ದರೆ ಈ ಘೋಡಾ ಮುಂದೆ ಹೋಗುವುದೇ ಇಲ್ಲ. ಹ್ಹ ! ಹ್ಹ !” ಎಂದು ಶೀನಪ್ಪನವರು ನಗಲು ಯತ್ನಿಸಿದರು.

“ಶೀನೂಕಾಕಾ, ಈ ಆಟದ ಅರ್ಥ ನನಗೆ ಆಗದಷ್ಟು ಚಿಕ್ಕವಳಲ್ಲ ನಾನು !!” ಎಂದು ಲಕ್ಷ್ಮಿ ಒಮ್ಮೆಲೆ ನುಡಿದಳು. ಶೀನಪ್ಪನವರು ಚಬುಕವನ್ನು ಆಚೆಗೆ ಚೆಲ್ಲಿ, ಲಕ್ಷ್ಮಿಯ ಕಡೆಗೆ ಕಣ್ಣುಹೊರಳಿಸಿ ನೋಡಿದರು. “ಏನೆಂದೀ?” ಎಂದು ಕೇಳಿದರು.

“ಶೀನೂಕಾಕಾ, ನಿನಗೆ ನಾಚಿಕೆಯಿಲ್ಲ!”

“ನಾಚಿಕೆಯಿಲ್ಲ??”

“ಹೌದು।” ಲಕ್ಷ್ಮಿಯ ಉಸಿರು ಮಹಾಪೂರವಾಗಿ ಹರಿದಾಡುತ್ತಿತ್ತು. “ನಾಚಿಕೆಯಿಲ್ಲ! ನಿನಗೆ ನಾಚಿಕೆಯಿಲ್ಲ!! ನಮ್ಮ ಕೋಣೆಯಲ್ಲಿ ಬರಲಿಕ್ಕಾದರೂ ಹೇಗೆ ನಾಚಿಕೆ ಬರಲಿಲ್ಲ ನಿನಗೆ? ಅವರ ಬೆನ್ನಮೇಲೆ ಬಾರಕೋಲು ಎತ್ತಲು ನಾಚಿಕೆ ಹೇಗೆ ಬರಲಿಲ್ಲ? ದೊಡ್ಡವರು ದೊಡ್ಡವರು ಎಂದು ಹೇಳಿಕೊಳ್ಳುತ್ತೀ! ಏನು ದೊಡ್ಡಸ್ತಿಕೆ?........”

ಶೀನಪ್ಪನವರು ಬಿದ್ದು ಬಿದ್ದು ನಕ್ಕರು. “ಅಯ್ಯೋ, ಇದೆಲ್ಲ ಹುಡುಗಾಟ ಲಕ್ಶ್ಮೂ! ನಿನಗೆ ಇದೂ ತಿಳಿಯದೇ?”

“ಈ ಹುಡುಗಾಟ ತಿಳಿದಿದೆ. ಅದಕ್ಕೇ ಹೇಳಿದೆ! ಇನ್ನು ಮೇಲೆ, ಮೇಲೆ ಬರಲೇ ಬೇಡ. ಈ ಮಾತನ್ನು ನಿನಗೆ ಸಾವಿರ ಸಲ ಹೇಳುತ್ತೇನೆ.”

ಲಕ್ಷ್ಮಿಯ ಈ ಮಾತು ಕೇಳಿ, ಶೀನಪ್ಪನವರ ನಗುವಿನ ಲಹರಿ ನಿಂತಿತು. ಅದಕ್ಕೆ ಕೂಡಲೇ ಬ್ರೆಕ್ ಹಾಕಿದಂತಾಯಿತು. “ಲಕ್ಶ್ಮೂ, ನೀನು ನಾಲಗೆ ಬಹಳ ಹರಿಬಿಡುತ್ತಿದ್ದೀ. ಇದರ ಪರಿಣಾಮ ಚೆನ್ನಾಗಿ ಆಗಲಿಕ್ಕಿಲ್ಲ. ನೆನಪಿರಲಿ ನೋಡು.”

ಲಕ್ಷ್ಮಿ ಶೀನಪ್ಪನವರ ಮಾತುಗಳಿಗೆ ಬೆದರಲಿಲ್ಲ. ಏನಾಗುತ್ತದೋ ಆಗಲಿ! ಕಾಯುವವ ದೇವನಿದ್ದಾನೆ!........ನನ್ನದೆಲ್ಲ ನಾನು ನೋಡಿಕೊಳ್ಳುತ್ತೇನೆ. ನಿನ್ನದೇನೂ ಸಹಾಯ........"

"ಲಕ್ಷ್ಮೊ, ಮುಖ್ಯ ನಿನಗೆ ಆ ವೆಂಕಟೇಶ ಅವರು ಬರಬೇಕಾಗಿದೆಯಲ್ಲವೇ? ........"

"ಏನೂ ಇಲ್ಲ. ನನ್ನದನ್ನು ನಾನು ನೋಡಿಕೊಳ್ಳುತ್ತೇನೆ."

"ಎಲ್ಲಾ ಗೊತ್ತಿದೆ ನನಗೆ ಲಕ್ಷ್ಮೊ. ಆಗಲಿ, ನೋಡುತ್ತೇನೆ! ಲಕ್ಷ್ಮಿ, ನನಗೆ ನೀನಾಡಿದ ಮಾತುಗಳು ನೆನಪಿನಲ್ಲಿರಲಿ. ನೀನು ಈಗ ಎಲ್ಲ ನಾಚಿಕೆ ಬಿಟ್ಟಿರುವೆ. ಇದರ ಸಲುವಾಗಿ ನೀನು ಎಂದಾದರೊಂದು ದಿನ ಪಶ್ಚಾತ್ತಾಪ ಪಡುವೆ!" ಹೀಗೆನ್ನುತ್ತ ಶೀನಪ್ಪನವರು ಕೆಳಗಿಳಿದು ಹೋದರು.

ಲಕ್ಷ್ಮಿ ಮಾತನಾಡುವ ಮುಂದೆ, ಏನೋ ಮಾತನಾಡಿದಳು. ಆವೇಶದ ಭರದಲ್ಲಿ ಅವಳು ಹಾಗೆ ಮಾಡಿದಳು. ಶೀನಪ್ಪನವರು ಕೆಳಗಿಳಿದು ಹೋದ ಮೇಲೆ, ಅವಳು ತನ್ನಷ್ಟಕ್ಕೆ ತಾನೇ ವಿಚಾರಿಸಹತ್ತಿದಳು. ಗಿಡವನ್ನು ನೋಡಿ ಕಲ್ಲನ್ನೇನೋ ತೂರಿದಳು. ಅದು ಹಣ್ಣನ್ನು ಕೆಡಹುವುದೋ ಅಥವಾ ಯಾರಿಗಾದರೂ ಹೋಗಿ ಬಡಿಯುವುದೋ! ವಿಚಿತ್ರವಾದ ಚಿಂತೆ ಅವಳನ್ನು ಆವರಿಸಿತು. ಒಮ್ಮೆ ತಾನು ಮಾಡಿದ್ದು ಸರಿಯೆನಿಸಿತು! ಇನ್ನೊಮ್ಮೆ ಹೆಂಗಸು ಇಷ್ಟು ಧೈರ್ಯ ತಂದುಕೊಂಡು ಮಾತನಾಡುವುದು ಕೆಡಕು ಎಂದು ಯೋಚಿಸಿದಳು. ಶೀನಪ್ಪನವರ ಸಂಬಂಧವನ್ನು ಸಂಪೂರ್ಣ ಕಡಿದುಕೊಳ್ಳುವುದೇ ಸರಿಯೆಂದು ತೋಚಿತು. ಲಕ್ಷ್ಮಿ ಮಾಳಿಗೆಯ ಮೇಲೆ ಮರೆಯಲ್ಲಿ ಕುಳಿತು, ಶೀನಪ್ಪನವರ ಪ್ರತಿಯೊಂದು ಕೃತಿಯನ್ನು ಕಣ್ಣಾರೆ ಕಂಡಿದ್ದಳು. ಅವರ ದರ್ಪವನ್ನು ಮನವಾರೆ ಅರಿತಿದ್ದಳು. ಇದಲ್ಲದೆ ಶೀನಪ್ಪನವರ ಅನೇಕ ದುಷ್ಕೃತಿಗಳು ಅವಳ ಕಣ್ಣುಮುಂದೆ ಹಾಯತೊಡಗಿದವು. ನಾಟಕದ ರಂಗಭೂಮಿಯ ಮೇಲೆ ಅವನೊಬ್ಬ ಖಲನಾಯಕನಂತೆ ನಟಿಸುತ್ತಿದ್ದ. ಅವೆಲ್ಲ ಚಿತ್ರಗಳು ನೆನಪಾಗಿ, ಅವಳ ಮನಸ್ಸು ಬಹಳ ಭಾರವಾಯಿತು. ಭಾರವಾದ ಮನಸ್ಸಿನಿಂದ ಅವಳು 'ದೇವಾ! ನೀನೇ ರಕ್ಷಿಸು' ಎಂದು ಉಸಿರುತ್ತ, ಪಲ್ಲಂಗದ ಮೇಲೆ ಹೋಗಿ ಉರುಳಿದಳು.

ನಾರಾಯಣರಾಯರು ಅವಳ ಹತ್ತಿರ ಬಂದು ಕುಳಿತು "ಏನು ಬೇಕು?"

ಎಂದು ಕೇಳಿದರು.

ಮೊದಲನೆಯ ಪತ್ರ ಅವಳು ವೆಂಕಟೇಶ ಅವರಿಗೆ ಬರೆದಿದ್ದಳು. ಈಗ ಎರಡನೆಯ ಪತ್ರವನ್ನು ಶಾಂತಾಳಿಗೆ ಬರೆಯಬೇಕೆನಿಸಿತು. ತನ್ನ ದುಃಖ ನಿವೇದಿಸಿ ಬರೆದರೆ, ಶಾಂತಾ ವೆಂಕಟೇಶ ಅವರನ್ನು ಬೇಗ ಕಳುಹಿಸಬಹುದು. ನಾರಾಯಣರಾಯರು ಬರೆಯಲು ಕಾಗದ ತಂದುಕೊಟ್ಟರು. ಮಸಿದೌತಿ, ಟಾಕು ತಂದು ಅವಳ ಮುಂದೆ ಇಟ್ಟರು.

ಆ ದಿನ ರಾತ್ರಿ ಪತ್ರವನ್ನು ಬರೆದು, ಬೆಳಗಿನಲ್ಲಿ ಲಕ್ಷ್ಮಿ ಹನುಮಂತನನ್ನು ಕೂಗಿದಳು. "ಏನ್ರೀ, ಸಾಹೇಬ ಚಿಕ್ಕಬಾಯಿಯವರ ?" ಎಂದು ಆಜ್ಞಾಧಾರಕನಾದ ಹನುಮಂತ ಲಕ್ಷ್ಮಿಯ ಎದುರು ಕೈಜೋಡಿಸಿ ನಿಂತುಕೊಂಡನು.

"ಹನುಮಂತ, ಊರಿಗೆ ಹೋಗಬೇಕು ?"

"ಅ್ಹಾಽ" ಎಂದು ಆಶ್ಚರ್ಯದಿಂದ ಕೇಳಿದ.

"ಹೌದು. ಶಹಪೂರಿಗೆ ಹೋಗಬೇಕು."

"ಅ್ಹಾಽ ?" ಮತ್ತೆ ಆಶ್ಚರ್ಯದಿಂದಲೇ ಮಾತನಾಡಿದ. "ಸಾಹೇಬ ಚಿಕ್ಕಬಾಯಿಯವರ, ಮತ್ತೆ ಮನೆಯಲ್ಲಿ ಹೋಳಿಗೆ !"

"ಯಾವ ಹೋಳಿಗೆ ?"

"ನಮ್ಮ ಸುಂದರಮ್ಮನದು !! ಮೊನ್ನೆ ಹೈದರಾಬಾದಿಗೆ ಕರಕೊಂಡು ಹೋದಾಗ ಕನ್ಯಾ ಪಾಸ್ ! ನಂಬರ ೧ !! ಅಂದು ಬಿಟ್ಟರಂತ ! ಗೋವಿಂದರಾಯರು ಹೇಳಿದರು ! ಶೀನಪ್ಪನವರು ಹೇಳಿದರು ! ಇನ್ನೇನು ಹೋಳಿಗೀನೆ ಹೋಳಿಗಿ. ಸಾಹೇಬ ಚಿಕ್ಕಬಾಯಿಯವರ, ಈ ಹೋಳಿಗಿ ಬಿಟ್ಟು ಹೆಂಗ ಹೋಗಬೇಕು ?"

"ಹನುಮಂತ, ಏನೂ ಚಿಂತೆ ಮಾಡಬೇಡ. ಇದೂ ಒಂದು ಹೋಳಿಗಿ ಕೆಲಸಾನೆ. ಹೋಗಿ ಬಾ."

"ಆಗಲಿ ಸಾಹೇಬ ಚಿಕ್ಕಬಾಯಿಯವರ ! ಏನು ಮಾಡಬೇಕಂದಿರಿ ?"

"ನೋಡು, ಈ ಪತ್ರ ತಗೋ. ಶಹಪೂರಿಗೆ ಹೋಗಿ—ಅಲ್ಲಿ ಶಾಂತಾ ಅವರ ಮನೆ ನೀನು ನೋಡಿರುವಿ—ಅವರ ಕೈಯಲ್ಲಿ ಈ ಪತ್ರ ಕೊಡು."

"ಸಾಹೇಬ ಚಿಕ್ಕ ಬಾಯಿಯವರ, ನಿನ್ನೆ ಒಂದು ಪತ್ರ........"

"ಹೂಂ ! ಹೌದು ಹನುಮಂತ. ನಿನ್ನಿನ ಪತ್ರ ಬರಲಿಕ್ಕೆ ಅಂತ ಇತ್ತು.

ಇಂದಿನ ಪತ್ರ ಅವರನ್ನು ಕರೆದುಕೊಂಡು ಬರಲಿಕ್ಕೇ!"

ಅದೆಷ್ಟು ಲಕ್ಷ್ಮಿಯು ಗಡಿಬಿಡಿ! ಹನುಮಂತ ಊರಿಗೆ. ಹೋದ ಮೇಲೆ ಲಕ್ಷ್ಮಿ ಇದೇ ಮಾತನ್ನೇ ನೂರು ಬಾರಿ ಅಂದುಕೊಳ್ಳುತ್ತಿದ್ದಳು! ಆದರೂ ಅವಳಿಗೆ ಶೀನಪ್ಪನವರ ತ್ವರಿತ ಗತಿಯ ಕಾರಸ್ಥಾನದ ಹೆದರಿಕೆ ಇತ್ತು.

## ೧೫

ಸುತ್ತುಮುತ್ತಲೂ ಪ್ರಶಾಂತವಾದ ವಾತಾವರಣ. ಬೆಳಗಿನ ತಂಗಾಳಿ ಮಂದವಾಗಿ ಬೀಸುತ್ತಿತ್ತು. ಬೆಟ್ಟದ ಓರೆಯಲ್ಲಿರುವ ಹಸಿರು ಅದರಿಂದ ಪುಲಕಿತವಾಗಿ ನಲಿಯುತ್ತಿತ್ತು. ಸಾಗರದ ತೆರೆಗಳಂತೆ ಅವು ಅನಂತವಾಗಿ ಅವ್ಯಾಹತವಾಗಿ ಸಾಗುವಂತೆ ಕಂಗೊಳಿಸುತ್ತಿದ್ದವು. ಈ ಬೆಟ್ಟದ ಹಸಿರನ್ನು ತಿಂದು, ಅದನ್ನು ಸಂಪೂರ್ಣವಾಗಿ ಅಡಗಿಸಿಕೊಂಡು ಅದರಿಂದಲೇ ಮೈಗೊಂಡವೇನೋ ಎಂಬಂತಿರುವ ಹಲವು ಅರಗಿಣಿಗಳು ಮೇಲೆ ಮೇಲೆ ಬೆಟ್ಟದ ತುದಿಯನ್ನು ಮುಟ್ಟಿ, ಬೆಟ್ಟದಾಚೆ ಹಾರಿಹೋಗುತ್ತಿದ್ದವು. ಭೂಲೋಕದಲ್ಲಿರುವ ದಿವ್ಯ ಸಂಪತ್ತಿನ ಸುದ್ದಿಯನ್ನು ಪರಲೋಕಕ್ಕೆ ಮುಟ್ಟಿಸಲು ಹವಣಿಸಿ ಅವು ಹಾರಿ ಹೋಗುತ್ತಿದ್ದವೋ ಏನೋ! ಚೆಲುವಿನ ಆರಾಧಕನಾದ ಮಾನವನೂ ಇಂಥ ನೋಟವನ್ನು ನೋಡಿ ಕಲ್ಪನೆಯ ರೆಕ್ಕೆಪಡೆಯುವನು.

ಇಂಥ ಪ್ರಶಾಂತವಾದ ವಾತಾವರಣದಲ್ಲಿ ಒಮ್ಮೆಲೆ 'ಧಡಮ್' ಎಂದು ಸಪ್ಪಳವಾಯಿತು.

"ಅಯ್ಯೋ! ಅಯ್ಯೋ!!" ಎಂದು ಹನುಮಂತ ಭಾವಿಯ ದಂಡೆಯ ಮೇಲೆ ನಿಂತುಕೊಂಡು ಚೀರಿದ. "ಮುದುಕಪ್ಪ, ಮುದುಕಪ್ಪ! ಬೇಗ ಬಾರೋ! ರಾಯರು ಬಿದ್ದರು! ರಾಯರು ಬಿದ್ದರು!" ಗಾಬರಿಯಿಂದ ಸಂಕಟಪಟ್ಟು ಕೂಗಿಕೊಂಡ.

ಅಷ್ಟರಲ್ಲಿ ಭಾವಿಯಲ್ಲಿ ನೀರನ್ನು ಬಾಯಿಯಿಂದ ಸುರ್ ಎಂದು ಮಾಡುವ ಸಪ್ಪಳವಾಯಿತು. ಹನುಮಂತ ಭಾವಿಯಲ್ಲಿ ಬಾಗಿ ನೋಡಿದ "ಅಯ್ಯೋ!

ಬದುಕಿದೆ ರಾಯರೇ" ಎಂದು ಅವರಿಗೆ ಒದರಿ ಹೇಳಿದ.

"ಏನಾಗಿತ್ತೋ ಹನುಮಂತ ?" ಎಂದು ನೀರಿನಲ್ಲಿಯೇ ಈಜುತ್ತ ವೆಂಕಟೇಶ ಅವರು ಕೇಳಿದರು.

"ಏನಾಗಬೇಕು ? ನನ್ನ ಜೀವನೇ ಹೋಗಿತ್ತು! ಗುಡ್ಡಾ ನೋಡು, ಆ ಗಿಳಿಹಿಂಡು ನೋಡು ಅಂತ ನನಗೆ ಹೇಳತಿದ್ದಿರಿ. ನಾನು ಹುಚ್ಚುಮಂಗ ನಂಗ ನೋಡಕೋತ ನಿಂತೆ! ಯಾರಿಗೆ ಗೊತ್ತು, ನೀವು ಹೀಂಗ ಹಾರತೀರಿ ಅಂತ!........ನಾನು ಹುಚ್ಚನೇ ಆಗಿದ್ದೆ !"

"ನಾನು ಹುಚ್ಚನೇ ಆಗಿದ್ದೆ, ನಿಮ್ಮ ತೋಟ, ಈ ಗಿಡ, ಗುಡ್ಡ ನೋಡಿ! ಅದಕ್ಕೇ ಜಿಗಿದೆ" ನೀರಿನಲ್ಲಿ ಸುರ್‍s ಸುರ್‍s ಎಂದು ವೆಂಕಟೇಶ ಸಪ್ಪಳವನ್ನು ಮಾಡಿದರು. ಆನಂದ ಉನ್ಮಾದದಲ್ಲಿ ನೀರನ್ನು ಥಬಲ್ ಥಬಲ್ ಎಂದು ಬಡೆದರು. "ಹನುಮಂತ ನೀನೂ ಜಿಗಿಯೋ...."

"ಅಯ್ಯೋ ರಾಯರೇ—ಸಾಧ್ಯವಿಲ್ಲ ಸೀತಾರಾಮು !"

"ನೀನು ಹನುಮಂತ, ಜಿಗಿಯಲು ಬರುವದಿಲ್ಲೇನು ?"

"ಜಿಗಿಯುತ್ತೇನೆ. ಆದರೆ.... ?"

"ಆದರೆ ಏನು ?"

"ಈಸಲು ಬರುವದಿಲ್ಲ...."

"ನೀರಿನ ಹನುಮಂತ ನೀನು. ನೀರಿನಲ್ಲಿಯೇ ಇರಬೇಕು. ಬಾ ! ಬಾ! ನಾನು ಹಿಡಿಯುತ್ತೇನೆ ಬಾ"

ಹನುಮಂತನಿಗೆ ಏನೋ ಉತ್ಸಾಹ ಬಂದಿತು. "ರಾಯರೇ, ನಾನೂ ಸ್ವಲ್ಪ ಕಲಿತಿದ್ದೆ ಈಸಲಿಕ್ಕೆ !........ ನಿಮ್ಮ ಜೋಡಿ ನಾನೂ ಬರುತ್ತೇನೆ !" ಹನುಮಂತ ಕಪ್ಪಲಿ ಗಡಗಡೆಯಿಂದ ಕೆಳಗಿಳಿದು ಬಂದನು. ಭಾವಿಯ ಕಟ್ಟುವಿಕೆ ಚೆನ್ನಾಗಿದ್ದು, ನೀರಿನಿಂದ ಮೇಲಿನ ವರೆಗೆ ಹೋಗಲು ಕಲ್ಲಿನ ಸೋಪಾನಗಳಿದ್ದವು. ಹನುಮಂತ ನೀರಿನ ಸಮೀಪದ ಕಲ್ಲಮೇಲೆ ನಿಂತು 'ಸೀತಾರಾಮು! ಸೀತಾರಾಮು !' ಎಂದು ದೇವರಿಗೆ ಕೈಜೋಡಿಸಿ ಸ್ಮರಿಸಹತ್ತಿದನು.

"ಬಾರೋ ಸೀತಾರಾಮು !" ಎಂದು ವೆಂಕಟೇಶ ಅವರು ಅವನ ಕಾಲನ್ನು ಹಿಡಿದು ನೀರಲ್ಲಿ ಜಗ್ಗಿಕೊಂಡರು. ಹನುಮಂತ ಕಾಲನ್ನೇನೋ ಬಡಿಯಹತ್ತಿದ. ಆದರೆ ಜೋರಾಗಿ ಕೂಗಿಕೊಳ್ಳಹತ್ತಿದ. ಅವನಿಗೆ ಅಷ್ಟು

ಹೆದರಿಕೆ! ಎಲ್ಲಾ ಜನರನ್ನು ಬೈಯುತ್ತ ಉದ್ಧಾರ ಮಾಡಿದ! ಅವನು ಒದರಿ ದಷ್ಟು ವೆಂಕಟೇಶ ಅವರು ನಗುತ್ತಿದ್ದರು.

ಈ ಮೋಜನ್ನು ನೋಡಲು ಭಾವಿಯ ದಂಡೆಯ ಮೇಲೆ ಎರಡು ನಾಯಿಗಳು ಬಂದು ನಿಂತು, ತಮ್ಮ ನೀಳವಾದ ನಾಲಗೆಯನ್ನು ತೆರೆದು ಇವರ ಕಡೆಗೇ ನಿಟ್ಟಿಸುತ್ತಿದ್ದವು. ಆ ಎರಡು ನಾಯಿಗಳ ನಡುವೆ ಮುದುಕಪ್ಪನೂ ಬಂದು ನಿಂತನು. ಹನುಮಂತನ ಒದರಾಟವನ್ನು ನೋಡಿ, ಮುದುಕಪ್ಪನೂ ಬಿದ್ದು ಬಿದ್ದು ನಗಹತ್ತಿದನು,

ಭಾವಿಯ ದಂಡೆಯಲ್ಲಿ ಬಂದು ನಿಂತ ಮುದುಕಪ್ಪನನ್ನು ನೋಡಿ, ವೆಂಕಟೇಶ ಅವರಿಗೆ ತಮ್ಮ ಕೆಲಸದ ನೆನಪಾಗಿ, ಈಜುವುದನ್ನು ಬಂದು ಮಾಡಿದರು. ಹನುಮಂತನನ್ನು ದಂಡೆಯ ವರೆಗೆ ತಂದು ಹಚ್ಚಿ, ಮೇಲೆ ಕರೆದುಕೊಂಡು ಹೋಗಿ ಚೇಷ್ಟೆಯಿಂದ ನಗುತ್ತ ಅವನ ಮೈಯನ್ನೆಲ್ಲ ಒರಸಿ, ಅವನಿಗೆ ಉಟ್ಟು ಕೊಳ್ಳಲು ಬಟ್ಟೆಗಳನ್ನು ಕೊಟ್ಟರು. "ಹನುಮಂತ, ಜನರು, ಊರು ಇವನ್ನು ಬಿಟ್ಟು ದೂರ ಬಂದೆವೆಂದರೆ ಈ ರೀತಿಯ ಹುಡುಗತನದ ಉತ್ಸಾಹ ಬರುತ್ತದೆ ನೋಡು. ನಿನಗೆ ತ್ರಾಸ ಕೊಟ್ಟೆನೋ ಏನೋ!"

ಹನುಮಂತ ಆನಂದದಿಂದಲೇ ಅವರ ಮಾತುಗಳನ್ನು ಸ್ವಾಗತಿಸಿದ, "ವೆಂಕಟೇಶ ರಾಯರೇ, ಮನಸ್ಯಾ ಅಂದರೆ ಹೀಗೆ ಇರಬೇಕು ನೋಡ್ರಿ. ಹುಡುಗರಾಗಿ ನಿಶ್ಚಿಂತ ಇರಬೇಕು."

"ತೋಟ ಪಟ್ಟಿ ಎಂದು ಗುಡ್ಡ ಗುಡ್ಡ ತಿರುಗಿ ಬಂದರೆ, ಆ ನಿಶ್ಚಿಂತಬುದ್ಧಿ ಬರತದೆ ನೋಡು........"

"ಬರಿ ತಿರುಗಿದರೇನು? ಹೊಟ್ಟೆಗೂ ಏನಾದರೂ ಬೇಕು. ಏs ಮುದಕಪ್ಪ, ಬಾರೋ ಇಲ್ಲೆ" ದೂರ ನಿಂತ ಮುದುಕಪ್ಪನನ್ನು ಹನುಮಂತ ಕೂಗಿದ. "ನೋಡು ರಾಯರು ಬಂದಾರೆ. ಕೆನಿ ಕೆನಿ ಹಾಲು ತೆಗೆದುಕೊಂಡು ಬಾ. ಒಂದು ಕೊಡಾನೆ ತೆಗೆದುಕೊಂಡು ಬಾ."

"ರಾಯರು ??" ಮುದುಕಪ್ಪ ಸಂಶಯದ ಧ್ವನಿಯಲ್ಲಿ ಮಾತನಾಡುತ್ತ ಕೇಳಿದ.

"ಹೂಂ! ರಾಯರು!" ಎಂದು ಹನುಮಂತ ಜೋರಾಗಿ ಉತ್ತರ ಕೊಟ್ಟ. "ಹೊಸಾ ರಾಯರು!!"

"ಹೊಸಾ ರಾಯರು?" ಮತ್ತೆ ಸಂಶಯದ ಧ್ವನಿಯಲ್ಲಿಯೇ ಮುದುಕಪ್ಪ ಕೇಳಿದ. "ಅಂದರs, ಯಾರು ಅಂದ್ರೀ, ಹನುಮಂತಪ್ಪನವರ?"

"ಅದೆಲ್ಲ ಏನ ಕೇಳತೀ ಮುದುಕಪ್ಪ? ಮುದುಕ ಆದರೂ ಬುದ್ಧಿ ಬರಲಿಲ್ಲ ನೋಡು ನಿನಗ! ಹೇಳಿದ್ದು ಕೇಳಿದರಾಯಿತು! ನಮ್ಮ ಸಾಹೇಬ ಚಿಕ್ಕಬಾಯಿಯವರು ಕಳಿಸಿಕೊಟ್ಟಾರ!"

ಅಧಿಕಾರವಾಣಿಯಿಂದ ಮಾತನಾಡುವ ಹನುಮಂತನ ಕಡೆಗೆ, ಮುದುಕಪ್ಪ ನೋಡಿ "ಹೂಂ! ಹೀಂಗೇನ್ರಿ!" ಎಂದು ಧ್ವನಿ ಎಳೆದನು.

ವೆಂಕಟೇಶ ಅವರು ತಾವಾಗಿಯೇ ಮುಂದಾಗಿ ಮಾತನಾಡಿದರು. "ಮುದುಕಪ್ಪ, ಹಿಂಡಿದ ಕೂಡಲೇ ಹಾಲು ತಂದೀಯಂತೆ!"

"ಕೆನೆಕೆನೆ ಮೊಸರು ಅವಲಕ್ಕೀನೂ ಆಗಬೇಕು!" ಎಂದು ಹನುಮಂತ ಉತ್ಸಾಹದಿಂದ ಕುಣಿಯುತ್ತ ಹೇಳಿದ.

"ಹೂಂ! ಅದೂ ಆಗಲಿ!" ಎಂದು ವೆಂಕಟೇಶ ಮುಗುಳು ನಗೆ ನಗುತ್ತ ನುಡಿದ. "ಮುದುಕಪ್ಪ, ಮೊದಲು ತೋಟ ನೋಡಿಕೊಂಡು ಬರೋಣ ಬಾ."

ಮುದುಕಪ್ಪ, ವೆಂಕಟೇಶ, ಹನುಮಂತ ತೋಟದಲ್ಲಿ ತಿರುಗಾಡಿದರು. ಒಂದು ಕಡೆಗೆ ನಾಲ್ಕು ಯಕರೆ ಬಾಳೆಯ ಬನವಿತ್ತು. ಸೂರ್ಯನ ಕಿರಣಗಳ ಜೊತೆಗೆ ಬಾಳೆಯ ಎಳೆ ಎಲೆಗಳು ಲಾಸ್ಯವಾಡುತ್ತಿದ್ದವು. ಹಣ್ಣಿನ ಗೊಂಚಲುಗಳು ನಮ್ರವಾಗಿ ನೆಲವೆಣ್ಣಿಗೆ ಬಾಗಿ ವಂದಿಸುತ್ತಿದ್ದವು. ಮತ್ತೊಂದೆಡೆಗೆ ಆರು ಯಕರೆ ವೀಳ್ಯದೆಲೆಯ ತೋಟವಿತ್ತು. ಉದ್ದವಾಗಿ, ಸಾಲಾಗಿ ಬಳ್ಳಿಗಳು ನಿಂತಿದ್ದವು. ಸಾವಿರಾರು ಸ್ತ್ರೀಯರು ನರ್ತಿಸಲು ಆಭರಣಗಳಿಂದ ಭೂಷಿತರಾಗಿ ಸಜ್ಜಾಗಿ ನಿಂತಂತೆ ಆ ಬಳ್ಳಿಗಳು ಶೋಭಿಸುತ್ತಿದ್ದವು. ಹಲವು ಕಡೆಗೆ ಕಾಯಿಪಲ್ಲೆಯ ಗಿಡಗಳನ್ನು ನೆಟ್ಟಿದ್ದರು. ಎಲ್ಲ ಕಡೆಗೂ ಹಾಯ್ದು ಬರುವಾಗ ವೆಂಕಟೇಶ ಅವರಿಗೆ ಅತಿ ಹರ್ಷವಾಯಿತು. ಕಷ್ಟಪಟ್ಟು ಬಿತ್ತಿ ಬೆಳೆದರೆ, ಭೂಮಿ ಎಂಥ ಉತ್ತಮ ಫಲ ಕೊಡಬಹುದಲ್ಲಾ! ಎಂದು ಅವರ ಒಳಮನಸ್ಸು ಉದ್ಗಾರ ತೆಗೆಯುತ್ತಿತ್ತು.

"ಬಹಳ ಚೆನ್ನಾಗಿದೆ ತೋಟ!" ಎಂದು ಆನಂದದಿಂದ ವೆಂಕಟೇಶ ಮುದುಕಪ್ಪನಿಗೆ ಹೇಳಿದರು.

"ನನ್ನದೇನಿದೆ? ಎಲ್ಲಾ ರಾಯರ ಪ್ರಯತ್ನ! ಎರಡು ಭಾವಿ ತೋಡಿಸಿ ಕೊಟ್ಟರೂ ಅಂತ, ಇಷ್ಟು ತೋಟ ಮಾಡೂದಾಯ್ತು!"

"ವೆಂಕಟೇಶರಾಯ್ರರ, ಈ ಮುದುಕಪ್ಪಗೂ ಏನು ತಿಳಿತಿತ್ತು? ಎಲ್ಲಾ ನಮ್ಮ ಶೀನಪ್ಪರಾಯರ ಮಾಡಿಸಿಕೊಟ್ಟರು." ಹನುಮಂತ ತನಗೆ ಗೊತ್ತಿದ್ದನ್ನು ಹೇಳಿದ.

"ಹೌದ್ರಿ ಯಪಾ, ಅದೂ ಖರೆ ಅನಬೇಕ್ರಿ. ಅಲ್ಲೆ ನೋಡ್ರಿ. ಒಂದು ಮನೆ ಸಹ ಹಾಕಿಸಿ ಕೊಟ್ಟಾರ್ರಿ." ಮುದುಕಪ್ಪ ತನ್ನ ಮನೆಯ ಕಡೆಗೆ ಬೊಟ್ಟುಮಾಡಿ ತೋರಿಸಿದ.

ಎಲ್ಲರೂ ಕೂಡಿ ಆ ಮನೆಯ ಕಡೆಗೆ ಹೋದರು. ಒಳಗೆ ಕಟ್ಟೆಯಮೇಲೆ ಒಂದು ಗುಡಾರ ಹಾಸಿತ್ತು. ಅಲ್ಲಿ ಕುಳಿತು ವೆಂಕಟೇಶ ಸುತ್ತಲೂ ತನ್ನ ಕಣ್ಣು ಹೊರಳಿಸಿ ನೋಡುತ್ತಿದ್ದರು. ಆ ಮನೆಗೆ ಹೆಂಟೆಯ ಗೋಡೆಗಳು ಇರಲಿಲ್ಲ; ಆದರೆ ಕಲ್ಲಿನ ಗೋಡೆಗಳೇ ಇದ್ದವು. ಮೇಲೆ ಮಂಗಳೂರು ಹಂಚಿನ ಛಪ್ಪರವಿತ್ತು.

ಹನುಮಂತ ಹೇಳಿದ "ವೆಂಕಟೇಶರಾಯರ, ನಾವು ಹಿಂದಕ್ಕೆ ಬಂದಾಗ ಇದು ಗುಡಿಸಲು ಇತ್ತು. ಈಗ............?"

"ಈಗೇನಾಗಿದೆ?" ವೆಂಕಟೇಶ ಕೇಳಿದರು.

"ಅರಮನೆಯಾಗಿದೆ! ಹ್ಹಾ! ನಾನೇ ಮರೆತಿದ್ದೆನೋ ಏನೋ! ಸೀತಾರಾಮ! ಸೀತಾರಾಮ!"

ಮುದುಕಪ್ಪ ತಾನೇ ಹೇಳಿದ "ಹೌದ್ರಿ ಯಪಾ. ಹನುಮಂತಪ್ಪನವರು ಅಂದದ್ದು ಖರೇನ. ನಮ್ಮ ಶೀನಪ್ಪನವರು ಮೊನ್ನೆ ಮೊನ್ನೆ ಬದಲು ಮಾಡಿಸ್ಯಾರ."

"ನೋಡು ಹನುಮಂತ, ನಿನಗೂ ಒಂದು ಇಂಥಾ ಮನೆ ಬೇಕು ಏನು?" ವೆಂಕಟೇಶ ಕೇಳಿದರು.

ಹನುಮಂತ ಒಮ್ಮೆಲೆ ಬೇಡಬೇಡವೆಂದು ಕೈಸನ್ನೆ ಮಾಡಿದ. "ನಮಗೆ ಯಾರಾದರೂ ಹೊಟ್ಟೆಗೆ ಹಾಕಿ ಮನೆಯಲ್ಲಿ ಇಟ್ಟುಕೊಂಡರಾಯಿತು! ಮನೆ ಬೇಡ, ಏನೂ ಬೇಡ! ಸೇವಾ ಮಾಡಿಸಿಕೊಳ್ರಿ........"

"ಖರೆ ರಾಮನ ಶಿಷ್ಯ ನೋಡು ನೀನು!" ನಗುತ್ತ ವೆಂಕಟೇಶ ಹೇಳಿ

ದರು.

ಮುದುಕಪ್ಪನು ತಂದುಕೊಟ್ಟ ಹಾಲು ಕುಡಿಯುತ್ತ ಇಬ್ಬರೂ ನಕ್ಕರು
ಬಾಗಿಲದ ಆಚೆ ಪರ್ವತದ ಸಾಲುಗಳು ಕಾಣುತ್ತಿದ್ದವು. ಅವುಗಳನ್ನು
ನೋಡುತ್ತ ವೆಂಕಟೇಶ ಕೇಳಿದರು "ಮುದುಕಪ್ಪ, ಈ ಪರ್ವತ ಯಾವು
ಯಾವ ಪರ್ವತ ಅನ್ನುತ್ತಾರೆ?"

"ಯಪ್ಪಾ, ನೋಡ್ರಿ. ಇವು ಬಂಗಾರದ ಪರ್ವತ. ಈ ಪರ್ವತದ ಕೆಳ
ಬಂಗಾರ ಐತಿ. ಅಗೋ ಅಲ್ಲಿ ನೋಡ್ರಿ........" ಮುದುಕಪ್ಪ ಬಾಗಿಲು ಬ
ನಿಂತು, ಪರ್ವತದ ಮೇಲೆ ಕಾಣುವ ದೇವಾಲಯದ ಕಡೆಗೆ ಬೊಟ್ಟು ಮಾ
ತೋರಿಸುತ್ತಿದ್ದ. ದೂರದಿಂದ ದೇವಾಲಯದ ಗೋಪುರ ಕಾಣುತ್ತಿತ್ತು. ದೇವಾ
ಲಯದ ಮುಂದಿನ ಮಂಟಪದ ಹಾಳಾದಚಿಹ್ನಗಳು ಕಂಡುಬರುತ್ತಿದ್ದವು. ಮು
ಕಪ್ಪ ಹೇಳಿದ "ಅದು ವೀರಭದ್ರ ದೇವರ ಗುಡಿ! ಭಂಗಾರ ಕೆಳಗಿಟಕೊಂಡ
ದೇವರು ಕುಂತಕೊಂಡು ಬಿಟ್ಟಾರ. ಯಾರಿಗೂ ಕೊಡೂದಿಲ್ಲ...."

"ಮುದುಕಪ್ಪ ಯಾರಿಗೂ ಕೊಡೂದಿಲ್ಲ ಎಂದು ಹೆಂಗ ಹೇಳುವಿ?
ವೆಂಕಟೇಶ ಕೇಳಿದರು.

"ಯಪ್ಪಾ, ಆ ಕಥಿ ಏನು ಹೇಳಲಿ ನಾನು? ಜಾಗಿರದಾರ ರಾಯರಿ
ಎಲ್ಲಾ ಗೊತ್ತೈತಿ. ಒಮ್ಮೆ ಒಂದು ಕಂಪೆನಿ ಸರಕಾರ ಬಂದಿತ್ತು. ಭೂಮಿ
ಒಡೆದು ಒಳಗೆ ಹೋದ್ರು. ಏನು ಹೇಳಲಿ ನಾನು, ಅವರ ಫಜೀತಿ? ಬಂಗಾ
ಸಿಕ್ಕಿತೂ ಅಂತ ಅವರು ಆನಂದಪಡತಿದ್ರು. ಎಲ್ಲಾ ಬಂಗಾರ ದೂರ ಒಯ್ತೀ
ಅಂತ ಅನತಿದ್ದರು. ಅಷ್ಟರೊಳಗ........ಭೂಮಿ ಎಲ್ಲಾ ಕುಸದು ಬಿದ್ದು, ಎಲ್
ಜನ ಒಳಗೇ ಸತ್ತುಹೋಯ್ತು! ಅವರ ಮಿಶೀನು ಎಲ್ಲಾ ನಾಶ ಆಗಿ ಬಿಟ್ಟ
ತಿರುಗಿ ಅವರು ಹೆದರಿ ಪಲಾಯನ ಮಾಡಿದ್ರೂ. ಒಮ್ಮೆ ಹೊರಳಿ ಸಹ ನೋ
ಲಿಲ್ರಿ. ನಮ್ಮ ದೇವ್ರೂ ಇಷ್ಟು ಭದ್ರವಾಗಿ ಇದ್ದಾನ್ರಿ. ಇಲ್ಲಿ ಬಂಗಾರ ಹೊರ
ಬಿಡಾಣೇ ಇಲ್ರಿ. ಎಲ್ಲಾನು ಇಲ್ಲೆ ಇಡತಾನ!"

"ಮುದಕಪ್ಪ, ಅಂದರ ಭಂಗಾರ ಎಲ್ಲೆ ಹೋಗುದಿತ್ತು?"

ವೆಂಕಟೇಶ ಅವರು ಕೇಳಿದ ಪ್ರಶ್ನೆಗೆ, ಮುದುಕಪ್ಪ ಹೇಳಿದ, "ಎಲ್ಲಿ
ಅಂದರ್ರಿ? ಯಪ್ಪಾ, ಸೀಮಿ ದಾಟಿ ಹೋಗತ್ತಿತ್ತು. ವಿಲಾಯತಿಗೆ ಹೋಗ
ತ್ತಂತ ಆ ಬಂಗಾರ! ನಮ್ಮ ವೀರಭದ್ರಗ ಎಲ್ಲಾ ಗೊತ್ತಿತ್ತು. ಅಂತs ಅವರದ

ಫಜೀತಿ ಮಾಡಿದ!"

ಮುದುಕಪ್ಪನ ದೇಶಾಭಿಮಾನವನ್ನು ನೋಡಿ ವೆಂಕಟೇಶ ಮೆಚ್ಚಿದರು. ಆವನ ದೇಶಾಭಿಮಾನವನ್ನು ಹೊಗಳುತ್ತ ವೆಂಕಟೇಶ ಹೇಳಿದರು "ಮುದುಕಪ್ಪ ನಮ್ಮ ದುಡ್ಡು ನಮ್ಮ ದೇಶಕ್ಕs ಉಳಿಬೇಕು ನೋಡು. ಅದಕ್ಕs ಗಾಂಧೀಜಿಯ ವರಿಗೆ ಸಹಾಯ ಮಾಡಬೇಕು."

"ಯಾರು ಆ ಗಾಂಜೀ?" ಮುದುಕಪ್ಪ ಆಶ್ಚರ್ಯದಿಂದ ಕೇಳಿದ.

"ಗಾಂಜೀ ಅಲ್ಲೋ! ಗಾಂಧೀಜಿ!! ಗಾಂಧೀಜಿಯವರ ಹೆಸರು ಗೊತ್ತಿಲ್ಲ??" ವೆಂಕಟೇಶ ಅವರು ಎರಡು ಮೂರು ಸಲ ಕೇಳಿದರು. ಎರಡು ಮೂರು ಸಲ ಇಲ್ಲವೆಂದೇ ಮುದುಕಪ್ಪ ಉತ್ತರಿಸಿದ. ವೆಂಕಟೇಶ ಅವರಿಗೆ ಎಂದೂ ಎನಿಸದಷ್ಟು ಅಚ್ಚರಿಯಾಯಿತು. "ಮಹಾತ್ಮಾ ಗಾಂಧೀಜಿ!! ಅವರು ದೇಶಕ್ಕಾಗಿ ದುಡಿಯುತ್ತಿದ್ದಾರೆ! ಮುದುಕಪ್ಪ, ಆಗಲೇ ಹೇಳಿದಿ ಯಲ್ಲಾ ನೀನು, ಕಂಪೆನಿ ಸರಕಾರ ಅಂತ! ಅಂಥಾ ಸರಕಾರ ನಮ್ಮನ್ನು ಆಳ ಲಿಕ್ಕೆ ಹತ್ತಿದೆ. ನಮಗೆ ಬೇಡಿ ಹಾಕಿದೆ!"

"ಬೇಡಿ!!"

"ಗಾಬರಿಯಾಗಬೇಡ ಮುದುಕಪ್ಪ! ಆ ಬೇಡಿ ನಮಗೆ ಕಾಣಿಸುವದಿಲ್ಲ. ನಾವು ಗುಲಾಮರು! ಆ ಕಂಪನಿ ಸರಕಾರದ ಕೈಕೆಳಗೆ ನಾವು ಇದ್ದೇವೆ. ತಕ್ಕಡಿ ತಗೊಂಡು ವ್ಯಾಪಾರಕ್ಕೆ ಬಂದವರು. ಇಲ್ಲೆ ಠಾಣೆ ಹಾಕಿಬಿಟ್ಟರು. ಮುದುಕಪ್ಪ, ನಮ್ಮ ಮಂದಿ ಹುಚ್ಚ ಮಂದಿ, ತಮ್ಮತಮ್ಮೊಳಗೆ ಜಗಳಾಡಿ, ತಮ್ಮ ರಾಜ್ಯ ಅವ ರಿಗೆ ಕೊಟ್ಟುಬಿಟ್ಟರು. ಅವರು ಇಲ್ಲೆ ಇರಲಿಕ್ಕೆ ಸಹಾಯ ಮಾಡಿದರು. ಎಲ್ಲಾ ಭಂಗಾರ ಕೊಟ್ಟುಬಿಟ್ಟರು. ನೋಡು ಮುದುಕಪ್ಪ, ಅವರ ಕಬ್ಬಿಣ ತಕ್ಕಡಿ, ಭಂಗಾರ ತಕ್ಕಡಿ ಆಯಿತು. ಅವರು ನಮ್ಮ ಭಂಗಾರ ಒಯ್ದು, ತಮ್ಮ ದೇಶ ದಾಗ ಭಂಗಾರದ ಅರಮನೆ ಕಟ್ಟಿಸಿದರು. ನೀನು ಹೇಳಿದಿಯಲ್ಲಾ, ಅಂಥ ವೀರಭದ್ರ ದೇವರ ಅವತಾರ ನಮ್ಮಲ್ಲೆ ಆಗಲಿಲ್ಲಾ. ಮಹಾತ್ಮಾ ಗಾಂಧೀಜಿ ಅಂದರೆ, ಈ ವೀರಭದ್ರ ದೇವರು ಇದ್ದಹಾಗೆ!! ನಮ್ಮ ದೇಶದ ಭಂಗಾರ ಅವ ರಿಗೆ ಕೊಡುವದಿಲ್ಲ ಅನ್ನುತ್ತಾರೆ!........ ಅದಕ್ಕೆ ಅವರು ಏನು ಮಾಡಿದ್ದಾರೆ ಗೊತ್ತೇನು ನಿನಗೆ? ಎಲ್ಲರೂ ಮನೆಯಲ್ಲಿ ನೂಲಬೇಕು, ತಮ್ಮ ಬಟ್ಟೆ ನೆಯ್ದು ಕೊಳ್ಳಬೇಕು, ಆ ಖಾದಿ ಬಟ್ಟೆ ತಾವು ತೊಟ್ಟುಕೊಳ್ಳಬೇಕು! ಮಹಾತ್ಮಾ

ಗಾಂಧೀಜಿ ಹೇಳುತ್ತಾರೆ— 'ರಾಟೆಯ ತಿರುಗಿಸಿರಿ! ಸ್ವಾತಂತ್ರ್ಯವ ದೊರ
ಸಿರಿ' ಎಂದು!"

'ಆ್ಹ....' ಎಂದು ವಿಸ್ತಾರವಾಗಿ ಬಾಯ್ದೆರೆದು ಹನುಮಂತ ಆಕಳಿಸಿದ
ವೆಂಕಟೇಶ ಅವರ ಭಾಷಣದ ಉತ್ತಮ ವಿಮರ್ಶೆಯ ಚಿಹ್ನವಾಗಿ ಹನುಮಂತ
ಆಕಳಿಕೆಯಿತ್ತು.

"ಏಕೆ ಹನುಮಂತ, ಬೇಸರಿಕೆ ಬಂದಿತೇನು?" ವೆಂಕಟೇಶ ಹನುಮ
ತನ ಕಡೆಗೆ ದೃಷ್ಟಿ ಹೊರಳಿಸಿ ಕೇಳಿದ.

"ಏನೂ ಇಲ್ಲ, ವೆಂಕಟೇಶರಾಯರೇ. ಬಿಸಿಲು ಏರುತ್ತ ಬಂದಿತು
ನಮ್ಮ ಊಟ! ಇಲ್ಲಿಯೂ ಇಲ್ಲ! ಅಲ್ಲಿಯೂ ಇಲ್ಲ! ಬೇಗನೆ ಕೆಲಸ ಮುಗಿ
ಹೋಗೋಣ ಎಂದೆ."

ಹನುಮಂತನ ಮಾತಿನರೀತಿಯನ್ನು ನೋಡಿ, ವೆಂಕಟೇಶ ತಮ್ಮ ಆವೇ
ವನ್ನು ತಡೆದುಕೊಂಡರು. ಆದರೆ ಇಷ್ಟು ಮಾತ್ರ ಅವರಿಗೆ ಆ ದಿನ ಅನಿಸಿತು
ಜನರಲ್ಲಿರುವ ಅಜ್ಞಾನವನ್ನು ಹೋಗಲಾಡಿಸಿ, ದೇಶಾಭಿಮಾನವನ್ನು ಹುಟ್ಟಿ
ಸಲು ಹೊಸ ಕ್ಷೇತ್ರ ದೊರೆತಿದೆಯೆಂದು! ಆ ಭಾವನೆ ಅವರಿಗೆ ಅಗಣಿ
ಆನಂದವನ್ನು ನೀಡಿತು.

ಮನಸ್ಸಿನಲ್ಲಿ ತೃಪ್ತಿಪಟ್ಟುಕೊಂಡು, ಒಂದು ಕ್ಷಣ ವೆಂಕಟೇಶ ಅವರ
ಸುಮ್ಮನೆ ಕುಳಿತರು. ತರುವಾಯ ತಮ್ಮ ಕಾರ್ಯವನ್ನು ನೆನೆದು ಮುದುಕಪ್ಪ
ನಿಗೆ ಕೇಳಿದರು "ಮುದುಕಪ್ಪ, ಈ ತೋಟದ ಲಾವಣಿ ಹಣ ರೂಪಾಯಿ ೫೦
ನನ್ನ ಕಡೆಗೇ ಕೊಡು. ಅದಕ್ಕಾಗಿ ಈ ದಿನ ಬೆಳಿಗ್ಗೆ ಇಲ್ಲಿಗೆ ಬಂದದ್ದು."

"ಹೌದು ಮುದುಕಪ್ಪ, ಅದಕ್ಕ ಸಾಹೇಬ ಚಿಕ್ಕ ಬಾಯಿಯವರ
ನಮ್ಮನ್ನ ಇಲ್ಲೆ ಕಳಿಸಿದರು." ಹನುಮಂತ ತನ್ನ ಧ್ವನಿ ಕೂಡಿಸಿದ. "ಈ
ರಾಯರದು ಗುರುತೂ ನಿನಗಾಯಿತು. ತೋಟ ನೋಡಿದ ಹಾಗೂ ಆಯಿತು
ನೋಡು ಮುದುಕಪ್ಪ, ಪ್ರತಿವರ್ಷ ಈ ರಾಯರೇ ಬರತಾರೆ ವಸೂಲಿಗೆ!"

ಮುದುಕಪ್ಪ ತನ್ನ ಗೊಂಗಡಿಯ ಮೇಲೆ ಕುಳಿತು. ಸ್ವಲ್ಪ ಸಮಯ ಹನು
ಮಂತ ಮತ್ತು ವೆಂಕಟೇಶ ಅವರ ಕಡೆಗೆ ಮಿಕಿಮಿಕಿ ನೋಡಿದ. ಏನೊ
ವಿಚಾರಿಸುತ್ತಿರುವವನಂತೆ ತನ್ನ ತಲೆಯನ್ನು ತುರಿಸಿಕೊಂಡ, ಚಿಲುಮೆಯನ್ನು
ಹೊತ್ತಿಸಿ, ಒಂದು ಝುರಿಕೆಯನ್ನು ಎಳೆದುಕೊಂಡ. ಮುದುಕಪ್ಪನ ವಿವಿ

ನಡತೆಯನ್ನು ನೋಡಿ, ವೆಂಕಟೇಶ ಅವರು ತಾವಾಗಿಯೆ ಕೇಳಿದರು—" ಯಾಕೆ ಮುದುಕಪ್ಪ.... ? ಮಾತೇ ಆಡವೊಲ್ಲಿ ? " ಎಂದು.

" ರೂಪಾಯಿ ಏನೋ ಕೊಡಬಹುದು. ಆದರs.... ? " ಎಂದು ಸಂಶಯದ ಧ್ವನಿ ಎಳೆದ ಮುದುಕಪ್ಪ.

" ಮುದುಕಪ್ಪ, ಏನು ಸಂಶಯು ನಿನಗೆ? ನಾನೇನು ಜಾಗಿರದಾರ ವಾಡೆ ಬಿಟ್ಟು ಹೊರಗಿನವನು ಅಲ್ಲ. ಕೇಳು ಬೇಕಾದರೆ ಹನುಮಂತನಿಗೆ—"

" ಹೌದು ಮುದುಕಪ್ಪ, ನಮ್ಮ ಸಾಹೇಬ ಚಿಕ್ಕಬಾಯಿಯವರ ವಸೂಲಿ ಎಲ್ಲ ಇವರೇ ಇನ್ನು ಮಾಡವವರು ! "

" ಹನುಮಪ್ಪನವರ, ನಿಮ್ಮ ಸಾಕ್ಷಿ ನಾನು ಒಪ್ಪಿಕೋತೀನಿ. ಆದರs....!" ಸ್ವಲ್ಪ ತಡೆದು ಮುದುಕಪ್ಪ ಹೇಳಿದ, " ನಾನು ಶೀನಪ್ಪನವರ್ನ ಕೇಳಬೇಕು. "

ಮುದುಕಪ್ಪನ ಮಾತನ್ನು ಕೇಳಿ, ವೆಂಕಟೇಶ ಹೇಳಿದರು " ಶೀನಪ್ಪನವರನ್ನು ಕೇಳಿದ ಮೇಲೆಯೆ ನಾವು ಇಲ್ಲಿ ಬಂದದ್ದು ! "

" ಯಪಾ, ನಿಮ್ಮ ಮಾತೂ ಸತ್ಯ ! ನನ್ನ ಮಾತೂ ಸತ್ಯ ! ಅವರು ನನ್ನ ಮುಂದೆ ಹೇಳಲಿಲ್ಲಾ ಅಂದರs, ನಾವು ಹೆಂಗ ಲಾವಣಿ ಕೊಡಲಿಕ್ಕೆ ಬರತsದ ? ನೀವೇ ಹೇಳ್ರಿ. ಏನಾದರೂ ಅದು ರೂಪಾಯಿ ವಿಷಯ ! ಮೇಲಾಗಿ ಶೀನಪ್ಪನವರು ನನಗ ಈ ತೋಟ ಕೊಟ್ಟದ್ದು. ಮೊದಲು ನಾನು ಇನ್ನೊಂದು ತೋಟದೊಳಗ ಇರುತ್ತಿದ್ದೆ. "

" ಹೌದು, ಹೌದು ! ನನಗ ಗೊತ್ತಿಲ್ಲೇನು ಮುದುಕಪ್ಪಾ ? ಆಗ ನಿನ್ನ ಹತ್ತರ ಏನೂ ಇರತಿದ್ದಿಲ್ಲ. " ಹನುಮಪ್ಪ ನಡುವೆ ಬಾಯಿ ಹಾಕಿದ.

" ಹಾಗಾದರೆ ಆಗ ಏನು ಮಾಡುತ್ತಿದ್ದ ? " ವೆಂಕಟೇಶ ಅವರು ಹಿಂದಿನ ಸಂದರ್ಭವನ್ನು ತಿಳಿದುಕೊಳ್ಳಲು ಕೇಳಿದರು.

ಹನುಮಂತ ಹೇಳಿದ " ಹೀಗೆಯೆ ಭಿಕಾರಿ ಆಗಿದ್ದ. ಹೊಟ್ಟೆ ತುಂಬಿಕೊಳ್ಳಲು ಏನಾದರೂ ಮಾಡುತ್ತಿದ್ದ........... ನಮ್ಮ ನಾರಾಯಣರಾಯರ ಕಡೆಗೆ ಎಷ್ಟೋ ಸಲ ಬಂದಾನೆ ಇವನು ! "

ತನ್ನ ಹಳೆಯ ಕತೆಯನ್ನು, ಶೀನಪ್ಪನವರಿಗೆ ಸಹಾಯ ಮಾಡಿದ ಹಲವು ದುಷ್ಕೃತಿಗಳನ್ನು ಹನುಮಂತ ಎಲ್ಲಿ ಹೇಳುವನೋ ಎಂದು ಮುದುಕಪ್ಪನಿಗೆ ಸಂಶಯ ಬಂದಿತು. ಆದ್ದರಿಂದ ಮುದುಕಪ್ಪ ತಾನೇ ಮಾತು ಮುಂದುವರಿಸಿ

ಹೇಳಿದ " ಯಪ್ಪಾ, ನಮ್ಮನ್ನು ಉದ್ಧಾರಮಾಡಿದವರು ಶೀನಪ್ಪನವರೇ ನೋಡ್ರಿ ಈಟೆಲ್ಲ ಸಹಾಯ ಮಾಡಿದವರು ಅವರೇ. ಅದಕೇ ನಾನು ಹೇಳಿದೆನಲ್ರಿ ಅವರನ್ನು ಕೇಳಿ ಮುಂದಿನ ಕೆಲಸ."

" ಅವರನ್ನು ಕೇಳೀಯಂತೆ ಆ ಮೇಲೆ ! ನೋಡು, ತೋಟ ಜಾಗಿರದಾ ರರದು ಅದೆ. ಅದರಲ್ಲೂ ನಾರಾಯಣರಾವ ಜಾಗಿರದಾರ ಇವರದು ಅ ಅವರ ಪೈಕಿ ನಾವು ಬಂದೇವೆ ಅನ್ನುವುದು ನಿನಗೆ ಖಾತ್ರಿ ಆಗಿದೆ. ಅಂ ಮೇಲೆ ? "

" ಯಪ್ಪಾ, ತೋಟ ನಾರಾಯಣರಾವ ಜಾಗಿರದಾರರದು ಅಂತ ಯಾ ಹೇಳಿದ್ರು ? ಇದು ಶೀನಪ್ಪನವರದು! ಎರಡು ವರ್ಷ ಆದವು!" ಮ ಯನ್ನು ಸರಿಗೊಳಿಸುತ್ತ, ಎದೆ ಸೆಟೆಸಿ ಕಂಬಕ್ಕೆ ಆತುಕೊಂಡು ಮುದುಕಪ್ಪ ಹೇಳಿದ.

" ಏ ಏ ಏ! ಏನು ಮಾತನಾಡತಿದೋ ಮುದುಕಪ್ಪ? ಶೀನಪ್ಪನದ ಅಂತ ಶೀನಪ್ಪನದು ! ಯಾರು ಹೇಳತಾರ ಹೇಳ್ಲಿ. ಜಾಗಿರದಾರ ತೋ ಇದು !" ಹನುಮಂತ ರಭಸದಿಂದ ಭರಭರನೆ ಮಾತನಾಡಿದ.

" ಯಾರು ಯಾಕ ಹೇಳಬೇಕು ? ನೀವು ಹೋಗಿ ಕಾಗದ ಪತ್ರ ನೋಡಿ, ಚೌಕಶಿ ಮಾಡ್ರಿ ಅಂದೆ! ಮನೆಯಲ್ಲಿ ಕೂತಿರಿ! ಜಾಗಿರದಾರರು ನಿಮಗೇನು ಗೊತ್ತು ? "

ಮುದುಕಪ್ಪನ ಮಾತಿನ ರೀತಿ ವೆಂಕಟೇಶ ಅವರನ್ನು ದಿಗಿಲುಗೊಳಿಸಿತು ಈ ವ್ಯವಹಾರದಲ್ಲಿ ಏನೋ ಗದ್ದಲವಿದೆಯೆಂದು ಅವರಿಗೆ ನಿಶ್ಚಿತವಾಯಿತು ಅಂತೆಯೆ ಅವರು ಹೆಚ್ಚಿಗೆ ಮಾತನಾಡಲು ಬಯಸಲಿಲ್ಲ. ಮನೆಯಲ್ಲಿ ಎ ವನ್ನೂ ಕೇಳಿ ತಿಳಿದುಕೊಳ್ಳಬೇಕೆಂದು ವಿಚಾರಿಸಿ, ಅವರು ಅಲ್ಲಿಂದ ಎದ್ದರು ಬೆಳಗಿನಲ್ಲಿ ಬಾವಿಯಲ್ಲಿ ಈಜುವಾಗ, ಮನಸ್ಸು ಎಷ್ಟು ಹಗುರವಾಗಿತ್ತು. ಬಾಲ ರಂತೆ ಸ್ವತಂತ್ರವಾದ ಸ್ವಚ್ಛಂದವಾದ ಮನಸ್ಸಿತ್ತು ! ಆದರೆ ಈಗ ತಿರುಗಿ ಕ ಸಾಪೂರಿಗೆ ಹೋಗುವಾಗ ಅದೆಷ್ಟು ಬದಲಾವಣೆ ! ಒಬ್ಬ ಕ್ಷುಲ್ಲಕ ರೈತನಾ ಮುದುಕಪ್ಪನು ಏನೇನೋ ಮಾತನಾಡಿದ್ದರಿಂದ ಆವರ ಮನಸ್ಸು ಚಿಂತೆಯಿ ದೊಡಗೂಡಿತ್ತು.

ತೋಟದಿಂದ ಕಳಸಾಪೂರವನ್ನು ಮುಟ್ಟಬೇಕಾದರೆ ಮೂರು ಮೈಲುದ್ದ ದಾರಿ, ಹನುಮಂತ ಮತ್ತು ವೆಂಕಟೇಶ ಅವರು ಏರಿದ ಬೈಲು ಗಾಡಿ ಗುಡ್ಡದ ಓರೆಯನ್ನಿಳಿದು ಓಡುತ್ತಿತ್ತು. ಬಿಸಿಲೇರುತ್ತಿದ್ದುದರಿಂದ ಸೆಕೆಯು ಹೆಚ್ಚಾಗಿತ್ತು. ಹನುಮಂತ ಉಶ್ಯೆಂದು ಉಸಿರ್ಗರೆಯುತ್ತಿದ್ದ. ಆದರೆ ಬೈಲುಗಾಡಿಯಲ್ಲಿ ಕುಳಿತ ವೆಂಕಟೇಶ ಏನೋ ಲೆಖ್ಖಹಾಕುತ್ತಿದ್ದರು. ಉಸಿರ್ಗರೆಯುವ ಹನುಮಂತನ ಕಡೆಗೆ ಅವರ ಲಕ್ಷ್ಯವಿರಲಿಲ್ಲ. ಬಂಡೆಯಂತೆ ಅವರ ಮನವೂ ಓಡಾಡುತ್ತಿತ್ತು. ಕಳಸಾಪೂರದಲ್ಲಿದ್ದು ಏನೇನು ಮಾಡಬೇಕು? ತನಗೆ ಬರುವ ಹಣವೆಷ್ಟು? ತಾನು ಹೇಗೆ ಖರ್ಚು ಮಾಡಬೇಕು? ನಾರಾಯಣರಾವ ಜಾಗಿರದಾರರ ಆಸ್ತಿಯೆಷ್ಟು? ಆ ಹಣವನ್ನು ಹೇಗೆ ವಸೂಲಿ ಮಾಡಬೇಕು? ಈ ವಿಚಾರದ ಜೊತೆಗೇ 'ಮುದುಕಪ್ಪ ಹೀಗೇಕೆ ಅಂದನು?' ಎಂದು ತಮ್ಮಷ್ಟಕ್ಕೆ ತಾವೇ ಯೋಚಿಸಿದರು. ಲಕ್ಷ್ಮಿ ಸ್ಪಷ್ಟವಾಗಿ ಎಲ್ಲವನ್ನೂ ಹೇಳಿದ್ದಳು. ಇದಲ್ಲದೆ ಇನ್ನೊಂದು ತೋಟಕ್ಕೂ ಹೋಗಲು ಅವಳು ಹೇಳಿದ್ದಳು. ಅಲ್ಲಿಗಿಷ್ಟು ಹೋಗಲಿಲ್ಲ ಅದೇ ನಮ್ಮ ಪುಣ್ಯ ಎಂದು ವೆಂಕಟೇಶ ಭಾವಿಸಿದರು. ಆಗಲಿ ಮನೆಗೆ ಹೋಗಿ ಎಲ್ಲವನ್ನು ಲಕ್ಷ್ಮಿಗೆ ಕೇಳಬೇಕು. ಮತ್ತು ತಾವು ಅಧಿಕಾರದಿಂದ ಎಲ್ಲ ಕಡೆಗೂ ಓಡಾಡಬೇಕಾದರೆ ತಮಗೆ ಒಂದು 'ಮುಕ್ತೆದಾರಿ' ಪತ್ರವೂ ಬೇಕೆಂದು ಅವರು ಯೋಚಿಸಿದರು. ಇಲ್ಲವಾದರೆ ತಮಗೆ ಕೆಲಸ ಮಾಡಲು ಸಾಧ್ಯವಿಲ್ಲವೆಂದು ಅವರಿಗೆ ಮುದುಕಪ್ಪನ ಉದಾಹರಣೆಯಿಂದ ಅನಿಸಿತು. ಮೊದಲ ತುತ್ತಿಗೇ ಹಳ್ಳುಕಡಿದಂತೆ ಅವರ ಅನುಭವವಾಗಿತ್ತು.

ಊರನ್ನು ಮುಟ್ಟಿದ ಕೂಡಲೇ ಲಕ್ಷ್ಮಿಗೆ ವೆಂಕಟೇಶ ಅವರು ತಮ್ಮ ಅನುಭವವನ್ನು ಹೇಳಬೇಕೆಂದರು. ವಾಡೆಯಲ್ಲಿ ಪ್ರವೇಶಿಸಿದ ಕೂಡಲೇ ಅಲ್ಲಿಯ ದೃಶ್ಯವೇ ಬದಲಾಗಿತ್ತು! ಆಳುಗಳು ತ್ವರಿತದಿಂದ ಅತ್ತಿಂದಿತ್ತ ಒಡಾಡುತ್ತಿದ್ದರು! ದೊಡ್ಡ ದೊಡ್ಡ ಹಂಡೆಗಳು ಹೊರಗೆ ಬರುತ್ತಿದ್ದವು. ಬೆಲ್ಲದ ಪೆಂಟಿಗಳನ್ನು ಎಣಿಸುತ್ತಿದ್ದರು! ಅಡಕಲ ಕೋಣೆಯಲ್ಲಿ ಕಾಳನ್ನು ಅಳೆಯುತ್ತಿದ್ದರು! ಅಡುಗೆಯ ಮನೆಯಲ್ಲಿ ಅಡುಗೆಯ ರಾಜಪ್ಪ ಹುರುಪಿನಿಂದ ಬೆಲ್ಲದ ಆಣವನ್ನು ಮಾಡಲು ಅಣಿಯಾಗಿದ್ದನು. ವಾಡೆಯಲ್ಲಿಯ ಬದಲಾವಣೆ ನೋಡಿ, ವೆಂಕಟೇಶ ಅವರಿಗೆ ಬಹಳ ಆಶ್ಚರ್ಯವಾಯಿತು.

ಲಕ್ಷ್ಮಿಯನ್ನು ಹುಡುಕುತ್ತ ಅವರು ಅಟ್ಟದ ಮೇಲೆ ಹೋದರು.

ಬಾಗಿಲು ಇಕ್ಕಿದ್ದುವು! ಒಳಗೆ ಲಕ್ಷ್ಮಿ ಯಾರ ಜೊತೆಗೋ ಪಿಸುಮಾತುಗ
ನ್ನಾಡುವುದು ಕೇಳಬಂದಿತು!

## ೧೬

ಒಂದೇ ಮನೆ! ಒಂದೇ ಊಟ! ಹೊರಗಿನ ತೋರಿಕೆಗೆ ಎಲ್ಲ ಒಂದೆ
ಆಗಿದ್ದರೂ, ಒಬ್ಬರೊಬ್ಬರ ಒಳಗಿನ ಮನಸ್ಸು ವಿಮುಖವಾಗಿದ್ದರೆ, ಸುಖವಾ
ಬದುಕುವದೇ ಅಸಾಧ್ಯವಾಗುತ್ತದೆ. ಕಳಸಾಪೂರದ ಜಾಗಿರದಾರರ ವಾ
ಯಲ್ಲಿ ಅಂಥ ಪರಿಸ್ಥಿತಿ ಉದ್ಭೂತವಾಗಿತ್ತು. ಎಲ್ಲರೂ ಓಡಾಡುವುದು ಅದೆ
ಸ್ಥಳವಾಗಿತ್ತು. ಅದೇ ದೊಡ್ಡ ವಾಡೆಯಿತ್ತು! ಎಲ್ಲರೂ ಕೂಡಿ ಊ
ಮಾಡುವುದು ಅದೇ ವಿಶಾಲವಾದ ಅಡುಗೆಯ ಮನೆಯಾಗಿತ್ತು! ಆದರು
ಸುಖವೆಂಬುವುದು ಆ ಮನೆಯಲ್ಲಿರಲಿಲ್ಲ. ಮನೆಯಲ್ಲಿ ಎರಡು ಪಂಗಡಗಳಾ
ದ್ದವು. ಶೀನಪ್ಪನವರು ಗೋವಿಂದರಾಯರನ್ನು ಕೂಡಿಕೊಂಡು ತಮ್ಮದೊಂದು
ಪಕ್ಷವನ್ನು ಕಟ್ಟಿಕೊಂಡಿದ್ದರು. ಆ ಪಕ್ಷವನ್ನು ಬಲಪಡಿಸಿಕೊಳ್ಳಲು ಎ
ಉಪಾಯಗಳನ್ನು ಯೋಜಿಸುತ್ತಿದ್ದರು; ತಮ್ಮ ರಕ್ಷಣೆಗೆ ಉಕ್ಕಿನ ಗೋಡೆಯನ್ನು
ಕಟ್ಟಲು ಸರ್ವಾಧಿಕಾರವನ್ನು ಉಪಯೋಗಿಸುತ್ತಿದ್ದರು! ಶೀನಪ್ಪನವರ
ಹೀಗೆ ಸಿದ್ಧವಾದ ಮೇಲೆ, ಲಕ್ಷ್ಮಿಗೆ ಮನಸ್ಸಿಲ್ಲದಿದ್ದರೂ ಇನ್ನೊಂದು ಪಕ್ಷ
ತಾನಾಗಿಯೆ ನಿರ್ಮಾಣವಾಯಿತು. ಲಕ್ಷ್ಮಿ ಅದರ ಧುರೀಣಳಾದಂತೆ ಆ
ದ್ದಳು. ತನ್ನ ಜೀವನದಲ್ಲಿ ಇಂಥ ಮಹಾಘಟನೆ ಬರುವದೆಂದು ಅವಳು ಎಣಿಸಿ
ಲಿಲ್ಲ. ತನ್ನ ಎಳೆವಯಸ್ಸಿನಲ್ಲಿಯೆ ಮಹಿಳೆಯಾದ ತಾನು ಎಂಥೆಂಥ ಭಾರವನ್ನು
ಹೊರುವ ಪ್ರಸಂಗ ಬಂದಿತಲ್ಲಾ ಎಂದು ಒಮ್ಮೊಮ್ಮೆ ಅವಳು ವ್ಯಥೆಗೊಳ್ಳುತ್ತಿ
ದ್ದಳು. ಆದರೆ ದೇವರನ್ನು ಸ್ಮರಿಸಿ, ಆ ವ್ಯಥೆಯನ್ನು ದೂರಮಾಡಿಕೊಳ್ಳುತ್ತಿ
ದ್ದಳು. ತಾನು ಹೆಂಗುಸಾದರೂ ಜೀವನದ ಸಾಗರದಲ್ಲಿ ಏರಿಬರುವ ತೋರ ತೆ
ಗಳನ್ನು ಎದುರಿಸಬಲ್ಲೆನೆಂಬ ಧೈರ್ಯ ಅವಳಲ್ಲಿ ಬರುತ್ತಿತ್ತು!

ಶೀನಪ್ಪನವರ ಪಕ್ಷದವರು ಏನೇನು ಮಾಡುತ್ತಿರುವರೆಂಬುದು ಅವಳಿಗೆ
ಬೇಗ ತಿಳಿದುಬರುತ್ತಿದ್ದಿಲ್ಲ. ಆನಂದರಾಯರ ಮಗಳಾದ ಸುಂದರಾಳ ಮದು

ವೆಯ ಸುದ್ದಿಯೂ ಅದೇ ರೀತಿಯದಾಗಿತ್ತು. ಲಕ್ಷ್ಮಿಗೆ ತಿಳಿಸದೆ ಸುಂದರಾ ಳನ್ನು ಹೈದರಾಬಾದಿಗೆ ಕರೆದುಕೊಂಡು ಹೋಗಿ ಬಂದರು. ಅವರೆಲ್ಲ ತಿರುಗಿ ಬಂದ ಮೇಲೆ, ಲಗ್ನದ ವಿಷಯ ಏನಾಯಿತೆಂಬುದನ್ನು ಹೇಳಲಿಲ್ಲ. ಸ್ವತಃ ಸುಂದರಾಳಿಗೂ ತಿಳಿಸಿರಲಿಲ್ಲ. ಅವಳ ಲಗ್ನವಾದರೇನಾಯಿತು? ಕನ್ನೆಯ ಒಪ್ಪಿಗೆ ತೆಗೆದುಕೊಂಡು ಮದುವೆ ಮಾಡಬೇಕೆಂಬ ಪರಿಪಾಠ ಎಲ್ಲಿಯದು? ಎಂಬುದು ಗೋವಿಂದರಾಯರ ವಿಚಾರ ಸರಣಿ. ಮೇಲಾಗಿ ಸುಂದರಾ ಲಕ್ಷ್ಮಿಯ ಸಹವಾಸದಲ್ಲಿದ್ದು, ಲಕ್ಷ್ಮಿಯನ್ನು ಮೆಚ್ಚುತ್ತಿರುವಳೆಂಬುದು ಶೀನಪ್ಪನವರಿಗೆ ಪರಿಪೂರ್ಣವಾಗಿ ಗೊತ್ತಿತ್ತು. 'ತಮ್ಮ ದರ್ಜೆಯನ್ನು, ತಮ್ಮ ತ್ಯಾಗವನ್ನು ತಿಳಿದುಕೊಳ್ಳದೆ ಲಕ್ಷ್ಮಿಯು ತಮ್ಮನ್ನು ಅಪಮಾನ ಮಾಡಿದ್ದಳು. ಇದರ ಸೇಡನ್ನು ತೀರಿಸಿಕೊಳ್ಳಬೇಕು' ಎಂದು ಶೀನಪ್ಪನವರು ಯೋಚಿಸಿದ್ದರು. ಆದ್ದ ರಿಂದಲೇ ಮದುವೆಯ ದಿನಾಂಕವನ್ನು ಗುಪ್ತವಾಗಿ ಇಟ್ಟಿದ್ದರು.

ವೆಂಕಟೇಶ, ಹನುಮಂತ ಅವರು ನಸುಕಿನಲ್ಲೆದ್ದು ತೋಟಕ್ಕೆ ಹೋಗಿ ದ್ದರು; ಇತ್ತಕಡೆ ಬೆಳಗಿನಲ್ಲಿ ಮದುವೆಯ ಸಲುವಾಗಿ ಸಾಮಾನುಗಳನ್ನು ತಯಾರು ಮಾಡುವ ಸಿದ್ಧತೆ ನಡೆಯಿತು! ಅದನ್ನು ನೋಡಿ ಸುಂದರಾ ದಿಙ್ಮೂಢಳಾದಳು! ತನ್ನ ಮದುವೆ ಇಷ್ಟು ಬೇಗನೇ ಒಂದು ವಾರದಲ್ಲಿಯೆ ಆಗುವುದೆಂಬುದು ಅವಳಿಗೆ ಗೊತ್ತಿರಲಿಲ್ಲ! ಇದು ದುಃಖದ ಸಂಗತಿಯೋ, ಆನಂದದ ಸಂಗತಿಯೋ ಯಾವುದೂ ಅವಳಿಗೆ ತಿಳಿಯಲಿಲ್ಲ. ಮನೆಯಲ್ಲಿಯ ಆಳುಗಳು, ಬಂಧು ಬಳಗದವರು ಸುಂದರಾಳನ್ನು ನೋಡಿ "ನಿನ್ನ ಹೋಳಿಗೆ!" ಎಂದು ಉಬ್ಬಿನಿಂದ ಹೇಳುತ್ತಿದ್ದರು! ಸುಂದರಾಳಿಗೆ ಮಾಡಿಸುವ ಆಭರಣ ಗಳನ್ನು ಕುರಿತು ಗೋವಿಂದರಾಯರು, ಸೀತಕ್ಕನವರು, ಶೀನಪ್ಪನವರು ಯೋಚಿಸುತ್ತಿದ್ದರು. ರಾಯರ ಕಾಲದಲ್ಲಿಯೆ ಈ ಮದುವೆಯ ಮಾತು ಆಗಿದ್ದಿ ತೆಂದು ಶೀನಪ್ಪನವರು ಹೇಳಿದ್ದರಿಂದ ಸುಬ್ಬಕ್ಕನವರು ಎಲ್ಲದಕ್ಕೂ ಹೂಂಗುಟ್ಟು ತ್ತಿದ್ದರು. ಲಕ್ಷ್ಮಿಯನ್ನು ಯಾರೂ ಏನೂ ಕೇಳುತ್ತಿರಲಿಲ್ಲ. ಇದನ್ನು ತಿಳಿದು ಸುಂದರಾಳಿಗೆ ಬಹಳ ಕೆಡುಕೆನಿಸಿತು.

ಬೆಳಗಿನ ಒಂಬತ್ತು ಗಂಟೆಗೆ ಸುಂದರಾ ತಾನಾಗಿಯೆ ಅಟ್ಟವನ್ನೇರಿ ಹೋದಳು. ಲಕ್ಷ್ಮಿ ತನ್ನ ಹೆರಳನ್ನು ಬಿಚ್ಚಿಕೊಂಡು ನಿಲುಗನ್ನಡಿಯ ಎದುರು ನಿಂತುಕೊಂಡು ಕೂದಲನ್ನು ಬಾಚಿಕೊಳ್ಳುತ್ತಿದ್ದಳು. ಚೆಲುವಾದ, ನೀಳವಾದ

ಕರಿ ಕುರುಳು ಅವಳ ಭುಜಗಳ ಮೇಲೆ ಹಾರಾಡುತ್ತಿದ್ದವು.

" ಕಾಕೂ, ನೀವೇ ಏಕೆ ಹೆರಳು ಹಾಕಿಕೊಳ್ಳುತ್ತೀರಿ ? " ಸುಂ
ಒಳಗೆ ಕಾಲಿಡುತ್ತಲೆ, ಲಕ್ಷ್ಮಿಯನ್ನು ನೋಡಿ ಕೇಳಿದಳು.

" ಮತ್ತೆ ಯಾರು ಹಾಕಬೇಕು ಸುಂದರಾ ? " ಎಂದು ಮುಗುಳ
ನಗುತ್ತ ಸುಂದರಾಳ ಕಡೆಗೆ ನೋಡಿ ಲಕ್ಷ್ಮಿ ನಕ್ಕಳು.

" ಯಾಕೆ ? ನಾನು ಇಲ್ಲವೆ ? ನಾನೇನು ಚಿಕ್ಕವಳಲ್ಲ ! ನನಗೂ ಹೆ
ಹಾಕಲು ಬರುತ್ತಿದೆ. " ಸುಂದರಾ ಲಕ್ಷ್ಮಿಯ ಕೈಯಲ್ಲಿಯ ಬಾಚಣಿಕೆಯ
ಇಸಿದುಕೊಂಡು, ಕೂದಲು ಬಾಚಹತ್ತಿದಳು.

" ಸುಂದರಾ ನೀನು ದೊಡ್ಡವಳಾಗಿರುವಿ ! ಅದನ್ನು ನಾನೇನು ಕ
ಬೇಕು ! ಎಲ್ಲರಿಗೂ ಗೊತ್ತಿದೆ ನಿನ್ನ ಮದುವೆಯ ದಿನ !........ ನೀನು ಹೆ
ಹಾಕಿದರೆ ಇನ್ನೇನು ೫-೬ ದಿನ ! ಆಮೇಲೆ ನಾನೇ ಹಾಕಿಕೊಳ್ಳಬೇ
ಅಲ್ಲವೆ ?....ಯಾಕೆ ಸುಂದರಾ, ಮಾತನಾಡುವದಿಲ್ಲ ? "

" ಕಾಕೂ, ನಾನೇನು ಹೇಳಬೇಕು ? "

" ನೀನೇ ! ಏನೂ ಹೇಳುವ ಹಾಗಿಲ್ಲ !........... ಮದುವೆಯ ಸ
ಯನ್ನೇ ತಿಳಿಸಲಿಲ್ಲ ! ಇನ್ನು ಲಗ್ನವಾದ ಮೇಲೆ ಮಾತನಾಡಿಸುವು
ಕಠಿಣ ! "

" ಕಾಕೂ, ಕಾಕೂ !........... " ಸುಂದರಾ ಕೂದಲು ಬಾಚುವುದ
ನಿಲ್ಲಿಸಿ ಉದ್ವೇಗದಿಂದ ನುಡಿದಳು " ನನಗೆ ಯಾರು ಏನೆಂದರೂ ಕೆಟ್ಟೆನಿಸ
ದಿಲ್ಲ. ನೀವು ಹೀಗೆಂದರೆ........... ? ನಿಮ್ಮ ಹತ್ತಿರ ನಾನು ಎಷ್ಟು
ಕಳೆದಿದ್ದೇನೆ. ನನ್ನ ಸ್ವಭಾವ ನಿಮಗೆ ಗೊತ್ತಿಲ್ಲವೇನು ? ...........
ಕಾಕೂ........... "

ಒಂದೆರಡು ಹನಿ ಸುಂದರಾಳ ಕಣ್ಣೊಳಗಿಂದ ಹೊರಬೀಳಲು ಯತ್ನಿ
ತ್ತಿದ್ದವು. ಲಕ್ಷ್ಮಿ ಅವುಗಳನ್ನು ಗುರುತಿಸಿ, ಸುಂದರಾಳನ್ನು ಅಪ್ಪಿಕೊಂ
" ಸುಂದರಾ, ಏನಾಯಿತು ನಿನಗೆ ? ಲಗ್ನದ ಸುದ್ದಿ, ಆನಂದದ ಸುದ್ದಿ
ಅದನ್ನು ಯಾಕೆ ಹೇಳಲಿಲ್ಲ ಎಂದು ಕೇಳಿದೆ. ಅದಕ್ಕೆ ಅಳಬೇಕೇನು ?.... ?

" ಕಾಕೂ........ " ಸುಂದರಾ ಕಣ್ಣೊರಿಸಿಕೊಂಡಳು. " ನಿನ್ನೊ
ಮಾತನಾಡಬೇಕಾಗಿದೆ........ ಇಲ್ಲಿ ಯಾರೂ ಇಲ್ಲವೇನು ? ನಾರಾಯ

ಕಾಕಾ ಎಲ್ಲಿ ಇದ್ದಾರೆ ? "

" ಯಾರೂ ಇಲ್ಲ ಸುಂದರಾ, ಹೇಳು. ನಿನಗೆ ಏನಾಗಿದೆ ಹೇಳು. "

" ಮನೆಯಲ್ಲಿ ಎಲ್ಲರ ಕಣ್ಣೂ ನನ್ನ ಮೇಲೆ !.........ನಿಲ್ರಿ ಕಾಕೂ ಈಗ ಬರುತ್ತೇನೆ ! " ಸುಂದರಾ ಕೆಳಗೆ ಹೋಗಿ ಹಲವು ನಿಮಿಷಗಳ ಮೇಲೆ ಬಂದಳು.

ಅವಳು ಅಟ್ಟದ ಮೇಲೆ ಹೋಗುವುದೊಂದೇ ತಡ. ಮತ್ತೆ "ಸುಂದರಾ ! ಸುಂದರಾ ! " ಎಂದು ಒದರುವ ಧ್ವನಿ ಕೇಳಿಸಿತು. " ಅಯ್ಯೋ ! ಸಾಕಾಯಿತು " ಎಂದು ಸುಂದರಾ ಉದ್ಗಾರ ತೆರೆದಳು. " ಕಾಕೂ, ಮೈ ತೊಳೆದುಕೊಂಡಿರೇನು ? ಫಲಾಹಾರವಾಯಿತೇನು ? ಬರ್ರಿ; ಹೆರಳು, ಮೈ, ಫಲಾಹಾರ ಮುಗಿಸಿಕೊಂಡೇ ಬರೋಣ. "

ಲಕ್ಷ್ಮಿಗೆ ಸುಂದರಾಳನ್ನು ಮಾತನಾಡಿಸುವ ಆತುರತೆಯಿತ್ತು. ಆದರೆ ಕೆಳಗಿನ ' ಬೋಲಾವಣೆ ' ಯ ಒತ್ತಾಯದ ಮೂಲಕ, ಸುಂದರಾಳ ಜೊತೆಗೆ ಅವಳೂ ಹೋಗಬೇಕಾಯಿತು. ಒಂದು ತಾಸಿನ ನಂತರ, ಸುಂದರಾಳ ಉಳಿದ ಕೆಲಸ ಬಿಡಿಸಿ ಅವಳನ್ನು ಕರೆದುಕೊಂಡು ಲಕ್ಷ್ಮಿ ಮೇಲೆ ತನ್ನ ಕೋಣೆಗೆ ಬಂದು ಬಾಗಿಲು ಬಂದು ಮಾಡಿದಳು.

ಸುಂದರಾಳನ್ನು ಪಲಂಗದ ಮೇಲೆ ತನ್ನ ಹತ್ತಿರ ಕೂಡಿಸಿಕೊಂಡು, ತೀರ ತನ್ನ ಸನಿಹದಲ್ಲಿ ಕೂಡಿಸಿಕೊಂಡು, ಲಕ್ಷ್ಮಿ ಕೇಳಿದಳು " ಸುಂದರಾ, ಆಗಲೆ ಹಾಗೆಯೇ ಹೋಗಿದ್ದಿ ?........ಈಗ ಹೇಳು ನಿನಗೆ ಏನು ಅನಿಸುತ್ತಿದೆ ಹೇಳು ? "

ಸುಂದರಾ ಏನೂ ಮಾತನಾಡದೆ, ಲಕ್ಷ್ಮಿಯ ತೊಡೆಯ ಮೇಲೆ ಮಲಗಿಕೊಂಡಳು. " ಕಾಕೂ, ನಿಮ್ಮ ಹಾಗೆ ಇರುವ ಈ ತಾಯಿಯ ತೊಡೆ ಬೇಕಾಗಿದೆ ನೋಡ್ರಿ ! "

ಲಕ್ಷ್ಮಿ ಅವಳ ತಲೆಯ ಮೇಲೆ ಕೈಯಾಡಿಸಿ, ಹಣೆಯ ಮೇಲಿನ ಕೂದಲನ್ನು ಸರಿಪಡಿಸಿದಳು. ಲಕ್ಷ್ಮಿಯ ತೊಡೆಯ ಮೇಲೆ ಮಲಗಿದ ಸುಂದರಾ, ಮೇಲಿನ ಹಂಚುಗಳನ್ನು ದಿಟ್ಟಿಸಿ ನೋಡುತ್ತಿರುವಾಗ, ಅವಳಿಗೆ ತನ್ನ ತಾಯಿಯ ನೆನಪಾಗುತ್ತಿತ್ತು. ಕಣ್ಣುಗಳ ಕೊನೆಯಿಂದ ಕಂಬನಿ ಧಾರೆಯಾಗಿ ಹರಿಯಿತು " ನನಗೆ ತಾಯಿಯಿದ್ದಿದ್ದರೆ ? " ಎಂದು ಉಸಿರ್ಗರೆದಳು.

ಲಕ್ಷ್ಮಿ ಸುಂದರಾಳನ್ನು ಸಮಾಧಾನ ಮಾಡುತ್ತ " ಸುಂದರಾ, ನಮ
ಬೇಕಾದದ್ದು ಎಲ್ಲವೂ ಹೇಗೆ ದೊರೆಯಬೇಕು ?..........ನೋಡು, ನನಗ
ತಾಯಿಯಿಲ್ಲ. " ಎಂದು ತನ್ನಲ್ಲಿ ಧೈರ್ಯ ತಂದುಕೊಂಡೇ ಅವಳು ಹೇ
ಬೇಕಾಯಿತು,

" ಕಾಕೂ, ನಿಮಗೆ ತಂದೆಯಾದರೂ ಇದ್ದಾರೆ. ನನಗೆ ತಂದೆಯಿ
ದ್ದರೂ ಇಲ್ಲದಂತೆ. ತಾಯಿಯ ಅಂತಃಕರಣದ ಮಾತನ್ನಂತೂ ಕೇಳು
ಸುಯೋಗವು ನನಗೆ ಮೊದಲಿನಿಂದಲೂ ದೊರೆಯಲಿಲ್ಲ. ಗಿಡದ ನೆರಳು ಇ
ದೆಯೆ ಸಾಗಿ ಬಂದೆ. "

" ಸುಂದರಾ, ಬಂದದ್ದನ್ನು ನಾವು ಅನುಭವಿಸಬೇಕು."

" ಕಾಕೂ, ಏನು ಅನುಭವಿಸಬೇಕು ? ಹೇಗೆ ಅನುಭವಿಸಬೇಕು ?
ಸುಂದರಾ ಲಕ್ಷ್ಮಿಯ ತೊಡೆಯ ಮೇಲೆ ತನ್ನ ತಲೆಯನ್ನು ಗಟ್ಟಿಯಾಗಿ ಒತ್ತಿ
ದಳು "ಅಪ್ಪ ಏನೂ ಮಾತನಾಡುವದಿಲ್ಲ. ಒಂದು ದಿನವಾದರೂ ನನ್ನ ಮಗಳ
ಹೇಗಿದ್ದಾಳೆಂದು ಕೇಳುವದಿಲ್ಲ. ಊರಲ್ಲಿಯಂತೂ ಇರುವದಿಲ್ಲ. ಈಗಂತೂ
ಶೀನಪ್ಪನವರೂ, ಗೋವಿಂದಕಾಕಾ ಹೇಳಿದಂತೆ ಕೇಳುತ್ತ ತಿರುಗುತ್ತಾನೆ !...
ಕಾಕೂ ಈ ಲಗ್ನವಾದರೂ ನನಗೆ ಏಕೆ ಬೇಕಾಗಿತ್ತು ? "

" ಸುಂದರಾ, ಹೆಣ್ಣು ಮಕ್ಕಳು ದೊಡ್ಡವರಾದ ಮೇಲೆ ಮದುವ
ಬೇಡವೇನು ? "

" ಬೇಕು. ಆದರೆ ಇಂಥ ಮದುವೆ ನನಗೆ ಬೇಡವಾಗಿದೆ ಕಾಕೂ,
ನನಗೆ ಧನ ಬೇಡ, ಬೆಳ್ಳಿ ಬೇಡ, ಭಂಗಾರ ಬೇಡ. ನಿಮ್ಮ ಹಾಗೆ ಕಾಕೂ,
ಪ್ರೀತಿಯಿಂದ ತೊಡೆಯ ಮೇಲೆ ಮಲಗಿಸಿಕೊಳ್ಳುವವರು ಇದ್ದರೆ ಸಾಕು !....
ಅಯ್ಯೋ ! "

" ಈಗಾಗಲೆ ಚಿಂತೆ ಏಕೆ ಮಾಡುವಿ ? ಮುಂದಾಗುವುದನ್ನು ಈಗಲೇ
ಹೇಳಲಿಕ್ಕೆ ಬರುವದೇನು ? "

" ನನಗೆ ತಿಳಿದಿದೆ. ಅದಕ್ಕೆಂದೇ ಈ ಮಾತು ಹೇಳುತ್ತಿದ್ದೇನೆ. ಕಾಕೂ,
ನಿಮ್ಮನ್ನು ಕರೆದುಕೊಂಡು ಹೈದರಾಬಾದಿಗೆ ಹೋಗೋಣವೆಂದರೆ ಏಕೆ ನಿಮ್ಮನ್ನು
ಅವರು ಕರೆಯಲಿಲ್ಲ ? ನೀವೇ ಹೇಳಿರಿ. ನನಗೆ ಸಂಕಟವಾಗದೆ ಬಿಡುತ್ತದೇನು ?
ನನ್ನ ನಾಲಗೆ ಇಷ್ಟುದಿನ ಮಾತನಾಡದಿದ್ದರೆ, ಕರುಳಿನಲ್ಲಿರುವುದು ಎಲ್ಲಿ ಹೋಗು

ತ್ತದೆ?.... ಕಾಕೂ, ಶೀನಪ್ಪನವರು ಓಡಾಡುವಲ್ಲಿ ನನಗೆ ವಿಶ್ವಾಸವೇ ಇಲ್ಲ. ನಿಮ್ಮ ಲಗ್ನದ ವಿಷಯವಿರುವಾಗಲೇ ನಾನು ಎಲ್ಲ ತಿಳಿದುಕೊಂಡಿದ್ದೇನೆ........ ನಿಮಗೆ ಇಲ್ಲಿಗೆ ಬಂದಮೇಲೆ ಎಷ್ಟು ತ್ರಾಸವಾಗಿದೆಯೋ ಏನೋ!........ ಆಗ ಶೀನಪ್ಪನವರ ಮಾತುಗಳೇನು, ಓಡಾಟವೇನು, ಹಾರಾಟವೇನು!.......... ಅವರು ಎಷ್ಟು ಸುಳ್ಳು ಹೇಳುತ್ತಾರೆಂಬುವುದು ನಿಮ್ಮ ಲಗ್ನವಾದ ಮೇಲೆ ನನಗೆ ತಿಳಿಯಿತು. ನಾನು ಹೆಂಗಸು—ಚಿಕ್ಕವಳು!"

"ಸುಂದರಾ, ನನ್ನ ಸಲುವಾಗಿ ಸಹಾನುಭೂತಿ ಈ ಮನೆಯಲ್ಲಿ ನಿನಗೊಬ್ಬಳಿಗಾದರೂ ಇದೆ........ ಶೀನಪ್ಪನವರು ಇಷ್ಟೆಲ್ಲ ಹಾರಾಡಲಿಕ್ಕೆ ಲಕ್ಷ್ಮಿಯೆ ಕಾರಣ!"

"ಏನ್ರಿ, ನೀವು ಕಾರಣರೆ?"

"ಹೂಂ. ಒಂದು ರೀತಿಯಿಂದ ಹಾಗೆಯೂ ಇದೆ." ತಪ್ಪಿ ಲಕ್ಷ್ಮಿಯ ನಾಲಗೆಯ ಮೇಲೆ ಈ ಮಾತು ಬಂದಿತು. ಶೀನಪ್ಪನವರು ಕಾಮುಕರಿರುವರೆಂಬುದು ಅವಳಿಗೆ ಗೊತ್ತಿತ್ತು. ತನ್ನ ಮಾತಿನ ರೀತಿಯನ್ನು ಸುಧಾರಿಸಿಕೊಳ್ಳುತ್ತ ಲಕ್ಷ್ಮಿ ಹೇಳಿದಳು "ನಾನು ಹೇಳಿದ್ದು ಮುಖ್ಯವಾಗಿ ಲಕ್ಷ್ಮೀದೇವಿ—'ಶ್ರೀ' ಸಲುವಾಗಿ ಎಂದು! ಹಣ ಎಂದರೆ ಹೆಣವೂ ಬಾಯಿ ತೆರೆಯುವದಂತೆ. ಅಂದಮೇಲೆ ಶೀನಪ್ಪನವರದೇನು?"

"ಕಾಕೂ, ನೀವು ಹೇಳಿದ ಮಾತು ಎಲ್ಲಾ ಖರೆ ಇವೆ ನೋಡ್ರಿ. ಹಣದ ಸಲುವಾಗಿ ಶೀನಪ್ಪನವರು ಏನು ಮಾಡಲೂ ಹೇಸುವುದಿಲ್ಲ." ಸುಂದರಾ ಎದುರು ಕುಳಿತು ಹೇಳಿದಳು "ಕಾಕೂ, ಅದಕ್ಕೇ ನನಗೆ ಈ ಮದುವೆಯಲ್ಲಿ ಮನಸ್ಸಿಲ್ಲ."

"ಸುಂದರಾ, ನನಗೆ ಮದುವೆಯಾದ ಮೇಲೆ ಈ ಬುದ್ಧಿ ಬಂದಿತು. ನಿನಗೆ ಮೊದಲೇ ಬಂದಿದೆ! ಎಷ್ಟೋ ಗುಣ...."

"ನೋಡ್ರಿ ಕಾಕೂ, ನನಗೆ ಏನೂ ಕೇಳಿಲ್ಲ. ನಿಮಗೂ ಏನೂ ಹೇಳಿಲ್ಲ. ನಾವು ಹೆಂಗಸರು, ನಮ್ಮದೇನು ಅನ್ನುತ್ತಾರೆ. ತಮ್ಮತಮ್ಮೊಳಗೇ ಮಾತನಾಡಿಕೊಂಡು, ಎಲ್ಲಾ ನಿಶ್ಚಿತ ಮಾಡಿಕೊಂಡು, ಮದುವೆಯ ದಿನವನ್ನು ನಿರ್ಣಯಿಸಿಬಿಟ್ಟಿದ್ದಾರೆ. ಇಂದೇ ನನಗೆ ಹೇಳುತ್ತಾರೆ!"

"ನಿಜವಾಗಿಯೂ?" ಆಶ್ಚರ್ಯದಿಂದ ಲಕ್ಷ್ಮಿ ಕೇಳಿದಳು.

"ಬೇಕಾದರೆ ಕಾಕೂ, ನಿಮ್ಮ ಮಂಗಳಸೂತ್ರದ ಆಣೆ ಮಾಡಿ ಹೇಳು

ತ್ತೇನೆ." ಸುಂದರಾ ಸ್ವಲ್ಪ ತಡೆದು ಹೇಳಿದಳು "ನಿಮ್ಮ ಮುಂದೆ ಈ ದಿನ ಹೇಳುತ್ತೇನೆ. ನನಗೆ ಇವರ ರೀತಿ ನೀತಿ ಬೇಸರಿಕೆ ಬಂದುಬಿಟ್ಟಿದೆ. ಬಾಸಿಂಗ ಕಟ್ಟಿಕೊಳ್ಳುವವಳು ನಾನು.!........... ಇವರು ಹೇಗೆ ಕಟ್ಟುವರೋ ನೋಡ ಬೇಕೆಂಬ ಮನಸ್ಸಾಗುತ್ತಿದೆ. ಹೆಂಗಸು, ನಿರಾಶಳಾಗಿ ಇರಬೇಕಾಗುತ್ತದೆ."

"ಸುಂದರಾ, ಏನು ಹೇಳಬೇಕೋ ನನಗೇ ತಿಳಿಯದು. ವೈಶಾಖ ಶುದ್ಧ ತೃತೀಯಾ ಎಂದು ಲಗ್ನಪತ್ರವನ್ನು ಪ್ರಿಂಟು ಮಾಡಲು ಕೊಟ್ಟಿದ್ದಾರಂತೆ!.... ನನ್ನನ್ನು ಕೇಳದೇ ಎಲ್ಲವನ್ನೂ ಗೊತ್ತುಮಾಡಿದರೆ ಏನಾಯಿತು? ನೀನು ಏನೂ ಮನಸ್ಸಿಗೆ ಹಚ್ಚಿಕೊಳ್ಳಬೇಡ. ಮುಂದಾದರೂ ದೇವರು ನಿನಗೆ ಕಲ್ಯಾಣಮಾಡ ಬಹುದು. ಆಗ ನಿಮ್ಮ ಮನೆಗೆ ನಾವು ಬರುತ್ತೇವೆ."

ಲಕ್ಷ್ಮಿಯು ಮಾತನಾಡುವಾಗ ಸುಂದರಾ ಎದ್ದುಹೋಗಿ ಕಿಡಕಿಯಲ್ಲಿ ನಿಂತುಕೊಂಡಿದ್ದಳು. ಅವುಡನ್ನು ಕಚ್ಚುತ್ತ ಏನನ್ನೋ ಧೇನಿಸುತ್ತಿದ್ದಳು. ಶೂನ್ಯ ಮನಸ್ಕಳಾಗಿ ಆಚೆ ದೂರ ಮುಗಿಲಂಚಿನಲ್ಲಿ ನೋಡುತ್ತಿದ್ದಳು. ಸುಂದ ರಾಳ ದೃಷ್ಟಿ ಬದಲಾದುದನ್ನು ಕಂಡು, ಲಕ್ಷ್ಮಿ ಸಾವರಿಸಿಕೊಂಡು ಎದ್ದು, ಅವ ಳನ್ನು ಸೆಳೆದು ತನ್ನೆದೆಗೆ ಅಪ್ಪಿಕೊಂಡು ಹೇಳಿದಳು, "ಸುಂದರಾ, ಎಲ್ಲವನ್ನು ಒಪ್ಪಿಕೋ. ನಿನಗೆ ಎಲ್ಲವೂ ಬೇಗನೇ ಶುಭವಾಗುವುದು! ನನ್ನ ಮಾತು ಕೇಳು."

ಹೊರಗೆ ಬಾಗಿಲು ತಟ್ಟಿದ ಸಪ್ಪಳವಾಯಿತು. ಲಕ್ಷ್ಮಿ ತನ್ನ ಪಿಸುಮಾತು ಗಳನ್ನು ನಿಲ್ಲಿಸಿದಳು. ಬಾಗಿಲು ತೆರೆದು, ವೆಂಕಟೇಶ ಅವರನ್ನು ಕಂಡರೂ ಅವರ ಜೊತೆಗೆ ಮಾತನಾಡುವಷ್ಟು ಲಕ್ಷ್ಮಿಯಲ್ಲಿ ಸಹನೆಯಿರಲಿಲ್ಲ. ಹಿಂದುಗಡೆ ಮಾತ ನಾಡುವದಾಗಿ ಹೇಳಿ ಅವರನ್ನು ಕಳುಹಿಸಿಕೊಟ್ಟುಬಿಟ್ಟಳು. ಅವಡುಕಚ್ಚುತ್ತ ನಿಂತ ಸುಂದರಾ ತಿರುಗಿ ಹೆಚ್ಚಿಗೆ ಮಾತನಾಡಲಿಲ್ಲ. ಸ್ವಲ್ಪ ಸಮಯದ ನಂತರ ಅವಳಿಗೆ ಬೋಲಾವಣೆ ಬಂದಿತು. ಅವಳೂ ಕೆಳಗೆ ಹೋಗಿಬಿಟ್ಟಳು.

ಸುಂದರಾ ಲಕ್ಷ್ಮಿಯನ್ನು ಬಹಳ ಹಚ್ಚಿಕೊಂಡಿದ್ದಳು. ಅವಳು ಲಕ್ಷ್ಮಿಗೆ ಎಲ್ಲವನ್ನು ಹೇಳಿದಳು. ಸುಂದರಾ ಆಡಿದ "ನಿನ್ನನ್ನು ಏಕೆ ಕೇಳಲಿಲ್ಲ? ಬಾಸಿಂಗ ಹೇಗೆ ಕಟ್ಟುವರೋ ನೋಡುವೆ!" ಈ ಹಲವು ಮಾತುಗಳು ಲಕ್ಷ್ಮಿಯ ಕಿವಿಯಲ್ಲಿ ಝೇಂಕರಿಸಹತ್ತಿದವು. ಸುಂದರಾ ಅವಳೆದುರು ನಿಂತು ಪುನಃ ಪುನಃ ಆ ಮಾತುಗಳನ್ನು ಆಡಿದಂತೆ ಭಾಸವಾಗುತ್ತಿತ್ತು. ಇದರಿಂದ

ಲಕ್ಷ್ಮಿಯ ಮನಸ್ಸಿಗೆ ನೆಮ್ಮದಿ ಸಿಗಲಿಲ್ಲ.

ತಮ್ಮ ಲಾಭವನ್ನು ಮಾಡಿಕೊಳ್ಳಲಿಕ್ಕೆಂದೇ ಶೀನಪ್ಪನವರು ಈ ಆಟ ಹೂಡಿರಬೇಕೆಂದು ಲಕ್ಷ್ಮಿಗೆ ಅನಿಸಿತು. ತನ್ನನ್ನು ಹೊರಗಿಟ್ಟು ಮುದ್ದಾಂ ಈ ಕೆಲಸ ನಡೆಸಿರಬೇಕೆಂದೂ ಅವಳು ತಿಳಿದುಕೊಂಡಳು.

ಮರುದಿನ ಸಂಜೆ ಲಕ್ಷ್ಮಿ ಮತ್ತು ನಾರಾಯಣರಾಯರು ಇಬ್ಬರೂ ಕೂಡಿ ಇರುವಾಗ ತಮಗೆ ತಿಳಿದ ರಹಸ್ಯವನ್ನೆಲ್ಲ ವೆಂಕಟೇಶ ಅವರು ಹೇಳಹತ್ತಿದ್ದರು "ಅಬ್ಬಾ, ಈ ವ್ಯಕ್ತಿ ಭಾರಿ ಇದೆ" ಎಂದು ಉದ್ಗಾರ ತೆಗೆದರು. "ನಾನು ಎಲ್ಲ ಸುದ್ದಿಯನ್ನು ಸಂಗ್ರಹಿಸಿದ್ದೇನೆ. ಇಷ್ಟು ದಿನ, ನೀವೆಲ್ಲ—ಇಲ್ಲಿಯ ಜನರೆಲ್ಲ ಹೇಗೆ ತಡೆದುಕೊಂಡಿರೋ ಅದೇ ನನಗೆ ಆಶ್ಚರ್ಯವೆನಿಸುತ್ತದೆ. ಆ ಮುದುಕಪ್ಪ ಈ ಮಾತು ಹೇಳಿದ್ದಿಲ್ಲ ಅಂದರೆ ನಾನೂ ವಿಚಾರ ಮಾಡಲಿಕ್ಕೆ ಹೋಗುತ್ತಿದ್ದಿಲ್ಲ."

"ಮುದುಕಪ್ಪ ಏನು ಹೇಳಿದ?" ಲಕ್ಷ್ಮಿ ಕೇಳಿದಳು.

"ತೋಟಗಳೆಲ್ಲ ಶೀನಪ್ಪನವರವು ಎಂದು" ವೆಂಕಟೇಶ ಅವರು ಸವಿಸ್ತರ ಸುದ್ದಿ ಹೇಳಿದರು "ಲಕ್ಷ್ಮೀವೈನಿ, ನಿಮ್ಮ ಲಗ್ನವನ್ನು ಯಶಸ್ವಿಯಾಗಿ ಮಾಡಿಸಿದ್ದರಿಂದ, ತೋಟಗಳನ್ನು ಇನಾಮಾಗಿ ರಾಯರು ಹಾಕಿಕೊಟ್ಟಿದ್ದಾರಂತೆ! ರಾಯರು ಏನು ಬರೆದುಕೊಡುತ್ತಾರೆ? ರಾಯರ ಸಹಿ ಕೆಳಗೆ! ಆಸ್ತಿ ವಿವರ ಬರೆದದ್ದು ಶೀನಪ್ಪನವರು!"

"ನೀವು ಹೇಳುವುದು ನಿಜವೇ?" ಲಕ್ಷ್ಮಿ ಕೇಳಿದಳು.

"ಅಯ್ಯೋ, ಹೋಗಿ ಕೇಳಿರಿ. ಒಂದೇ ದಿನದಲ್ಲಿ ಎಷ್ಟೋ ಸಂಗ್ರಹಿಸಿದ್ದೇನೆ. ?

"ನಿಮಗೆಲ್ಲ ಇವು ಹೇಗೆ ಗೊತ್ತಾದವು?"

"ಲಕ್ಷ್ಮೀವೈನಿ, ನಮ್ಮಲ್ಲಿ ಒಂದು ಗಾದೆಯ ಮಾತು ಇದೆ. ಕಾಲಲ್ಲಿ ನಟ್ಟಿದ ಮುಳ್ಳನ್ನು ಮುಳ್ಳಿನಿಂದಲೇ ತೆಗೆಯಬೇಕಂತೆ" ವೆಂಕಟೇಶ ನಕ್ಕರು "ಶೀನಪ್ಪನವರ ಜನರಿಂದಲೇ ಈ ಸುದ್ದಿ ತಿಳಿದುಕೊಂಡಿದ್ದೇನೆ!"

ಮೊದಲೇ ಶೀನಪ್ಪನವರ ಮೇಲೆ ಸಿಟ್ಟಿಗೆದ್ದ ಲಕ್ಷ್ಮಿ, ಈಗ ಮತ್ತಿಷ್ಟು ಕೋಪಗೊಂಡಳು. ಅವರ ಹೆಸರನ್ನು ನಾಲಗೆಯ ಮೇಲೆ ತೆಗೆದುಕೊಳ್ಳುವುದೇ ಒಂದು ಪಾಪವೆಂದು ಅವಳಿಗೆನಿಸಹತ್ತಿತು.

ವೆಂಕಟೇಶ ಅವರು ಹೇಳಿದರು " ವಸೂಲಿ ಸಲುವಾಗಿ ನೀವು ಹೇಳಿದ ಮಾಹಿತಿ ಎಲ್ಲಾ ಸುಳ್ಳು. ಅವುಗಳಲ್ಲಿ ಹೆಚ್ಚಿನ ಆಸ್ತಿ ಶೀನಪ್ಪನವರವೇ ಇವೆ. ಮುದ್ದಾಂ ನಿಮ್ಮನ್ನು ಮೋಸ ಮಾಡಲು ಹೀಗೆ ಮಾಡಿದ್ದಾರೆಂದು ತೋರುತ್ತದೆ. "

" ನೋಡ್ರಿ. ಅದಕ್ಕೇ ನಿಮ್ಮನ್ನು ನಾನು ಕರೆಯಿಸಿಕೊಂಡದ್ದು. ನಾವು ಹೆಂಗಸರು; ಕಾಗದಪತ್ರದಲ್ಲಿ ನಮಗೆಲ್ಲಿ ತಿಳಿಯಬೇಕು ? ಇವರಂತೂ ಹೇಳಿ ಕೇಳಿ..........! ನಮ್ಮ ಸರಳತನ ಸ್ವಭಾವವೇ ನಮಗೆ ಮುಳುವಾಗಿದೆ. "

" ನಾರಾಯಣರಾವ್, ನೀವು ಬೆಳಗಾವಿಯಲ್ಲಿರುವಾಗ ನಿಮಗೆ ಎಷ್ಟು ರೂಪಾಯಿ ಕೊಡುತ್ತಿದ್ದರು ? "

" ರೂಪಾಯಿ ೪೦೦ " ಎಂದು ನಾರಾಯಣರಾಯರು ವೆಂಕಟೇಶ ಅವರು ಕೇಳಿದ ಪ್ರಶ್ನೆಗೆ ಉತ್ತರ ಕೊಟ್ಟರು.

" ಅದಕ್ಕೇ ಅಂದೆ " ವೆಂಕಟೇಶ ಅವರು ಕೈತಟ್ಟಿದರು. " ಲೆಖ್ಖದಲ್ಲಿ ರೂ. ೬೦೦ ಇದೆ. ೪೦೦ ರೂಪಾಯಿ ನಿಮಗೆ ! ೨೦೦ ರೂ. ಶೀನಪ್ಪನವರ ಕಿಶೇಕ್ಕೆ ! ಭಾರಿ ಇದ್ದಾರೆ ಅವರು ! "

ವೆಂಕಟೇಶ ಅವರ ಮಾತನ್ನು ಕೇಳಿ, ಲಕ್ಷ್ಮಿಗೆ ಒಮ್ಮೆ ಸಂಕಟವಾಯಿತು. ಮತ್ತೊಮ್ಮೆ ಸಮಾಧಾನವೂ ಆಯಿತು. ವೆಂಕಟೇಶ ಅವರು ತಮ್ಮ ಹಿತಚಿಂತನೆ ಮಾಡಲು ಬಂದಿರುವರಲ್ಲಾ ಎಂಬುದೇ ಅವಳಿಗೆ ಸಮಾಧಾನ. ಲಕ್ಷ್ಮಿ ಕೇಳಿದಳು— " ಹಾಗಾದರೆ ನಾವು ಏನು ಮಾಡಬೇಕು ಎನ್ನುವಿರಿ ? "

" ನಾರಾಯಣರಾವ್, ಲಕ್ಷ್ಮೀವೈನಿ ಇದರಲ್ಲಿ ಒಂದೇ ಒಂದು ಉಪಾಯವಿದೆ. ನಮ್ಮದು ನಮಗೆ. ಅವರದು ಅವರಿಗೆ. ಕಾಗದಪತ್ರಗಳನ್ನು ನೋಡಿ ಸ್ವಚ್ಛವಾಗಿ ನಿಮ್ಮ ಆಸ್ತಿಯನ್ನು ಬೇರೆ ಇಟ್ಟುಕೊಂಡುಬಿಡಬೇಕು."

" ಹಾಗಾದರೆ ನೀವು ಈ ಕೆಲಸವನ್ನು ಮೊದಲು ಮಾಡುವಿರಾ ? "

" ಅದಕ್ಕೇ ಬಂದಿದ್ದೇನೆಂದ ಮೇಲೆ ಮಾಡಿಯೇ ಮಾಡುತ್ತೇನೆ. ಮೊದಲು ನಾರಾಯಣರಾಯರು ತಮ್ಮ ಅಸ್ತಿಯ ಮೇಲ್ವಿಚಾರಕನೆಂದು ನನಗೊಂದು ಹಕ್ಕುಪತ್ರಿಕೆಯ ' ಮುಕ್ತೇದಾರಿ ' ಯನ್ನು ಬರೆದು ಕೊಡಲಿ. ಆ ಕಾಗದವಿದ್ದರೆ, ನಾನು ಬೇಕಾದವರನ್ನು ಭೆಟ್ಟಿಯಾಗಿ ಮಾತನಾಡಿಸಬಹುದು. "

ಲಕ್ಷ್ಮಿ ಆನಂದದಿಂದ ಹೇಳಿದಳು " ವೆಂಕಟರಾವ, ನಿಮಗೆ ಏನು ಬೇಕಾದ್ದನ್ನು ನಾನು ಮಾಡಿಸಿಕೊಡುತ್ತೇನೆ. ನನ್ನ ಅಣ್ಣ ಎಂದು ನಿಮ್ಮನ್ನು ತಿಳಿದುಕೊಳ್ಳುತ್ತೇನೆ. ಎಲ್ಲ ವ್ಯವಸ್ಥೆಯನ್ನು ನೀವೇ ಮಾಡಿರಿ. ನಿಮಗೆ ಬೇಕಾದಷ್ಟು ಹಣ ತೆಗೆದುಕೊಳ್ಳಿರಿ. "

ಲಕ್ಷ್ಮಿಯ ಈ ಮಾತುಗಳನ್ನು ಕೇಳಿ, ವೆಂಕಟೇಶ ಅವರಿಗೂ ಸಂತೋಷವಾಯಿತು. ಹೃದಯವು ಆನಂದದಿಂದ ನಲಿದಾಡಿತು. " ಲಕ್ಷ್ಮಿವೈನಿ, ನಾನು ಎಷ್ಟು ಹಣ ತೆಗೆದುಕೊಳ್ಳುವುದು ? ನಮ್ಮ ಸಣ್ಣ ಸಂಸಾರಕ್ಕೆ ಸಾಕಾಗುವಷ್ಟಾದರೆ ತೀರಿತು. ನನಗೇನೂ ಹೆಚ್ಚಿಗೆ ಬೇಡ. ಹಣ ಹೆಚ್ಚು ಸಿಗುವುದು ಸಾಧ್ಯವಿದ್ದರೆ ದೇಶದ ಹಿತಕ್ಕಾಗಿ ಅದನ್ನು ಉಪಯೋಗಿಸಬೇಕು ಅನ್ನುತ್ತೇನೆ. ಮನುಷ್ಯ ಬಾಳುವದಾದರೂ ಏತಕ್ಕೆ ? ಸಾಯುವದಕ್ಕಿಂತ ಮೊದಲು ಏನಾದರೂ ಅಲ್ಪ ಸ್ವಲ್ಪ ಒಳ್ಳೆಯ ಕಾರ್ಯ ಮಾಡಿ ಸಾಯಬೇಕು. ಇಲ್ಲಿಯ ವಾತಾವರಣವೂ ಅದಕ್ಕೆ ಅನುಕೂಲವಿದೆಯೆಂದು ತೋರುತ್ತದೆ. "

" ವೆಂಕಟರಾವ್, ಈ ಲಗ್ನದ ಸಂಭ್ರಮವಿಷ್ಟು ಮುಗಿಯಲಿ. ನಿಮಗೆ ಬೇಕಾದ ಅನುಕೂಲತೆ ಮಾಡಿಕೊಡುತ್ತೇನೆ. "

ರಾತ್ರಿಯಾಯಿತು. ವಾಡೆಯಲ್ಲಿಯ ಆಳುಗಳು ಎಲ್ಲಕಡೆಗೂ ದೀಪಗಳನ್ನು ಹಚ್ಚಿದರು. ಆ ರಾತ್ರಿ ಕತ್ತಲೆಯ ಮನದಲ್ಲಿ ದೀಪವನ್ನು ಹಚ್ಚಿದಂತೆ ಲಕ್ಷ್ಮಿಗೆ ಅನಿಸಿತು. ಅವಳು ವೆಂಕಟೇಶ ಅವರನ್ನು ಅಷ್ಟು ಕೊಂಡಾಡಿದಳು!

ಮದುವೆಯ ಸಿದ್ಧತೆಯಲ್ಲಿ ದಿನಗಳು ಉರುಳಿದವು. ವಾಡೆಯ ಮುಂದೆ ರಾಜವೈಭವದ ಹಂದರವನ್ನು ಹಾಕಿದರು. ಬೀಗರನ್ನು ಇಳಿಸಲು ವಾಡೆಯಲ್ಲಿಯ ಕೆಳಭಾಗವನ್ನು ಅವರಿಗೆ ಮೀಸಲಾಗಿ ಇಡಲಾಯಿತು. ಗದಗಿನಿಂದ, ಹುಬ್ಬಳ್ಳಿಯಿಂದ ಶ್ರೇಷ್ಠ ಕುರ್ಚಿಗಳನ್ನು ತೆಗೆದುಕೊಂಡು ಬಂದರು. ಒಂದು ಸ್ಪೆಶಲ್ ಇಂಜಿನ್ ತಂದು, ಒಂದು ವಾರದ ವರೆಗೆ ಎಲ್ಲ ಕಡೆಗೂ ವಿದ್ಯುಚ್ಛಕ್ತಿಯ ದೀಪಗಳನ್ನು ಬೆಳಗಿಸುವ ವ್ಯವಸ್ಥೆ ಮಾಡಲಾಯಿತು. ಒಂದೇ, ಎರಡೇ, ಶೀನಪ್ಪನವರ ತಲೆಯಲ್ಲಿ ಬಂದುದೆಲ್ಲವೂ ಕಾರ್ಯರೂಪವಾಗಿ ಬರುತ್ತಿದ್ದವು. ಅನೇಕ ಸಲ ಶೀನಪ್ಪನವರು ಅನ್ನುತ್ತಿದ್ದರು " ನಾರಾಯಣರಾಯರ ಲಗ್ನದಲ್ಲಿ ಇಲ್ಲಿಯ ಜನರಿಗೆ ಸಾಕಷ್ಟು ಹೋಳಿಗೆ ಸಿಗುತ್ತಿರಲಿಲ್ಲ. ಇದೇ ಊರಲ್ಲಿ ಲಗ್ನವು ಆಗಲಿಲ್ಲ ಎನ್ನಿರಿ ! ಈ ಲಗ್ನದಲ್ಲಿಯಾದರೂ ಜನರು ಬೇಕಾದಷ್ಟು ಹೋಳಿಗೆ

ಹೊಡೆಯಲಿ! ತೃಪ್ತಿಯಾಗುವಂತೆ ತಿನ್ನಲಿ! ಆನಂದರಾಯರಿಗೂ ಒಬ್ಬಳೇ ಒಬ್ಬ ಮಗಳು. ಈಗ ಖರ್ಚು ಮಾಡದೆ, ಇನ್ನು ಯಾವಾಗ ಮಾಡಬೇಕು?" ಅಪಾರವಾದ ಉತ್ಸಾಹದಿಂದ ಅವರು ಕೆಲಸ ಮಾಡುತ್ತಿದ್ದರು.

ವೈಶಾಖ ಶುದ್ಧ ಪಾಡ್ಯ ಬಂದಿತು. ತದಿಗೆಯ ದಿನ ಬೆಳಗಿನ ಎಂಟು ಗಂಟೆಗೇ ಲಗ್ನ. ಸುಂದರಾ ಲಕ್ಷ್ಮಿಯ ಬೆನ್ನು ಹತ್ತಿಯೆ ಓಡಾಡುತ್ತಿದ್ದಳು. ಇದು ಸೀತಕ್ಕ ಮುಂತಾದವರಿಗೆ ಮನಸ್ಸು ಬರುತ್ತಿರಲಿಲ್ಲ. ಆದರೂ ನಿರ್ವಾಹ ವಿಲ್ಲದೆ ಸುಮ್ಮನೇ ಇರುತ್ತಿದ್ದರು. ಇನ್ನೆಷ್ಟು ದಿನ ಹೀಗೆ ಓಡಾಡಬಹುದು ಎಂದು ಮನಸ್ಸಿನಲ್ಲಿಯೆ ಅಂದುಕೊಳ್ಳುತ್ತಿದ್ದರು.

"ಇನ್ನೇನು ನಿನ್ನ ಭೆಟ್ಟಿ ಅಪರೂಪ. ಭೆಟ್ಟಿಯಾದರೂ ಆಗುತ್ತೀಯೋ ಇಲ್ಲವೋ!........ ಕೊನೆಯ ಸಲ ನಿನಗೊಮ್ಮೆ ಎರೆಯುತ್ತೇನೆ ಬಾ" ಎಂದು ಪಾಡ್ಯದ ದಿನವೇ ಲಕ್ಷ್ಮಿ ಸುಂದರಾಳನ್ನು ಎರೆದಳು. ಲಗ್ನದ ಮುನ್ನಾ ದಿನವೇ ಸಂಜೆ ಬೀಗರು ಹೈದರಾಬಾದದಿಂದ ಬಿಜಯಂಗೈದರು. ಕಳಸಾಪೂರನ್ನು ತಳಿರು ತೋರಣಗಳಿಂದ ವಿಜೃಂಭಣೆಯಿಂದ ಶೃಂಗಾರ ಮಾಡಿದ್ದರು. ವಾದ್ಯಗಳ ಮಂಗಳ ಧ್ವನಿ ಕೇಳಬರುತ್ತಿತ್ತು. ಆಕಾಶ ಬಿರಿಯುವಂತೆ ಕಹಳೆ ಮೊಳಗು ತ್ತಿತ್ತು!

ತದಿಗೆಯ ದಿನ ನಸುಕಿನಲ್ಲಿ ಬಹುಬೇಗ ಎಲ್ಲರೂ ಎದ್ದರು. ಲಕ್ಷ್ಮಿಯೂ ಉತ್ಸಾಹದಿಂದ ಎದ್ದು ಮುಖವನ್ನು ತೊಳೆದುಕೊಂಡಳು. ಸುಂದರಾಳ ಮದು ವೆಯ ಸಲುವಾಗಿ, ಅವಳು ವಿಶೇಷವಾದ ಕೆಲವು ಆಭರಣಗಳನ್ನು ಮಾಡಿಸಿಟ್ಟಿ ದ್ದಳು. ಸುಂದರಾ ಎರೆದುಕೊಳ್ಳುವುದಾದ ಮೇಲೆ ಆ ಆಭರಣಗಳನ್ನು ತೊಡಿ ಸಬೇಕೆಂದು ಅವಳು ಮನಸ್ಸಿನಲ್ಲಿ ಮಾಡಿಕೊಂಡಿದ್ದಳು. ಆನಂದದಿಂದ ಸುಂದ ರಾಳನ್ನು ಹುಡುಕುತ್ತ ಅವಳು ಮಲಗಿರುವ ಕೋಣೆಗೆ ಹೋದಳು. ಸುಂದರಾ ಅಲ್ಲಿ ಇರಲಿಲ್ಲ! ಹಾಸಿಗೆ ಬರಿದಾಗಿತ್ತು! ಒಳಗೆ ಇರಬಹುದೇನೋ ಎಂದು ಹುಡುಕಾಡಿದಳು! ಎಲ್ಲಿಯೂ ಸಿಗಲಿಲ್ಲ.

ಹೊರಗೆ ಮಂಗಳವಾದ್ಯಗಳು ಮೊಳಗುತ್ತಿದ್ದವು. ವರನ ಕಡೆಯವರು ವರನನ್ನು ಕರೆದುಕೊಂಡು ಬರಲು ಶೃಂಗಾರ ಮಾಡಿ ಕೂಡಿಸಿದ್ದರು. ಅನೇಕ ಪ್ರತಿಷ್ಠಿತ ಜನರು ಮನೆಗೆ ಬಂದಿದ್ದರು! ಸುಂದರಾ ಮಾತ್ರ ಸಿಗಲೇ ಇಲ್ಲ!

ಆ ದಿನ ಎಲ್ಲ ಆಪ್ತರ ಮುಖ ಹುಚ್ಚೆದ್ದು ಹೋಗಿದ್ದಿತು!

## ೧೭

ವೈಶಾಖ ಶುದ್ಧ ತೃತಿಯದ ದಿನವೆಂದರೆ ಜಾಗಿರದಾರ ವಾಡೆಯಲ್ಲಿಯ ಜೀವನದ ಕಷ್ಟದಿನವಾಯಿತು! ಶೀನಪ್ಪನವರಂತೂ ಬಹಳ ತಪ್ತಗೊಂಡರು. ಸಿಟ್ಟಿನಿಂದ ಅವರ ರಕ್ತ ಕುದಿಯತೊಡಗಿತು. "ಜಾಗಿರದಾರರ ಮರ್ಯಾದೆಗೆ ಸಾವಿರಾರು ಜನರ ಎದುರಿಗೆ ಕಲಂಕ ತಂದವಳು ಯಾರು? ಸುಂದರಾ ಅಲ್ಲ! ಇವೆಲ್ಲಕ್ಕೂ ಮೂಲ ಕಾರಣ ಲಕ್ಷ್ಮಿ! " ಎಂದು ಅವರು ಎಲ್ಲರೆದುರು ಹೇಳಲು ಹಿಂಜರಿಯಲಿಲ್ಲ.

ಈ ಸುದ್ದಿಯನ್ನು ಕೇಳಿದ ಕೂಡಲೇ ಲಕ್ಷ್ಮಿ ಎದೆಯೊಡಕೊಂಡಳು. ಸುಂದರಾ ಹೀಗೆ ನಾಪತ್ತೆಯಾಗಿ ಹೋಗುವಳೆಂದು ಲಕ್ಷ್ಮಿ ಎಣಿಸಿರಲಿಲ್ಲ. ಈ ದುರ್ಘಟನೆಗೆ ಗುರಿ ತಾನಾಗುವೆನೆಂದು ಲಕ್ಷ್ಮಿ ಎಂದೂ ಕಲ್ಪಿಸಿರಲಿಲ್ಲ. ದೇಹದ ಮೇಲೆ ತಲೆಯನ್ನು ಇಟ್ಟುಕೊಳ್ಳುವುದೂ ಸಹ ದುಃಸಾಧ್ಯವಾಗುವಷ್ಟು ಅವಳ ತಲೆ ಭಾರವಾಯಿತು. ದೇವರ ಕೃಪೆಯಿರದಿದ್ದರೆ ಅವಳು ಆ ದಿನ ಏನಾಗುತ್ತಿದ್ದಳೋ ಏನೋ!

ತನ್ನ ಪತಿಯನ್ನು ಕೂಡಿಸಿಕೊಂಡು ವೆಂಕಟಪತಿಯನ್ನು ಸ್ಮರಿಸಿದಳು. ದೇವರ ಧ್ಯಾನ ಮಾಡಿದಳು. "ಜನರು ಏನೇ ಅನ್ನಲಿ! ದೇವಾ, ನಿಮ್ಮ ಪಾದದ ಮೇಲೆಯೇ ಬೀಳುವೆ" ಎಂದು ದೇವರೆದುರಿಗೇ ಕುಳಿತಳು. ಅಟ್ಟದಿಂದ ಕೆಳಗಿಳಿದು ಬಂದು ಅಲ್ಲಲ್ಲಿ ಓಡಾಡಿ, ನಾಲ್ಕು ಜನರೆದುರು ತಲೆಯೆತ್ತುವಂತೆ ಅವಳಿಗೆ ಆಗಲಿಲ್ಲ.

ಶೀನಪ್ಪನವರು ಗೋವಿಂದರಾಯರ ಎದುರು ಮಾತನಾಡಿಕೊಂಡರು. "ನೋಡಿರಿ, ತಾನು ಮಾಡಿದ್ದಾಳೆ ತಪ್ಪು! ಅದಕ್ಕೆ ಕೆಳಗೆ ಬರುವ ಧೈರ್ಯವಿಲ್ಲ. ತನ್ನದೇನೂ ತಪ್ಪು ಇರದಿದ್ದರೆ, ನಿರ್ಭಯದಿಂದ ಓಡಾಡಬೇಕಾಗಿತ್ತು! ಸರಿಯಾಗಿ ಇದ್ದ ಮನುಷ್ಯನಿಗೆ ಜಗತ್ತಿನಲ್ಲಿ ಏನೂ ಭಯವಿಲ್ಲ. ನಿಮಗೇನು ಎನಿಸುತ್ತದೆ ಗೋವಿಂದರಾವ್?"

ಗೋವಿಂದರಾಯರು ಶೀನಪ್ಪನವರ ಮಾತಿನ ಸರಣಿಯನ್ನು ಒಪ್ಪಿಕೊಂಡು ತಲೆದೂಗಿದರು. "ಬಡವರ ಮನೆಯ ಹೆಣ್ಣು! ಭಂಗಾರ ಏನೂ

ಕಂಡಿರುವದಿಲ್ಲ. ಹಣದ ಆಶೆಗೆ ಬೇಕಾದ್ದು ಮಾಡುತ್ತವೆ! ನನಗೆ ಇದೆಲ್ಲ ಮೊದಲಿಗೇ ಗೊತ್ತು. ನಮ್ಮಾಕೆ ಮೇಲಿಂದ ಮೇಲೆ ಈ ಮಾತನ್ನು ಹೇಳಿ ದ್ದಾಳೆ ಶೀನಪ್ಪನವರ!"

ಲಕ್ಷ್ಮಿಯ ಸಲುವಾಗಿ ಮಾತನಾಡುವ ಶೀನಪ್ಪನವರು ಈಗ ಅವಳ ವಿರುದ್ಧವಾಗಿ, ಗೋವಿಂದರಾಯರ ಮತ್ತು ಸೀತಕ್ಕನವರ ಬೆನ್ನು ಛಪ್ಪರಿಸಲು ಏನೂ ಹಿಂಜರಿಯಲಿಲ್ಲ. "ಗೋವಿಂದರಾವ, ನೀವಾಡುವುದು ಹದಿನಾರಾಣೆ ಸತ್ಯವಿದೆ ನೋಡಿರಿ. ಸುಂದರಾ ತನ್ನ ಕಡೆಗಿದ್ದರೆ, ಆನಂದರಾಯರ ಪಾಲೂ ತನಗೆ ಸಿಗುವದೆಂದು ತಿಳಿದಿರಬೇಕು. ಹುಚ್ಚು! ಕಾಗದದ ಲೆಖ್ಖಪತ್ರ ಇವಳಿ ಗೇನು ತಿಳಿಯಬೇಕು? ಆ ಖಾದಿ ಭುಕ್ತ ವೆಂಕಪ್ಪನಿಗೆ ಆದರೂ ಏನು ತಿಳಿ ಯಬೇಕು? ನಾಳೆ ತಾವೇ ಮಣ್ಣು ತಿನತಾರ....ಮಣ್ಣು!"

"ಶೀನಪ್ಪನವರ, ನಾವು ಯಾಕ ಹೆದರಬೇಕು? ಮದುವೆ ನಿಶ್ಚಯ ಆದ ದಿವಸ ತಮ್ಮ ಪಾಲಿನದೆಲ್ಲ ತಮ್ಮ ಮಗಳಿಗೆ ಸುಂದರಾಗೆ—ಅಂದರೆ ಅವಳ ಗಂಡ, ನಮ್ಮ ಬೀಗಗೆ—ಎಂದು ವಚನಪತ್ರ ಬರೆದುಕೊಟ್ಟು ಬಿಟ್ಟಿದ್ದಾರೆ! ಪಾಪ ಹೆಂಗಸು! ಅವಳಿಗೇನು ಗೊತ್ತಾಗುವುದು?"

"ಗೋವಿಂದರಾವ, ಈ ಪರಿ ನಾವು ಅಪಮಾನ ಮಾಡಿಸಿಕೊಂಡು ಲಕ್ಷ್ಮಿ ಜೋಡಿ ಕೂಡಿ ಇರುವುದರೊಳಗ ಏನೂ ತಥ್ಯ ಇಲ್ಲ. ಎಲ್ಲಾ ಪಾಲುಮಾಡಿಸಿ ಬಿಡೋಣ."

ಶೀನಪ್ಪನವರ ಮಾತು ಕಾರ್ಯಾಚರಣೆಯಲ್ಲಿ ಬಂದಿತು. ಏಕಾದಶಿಯ ದಿನ ಬೆಳಗಿನಲ್ಲಿ ಗದಗಿನಿಂದ ಹಲವು ಆಳುಗಳು ಹಾರಿ, ಗುದ್ದಲಿ, ಪಿಕಾಶೆ ಹಿಡಿ ದುಕೊಂಡು ವಾಡೆಯನ್ನು ಪ್ರವೇಶಿಸಿದರು. ವಿಶಾಲವಾದ ನಡುಮನೆಯಲ್ಲಿ ಮಧ್ಯದಲ್ಲಿ ಒಂದು ಗೆರೆ ಹೊಡೆದು, ಕಚ್ಚು ಹಾಕಿ ಅಗಿಯಲು ಆರಂಭಿಸಿದರು. ಅದರಂತೆ ಪಡಸಾಲೆಯಲ್ಲಿಯೂ ನಡೆಯಿತು.

ಅಗಿಯುವ ಈ ಸಪ್ಪಳ ಕೇಳಿ, ಜನರ ಗುಜುಗುಜು ಧ್ವನಿ ಕೇಳಿ, ಧ್ಯಾನ ಸ್ಥರಾಗಿ ದೇವರ ಮನೆಯಲ್ಲಿ ಕುಳಿತ ಸುಬ್ಬಕ್ಕನವರು ಹೊರಗೆ ಬಂದರು. ಆಳು ಕಚ್ಚುಹಾಕಿ ನೆಲವನ್ನು ಅಗಿಯುತ್ತಿರುವ ಆಳುಗಳನ್ನು ನೋಡಿ ಕಕ್ಕಾವಿಕ್ಕಿ ಯಾಗಿ ಆಕ್ರೋಶ ಮಾಡಿದರು. "ಯಾರೋ ನೀವು? ಮನೆಯಲ್ಲಿ ಬೇಕಾ ದಾಗ ಬಂದು, ಬೇಕಾದ್ದು ಮಾಡುವುದೇನು? ನಿಮಗೆ ಹೇಳುವವರೂ ಕೇಳು

ವರೂ ಯಾರೂ ಇಲ್ಲವೇನು ? ನಡೆಯಿರಿ ಇಲ್ಲಿಂದ. ನಾನು ಹೇಳುತ್ತೇನೆ. ಮನೆಯೆಂದರೆ ಏನು ಎಂದು ತಿಳಿದಿದ್ದೀರಿ.... "

ಆಳುಗಳು ತಮ್ಮ ಕೆಲಸ ನಿಲ್ಲಿಸಿ ಸುಬ್ಬಕ್ಕನವರಿಗೆ ಹೇಳಿದರು " ಯವ್ವಾವರ, ನಮಗೇನು ಹುಚ್ಚು ಹಿಡಿದಿಲ್ಲ ಬೇಕಾದ್ದು ಮಾಡಲಿಕ್ಕೆ. ಕೇಳಿರಿ ನಿಮ್ಮ ರಾಯರೇ ಕರೆದುಕೊಂಡು ಬಂದಾರೆ ನಮ್ಮನ್ನ. "

ನಡುಮನೆಯಲ್ಲಿಯ ಗದ್ದಲ ಕೇಳಿ ಗೋವಿಂದರಾಯರು ಅಲ್ಲಿಗೆ ಧಾವಿಸಿದರು " ಅಹುದು ಸುಬ್ಬಕ್ಕ, ನಾನೇ ಹೇಳಿದ್ದು. "

ಹಿರಿಯರಾದ ಸುಬ್ಬಕ್ಕನವರಿಗೆ ಗೋವಿಂದರಾಯರ ಮಾತುಗಳನ್ನು ಕೇಳಿ ಸಂಕಟವಾಯಿತು. ಹೊಟ್ಟೆಯಲ್ಲಿ ಕಸಿವಿಸಿಯಾಯಿತು. " ಮನೆಯಲ್ಲಿ ಹಿರಿಯರು, ಕೇಳಿಕೊಳ್ಳುವವರು ಯಾರೂ ಇಲ್ಲವೇನು ? ಒಮ್ಮೆಲೇ ಹೀಗೆ ಮನೆ ಒಡೆದರೆ ಏನು ಮಾಡಬೇಕು ? "

" ಸುಬ್ಬಕ್ಕ, ಶೀನಪ್ಪನವರಿಗೆ ಎಲ್ಲ ಹೇಳಿದೆ. "

" ಅಹುದು " ಎಂದು ಸೀತಕ್ಕನವರೂ ಅದಕ್ಕೆ ಧ್ವನಿಗೂಡಿಸಿದರು. " ನನ್ನ ತಮ್ಮನಿಗೆ ಏನು ಅಪಮಾನವಾಯಿತು ? ಎಷ್ಟು ಮರ್ಯಾದೆ ಹೋಯಿತು ? ನಿಮಗೆ ಏನೂ ತಿಳಿಯುವದಿಲ್ಲ........ ತಿಳಿದೂ ತಿಳಿದೂ " ಗುಮ್ಮನಗುಸಗ " ನ ಹಾಗೆ ಇರಬೇಕು........ ಸುಂದರಿಯನ್ನು ಓಡಿಸಿದವಳು ನಿಮ್ಮ ಸೊಸೆಯೇ. ನಮಗೇನು ತಿಳಿಯುವುದಿಲ್ಲವೇನು ? ಅಷ್ಟು ಬುದ್ಧಿಯಿಲ್ಲದವರು ನಾವೇನೂ ಅಲ್ಲ ! "

" ಅದಕ್ಕೇ ಸುಬ್ಬಕ್ಕ " ಗೋವಿಂದರಾಯರು ತಮ್ಮ ಧ್ವನಿ ಎಳೆದರು. " ನೀವೇನೋ, ನಿಮ್ಮ ಸೊಸೆ ಏನೋ ! ಬೇಕಾದ ಹಾಗೆ ಕೂಡಿ ಇರ್ರಿ. ನಾವು ನಮ್ಮ ಪಾಲು ಮಾಡಿಕೊಳ್ಳುತ್ತೇವೆ. ಬೇರೆ ಇರುತ್ತೇವೆ. ನಮ್ಮ ಉಸಾಬರಿಗೆ ನೀವು ಬರಬೇಡಿರಿ. ನಿಮ್ಮ ಉಸಾಬರಿಗೆ ನಾವು ಬರುವದಿಲ್ಲ. "

ಇವೆಲ್ಲ ಮಾತು ಕೇಳುತ್ತಿರುವಂತೆ, ಸುಬ್ಬಕ್ಕನವರ ಹೊಟ್ಟೆಯಲ್ಲಿ ಸಿಟ್ಟು ಉರಿಯುತ್ತಿತ್ತು. ಹೊಟ್ಟೆಯಲ್ಲಿಯ ಸಿಟ್ಟು ರಟ್ಟೆಯಲ್ಲಿ ಬರುವವೇನೊ ಎಂಬುವಂತೆ ತೋರುತ್ತಿತ್ತು; " ಮನೆಯೆಲ್ಲ ಹಾಳು ಮಾಡುತ್ತೀರಿ. ಹಾಳಾಗಲಿ.... ಹಾಳಾಗಿ ಹೋಗಿರಿ. " ತಮ್ಮ ಜಪಮಾಲೆಯನ್ನೆ ನೆಲಕ್ಕೆ ಅಪ್ಪಳಿಸಿ ಒಗೆದು ಸುಬ್ಬಕ್ಕ ಒಳಗೆ ಹೋಗಿಬಿಟ್ಟರು.

ನಾಗಾಲೋಟದಿಂದ ಮತ್ತೆ ನಡಮನೆಗೆ ಬಂದು ಸುಬ್ಬಕ್ಕ ಚೀರಿಕೊಂಡರು— "ಹುಡಿಗೆ ಹೋಗಿದ್ದಾಳೆ. ಅವಳ ಚಿಂತೆಯೇ ಇಲ್ಲ. ಎಲ್ಲಿದ್ದಾಳೋ ಏನೋ ನೋಡುವುದನ್ನು ಬಿಟ್ಟು........ ?"

"ಅವಳೇನು ಸತ್ತಿಲ್ಲ." ಗೋವಿಂದರಾಯರು ಥಟ್ಟನೆ ಉತ್ತರ ಕೊಟ್ಟರು. "ಹಾಗಿದ್ದರೆ ಹೆಣ ಮೂರು ದಿವಸದಲ್ಲಿಯೇ ಮೇಲೆ ಬರುತ್ತಿತ್ತು. ಎಲ್ಲ ಭಾವಿ ಕೆರೆ ಹುಡುಕಿಸಿ ನೋಡಿದೆ. ಪೋಲೀಸರಿಗೆ ವರ್ದಿ ಮಾಡಿದೆ. ಎಲ್ಲಿಯಾದರೂ ಜೀವಂತವಿದ್ದಾಳೆ. ಅಪ್ಪನ ಚಾಳಿ ಮಗಳಿಗೆ ಮತ್ತೇನು ?"

"ಎಷ್ಟು ನಿಷ್ಕರುಣೆ, ಎಷ್ಟು ನಿರ್ದಯಿ" ಸುಬ್ಬಕ್ಕನವರ ಕಣ್ಣುಗಳಲ್ಲಿ ನೀರೂರಿದವು. "ಇವರು ಹೋದ ಮೇಲೆ ಹೀಗೆಲ್ಲ ಆಗುತ್ತದೆಂದು ನನಗೆ ಗೊತ್ತಿತ್ತು. ನಾನು ಹೇಳುತ್ತೇನೆ. ಇವರು ಇದ್ದಾಗಲೆ ಗೊಂದಲ ಹಾಕಿದವರು, ಈಗ ಬಿಡುತ್ತೀರಾ? ಹಾಳಾಗಿ ಹೋಗಲಿ. ರಾಮ ರಾಮ. ಈ ಹಾಳು ಸಂಸಾರ!"

ಸುಬ್ಬಕ್ಕನವರು ತಮ್ಮ ನಿತ್ಯಕರ್ಮದ ದೇವರ ಧ್ಯಾನವನ್ನು ಬಿಟ್ಟು, ತಮ್ಮ ಕೋಣೆಯಲ್ಲಿ ಹೋಗಿ, ಶಾಲಿನಿಂದ ಮುಸುಕು ಹಾಕಿಕೊಂಡು ಕುಳಿತು ಬಿಟ್ಟರು. ಕೃಷ್ಣರಾಯರು ತೀರಿಕೊಂಡಿದ್ದರಿಂದ ಹಲ್ಲು ಮುರಿದ ಹಾವಿನಂತೆ ಸುಬ್ಬಕ್ಕನವರಾಗಿದ್ದರು. ಅವರಿಗೆ ಬೇಕಾದಷ್ಟು ಸಿಟ್ಟು ಬಂದಿದ್ದರೂ, ಹಿಂದಕ್ಕೆ ಕೀಲಿಕೈ ಒಗೆದುಹೋದಂತೆ, ಈಗ ಅವರಿಗೆ ಹೋಗಲು ಸಾಧ್ಯವಾಗಲಿಲ್ಲ. ಮುಸುಮುಸು ಮಾಡುತ್ತ ತಮ್ಮ ಶಾಲಿನ ಮುಸುಕಿನಲ್ಲಿಯೆ ಕುಳಿತರು.— "ನನ್ನ ಸೊಸೆ, ನಾನೂ ಬೇರೆ ಇರಬೇಕಂತೆ. ಎಂಥ ಮಾತು?" ಈ ಮಾತನ್ನು ನೆನೆಸುತ್ತ ಅವರು ಬಿಳಿಗೋಡೆಯ ಕಡೆಗೆ ದಿಟ್ಟಿಸಿ ನೋಡುತ್ತಿದ್ದರು.

ಈ ಹೊತ್ತಿನಲ್ಲಿ ಶೀನಪ್ಪನವರು ಒಳಗೆ ಪ್ರವೇಶಿಸಿ, ಸುಬ್ಬಕ್ಕನವರಿಗೆ ಉಪದೇಶ ಮಾಡಲು ಅಣಿಯಾದರು— "ಅಪ್ಪನವರೇ, ಯಾಕೆ ನೀವು ಇಷ್ಟು ಹಚ್ಚಿಗೊಳ್ಳುವುದು ? ನಿಮಗಾದರೂ ಏನು ಇದೆ ಈ ಸಂಸಾರದಲ್ಲಿ—ಮುಖ್ಯ ವಸ್ತುವೇ ಇಲ್ಲವೆಂದ ಮೇಲೆ? ಹೇಗಾದರೂ ಮಾಡಿ, ಪುಣ್ಯದ ಕೆಲಸವನ್ನು ಮಾಡುತ್ತ ಕಾಲಹರಣ ಮಾಡುವುದು ?........ ಗೋವಿಂದರಾಯರೂ, ಆನಂದ ರಾಯರೂ, ನಿಮ್ಮ ಮಗ ಎಲ್ಲರೂ ದೊಡ್ಡವರಾಗಿದ್ದಾರೆ. ಅವರಿಗೂ ತಿಳಿಯುವುದು. ತಮ್ಮ ತಮ್ಮ ಪಾಲು ತೆಗೆದುಕೊಳ್ಳಲಿ. ಏನು ಮಾಡುತ್ತಾರೋ

ಮಾಡಲಿ. ಎಲ್ಲ ಬೆಳ್ಳಿ, ಭಂಗಾರ, ಹೊಲ, ಮನೆ ಹಂಚಿಕೊಟ್ಟು ಬಿಡಿರಿ. ಅಂದರ ನೀವು ಹಿರಿಯರು, ನಿಮಗೆ ಸಲ್ಲತಕ್ಕ ಮಾನ ಅವರು ಕೊಡುವರು. ”

“ ಏನು ಹೇಳತೀ ಶೀನಪ್ಪ! ನೀನೂ ಅವರಂತೆ ಹೇಳುವಿ. ಎಷ್ಟೋ ದಿವಸದಿಂದ ಬಂದ ಒಂದೇ ಘರಾಣೆ. ಇದನ್ನು ನನ್ನ ಕಣ್ಮುಟ್ಟ, ನಾನು ಬದುಕಿರುವಾಗ ಹರಿದು ಹಂಚಿ ಹಾಕಬೇಕೇನು? ಅವರು ಇದ್ದರೂ ಅಂದರ, ಎಂದಿಗೂ ಈ ಮಾತು ಯಾರಿಂದಲೂ ಎತ್ತಿಸಿ ಕೊಡುತಿದ್ದಿಲ್ಲ, ನಾನು ಹೇಳುತ್ತೇನೆ. ಶೀನಪ್ಪ, ನಮ್ಮ ಮನೆ, ಒಡೆದ ಕನ್ನಡಿ ಆಗಬೇಕೇನು?.......... ಏಕಾದಶಿ ತಿಥಿ ಇವತ್ತು. ಉಪವಾಸ! ಸ್ವಸ್ಥ ದೇವರ ಧ್ಯಾನ ಮಾಡಿಕೊಂಡು ಕೂಡಬೇಕು ಅಂತ ಮಾಡಿದ್ದೆ........ ಅಯ್ಯೋ! ಯಾವುದಕ್ಕೂ ಮುಹೂರ್ತ ಸಹಿತ ನೋಡಬಾರದೇನು ?........ ಶೀನಪ್ಪ, ಆ ಗುದ್ದಲಿ........ನನ್ನ ಎದಿಯೊಳಗೇ ಹಾಕಿದಂತೆ ಆಗಲಿಕ್ಕೆ ಹತ್ತೇದ. ”

“ ಅವ್ವನವರೇ, ದೊಡ್ಡ ಮನೆತನ ತೂಗಿಸಿಕೊಂಡು ಹೋದವರು ನೀವು. ನಿಮಗೆ ದುಃಖ ಅನಿಸುವುದು ಸಹಜವೇ. ” ಶೀನಪ್ಪನವರು ಸುಬ್ಬಕ್ಕನವರಿಗೆ ಸಮಾಧಾನ ಮಾಡಲು ಪ್ರಯತ್ನಿಸಿದರು— “ ಇವತ್ತೆನೋ ಆಳುಗಳು ಬಂದಿದ್ದಾರೆ! ಬರಲಿ! ನಡಮನೆಯಲ್ಲಿ ಒಂದು ಗೋಡೆ ಹಾಕಿಸಿಬಿಡೋಣ! ಏನಾಗುತ್ತದೆ? ಎರಡು ಚೆಂದವಾದ ಕೋಣೆಗಳು ಆಗುವವು.............ಮುಂದೆ ಈ ಕೆಲಸ ಸಾಗದಂತೆ ನೋಡಿಕೊಳ್ಳೋಣ........ಏನೇಆದರೂ ಗೋವಿಂದರಾಯರು ಜಗಳಾಡಹತ್ತಿದರೆ, ನಿರ್ವಾಹವಿಲ್ಲ. ಅವರವರ ಪಾಲು ಮಾಡಿ ಬಿಡೋಣ.... ಅವರವರ ಭಾಗ ಸರಿಯಾಗಿ ಹೋಗುತ್ತದಿಲ್ಲವೋ ನೀವು ನೋಡಿರಿ. ಏನಾದರೂ ನೀವು ಹಿರಿಯರು. ನಿಮಗೆ ಸಲ್ಲತಕ್ಕ ಮಾನ ಸಲ್ಲಲೇ ಬೇಕು. ”

ಶೀನಪ್ಪನವರ ಅದೇ ರಾಗವನ್ನು ಕೇಳಿ, ಸುಬ್ಬಕ್ಕನವರು ಸುಮ್ಮನೇ ಕುಳಿತರು. ತಮ್ಮ ಮಾತುಗಳಿಗೆ ಒಪ್ಪಿತ್ತಿರುವರೆಂದು ತಿಳಿದು ಶೀನಪ್ಪ ಸುಬ್ಬಕ್ಕನವರಿಗೆ ಮೆಲ್ಲಗೆ ಹೇಳಿದರು— “ ನಾನಂತೂ ಈ ಮನೆಯಲ್ಲಿ ಬಹಳ ದಿನಗಳಿಂದ ಇದ್ದವ! ನಿಮ್ಮಂತೆ ನನಗೂ ಪಾಲು ಮಾಡಲು ಸೇರುವದಿಲ್ಲ. ಒಂದು ವೇಳೆ ಪಾಲು ಆದದ್ದೇ ಆದರೆ........ ” ಶೀನಪ್ಪನವರು ಸ್ವಲ್ಪ ತಡೆದು ನಿಂತು ಹೇಳಿದರು “ ನನಗೂ ಒಂದು ಭಾಗ ಕೊಡಬೇಕು. ರಾಯರು ಇದ್ದಾಗಲೇ ನನಗೆ ಆ ವಚನವನ್ನು ಕೊಟ್ಟಿದ್ದಾರೆ! ”

" ನಿನಗೇ ಎಲ್ಲಾ ಗೊತ್ತು ಶೀನಪ್ಪ ! ಅವರು ವಚನ ಕೊಟ್ಟಿದ್ದರೆ, ಅದನ್ನು ಪಾಲಿಸುವದು ನನ್ನ ಕರ್ತವ್ಯ ! ಎಷ್ಟು ಹೊಲವೋ ಮನೆಯೋ ನನಗೇನು ಗೊತ್ತು !........ನೀನೇ ಬೇಕಾದ್ದು ಮಾಡು !. ಬೆಳ್ಳಿ, ಭಂಗಾರದ ಬಗ್ಗೆ ಕೇಳು. ಅದೆಲ್ಲ ಸಂಪೂರ್ಣ ನನ್ನ ತಲೆಯೊಳಗೆ ಇದೆ !........ಆದರೆ ಶೀನಪ್ಪ, ಒಂದು ಮಾತು ನಾನು ಹೇಳುತ್ತೇನೆ. ನಾನು ಬದುಕಿ ಇರುವವರೆಗೂ ಈ ಮನೆಯೊಳಗ ಭಾಗ ಮಾಡಿಸಿ ಕೊಡುವದಿಲ್ಲ. ನಾನು ಹೇಳುತ್ತೇನೆ! ನನ್ನ ಕೊಲ್ಲಬೇಕು, ಮನೆ ಒಡೆಯಬೇಕು. "

" ಹಾಗಾದರೆ ವೆಂಕಟೇಶ ಅವರಿಗೆ ಏನು ಮಾಡುವಿರಿ ? ಅವರು ಏನು ಕೆಲಸ ಮಾಡಬೇಕು ? ಹಾಗೆಯೆ ಸುಮ್ಮನೇ ಜಾಗಿರದಾರರ ಮನೆ ಕೂಳು ತಿಂದು ಸ್ವಸ್ಥವಾಗಿ ಕೂಡಬೇಕೇನು ? ಈ ಮನೆಯ ಅನ್ನದ ಋಣ ನನಗೆ ಇದ್ದಷ್ಟು, ಅವರಿಗೇನು ಇದೆ ? ಅವರು ಇಲ್ಲಿಗೆ ಬಂದದ್ದಾದರೂ ಯಾತಕ್ಕೆ ? ....ಏನೋ ನಾರಾಯಣರಾಯರಿಗೆ ತಿಳಿಯುವದಿಲ್ಲಾ ಎಂದು ಲಕ್ಕಮ್ಮ ಕರೆಯಿಸಿಕೊಂಡದ್ದು.... "

" ಶೀನಪ್ಪ, ಏನು ಅನ್ನುತ್ತೀ. ನನ್ನ ಮಗನಿಗೆ ತಿಳಿಯೂದಿಲ್ಲವೇ ? ನೀನು ಬೇಕಾದ್ದು ಅನ್ನು. ಈ ಮಾತನ್ನು ಮಾತ್ರ ಹೇಳಬೇಡ. ಏನೋ ಸಣ್ಣವನಿರುವಾಗ ಸ್ವಲ್ಪ ತಲೆ ಕೆಟ್ಟಿತ್ತು. ನಮ್ಮ ಲಕ್ಷ್ಮೀಬಾಯಿಯ ಕಾಲ್ಗುಣದಿಂದ ಈಗ ಎಲ್ಲ ಗುಣವಾಗಿದೆ ! ನಾಲ್ಕು ಜನರೆದುರಿಗೆ ಏನಾದರೂ ಅನ್ನುತ್ತಹೋಗಬೇಡ ಶೀನಪ್ಪ........ "

ನಾರಾಯಣರಾಯರು ತಿಳಿಯದವರು, ಹುಚ್ಚ ಎಂದ ಕೂಡಲೇ ತಾಯಿಯಾದ ಸುಬ್ಬಕ್ಕನವರಿಗೆ ಏನೂ ಮನಸ್ಸು ಬರುತ್ತಿರಲಿಲ್ಲ. ಅದು ಮೊದಲಿನಿಂದಲೂ ಬೆಳೆದುಬಂದ ಸ್ವಭಾವ ಅವರದಾಗಿತ್ತು. ಇದು ಶೀನಪ್ಪನವರಿಗೆ ಗೊತ್ತಿದ್ದರೂ, ಅಂದು ನಾಲಗೆ ತಪ್ಪಿ ಈ ಮಾತುಗಳನ್ನು ಹೇಳಿದರು. ಮುಂದೆ ಸುಬ್ಬಕ್ಕನವರ ಉತ್ತರ ಕೇಳಿದ ಮೇಲಂತೂ ಶೀನಪ್ಪನವರು ಮತ್ತಿಷ್ಟು ತಮ್ಮ ಮನಸ್ಸಿನ ಸಮತೂಕವನ್ನು ಕಳೆದುಕೊಂಡು ಒದರಿದರು–- " ಅವ್ವನವರೇ, ನನಗೆ ಹೇಳಿರಿ ಈಗ—ಯಾಕೆ ವಂಕಟೇಶ ಅವರು ಬಂದದ್ದು ? ನಿಮ್ಮ ಲಕ್ಷ್ಮೀಬಾಯಿ ಸಲುವಾಗಿಯೇ ಅಲ್ಲವೇ ?.......ನಾನು ಮಾಡಿದ ಉಪಕಾರ ಅವಳಿಗೂ ನೆನಪಿಲ್ಲ. ನಿಮ್ಮ ಪೆದ್ದ ನಾರಾಯಣರಾಯರಿಗೂ ಗೊತ್ತಿಲ್ಲ ! ........ ನನ್ನನ್ನು

ಛೇಡಿಸಲೆಂದೇ ಅವರು ಬಂದಿದ್ದಾರೆ. ನನಗೆ ತಿಳಿಯುವುದಿಲ್ಲವೇನು ? ”

ಮೊದಲೇ ಗೋವಿಂದರಾಯರ ಮಾತುಗಳಿಂದ ಸುಬ್ಬಕ್ಕನವರಿಗೆ ಒಂದು ಹುಣ್ಣಾಗಿತ್ತು. ಈಗ ಹುಣ್ಣಿನ ಮೇಲೆ ಬರೆ ಕೊಟ್ಟಂತೆ ಆಯಿತು. “ ಶೀನಪ್ಪ, ನೀನೂ ಅವರ ಕಡೆಗೇ ಇರುವಿ. ಹೋಗು, ಈ ಕೋಣೆ ಬಿಟ್ಟು ಹೊರಗೆ ಹೋಗು. ಬೇಕಾದ್ದು ಮಾಡಿಕೋ........... ” ಸಹಿಸಲಾರದ ದುಃಖದಿಂದ, ಅವರ ಕಣ್ಣುಗಳಲ್ಲಿ ಕಂಬನಿಗಳು ಹೊರಚಿಮ್ಮಿದವು. ತಮ್ಮ ಕೆಂಪು ಸೀರೆಯ ಸೆರಗನಿಂದ, ಮುಖವನ್ನು ಮುಚ್ಚಿಕೊಂಡು ಬಿಕ್ಕಿಸಿ ಬಿಕ್ಕಿಸಿ ಅತ್ತರು.

## ೧೮

“ ರಘುಪತಿ ರಾಘವ ರಾಜಾರಾಮ
ಪತೀತ ಪಾವನ ಸೀತಾರಾಮ ! ”

ಹಗಲು ರಾತ್ರಿ ಈ ಸಾಮೂಹಿಕ ಧ್ವನಿ ಕೇಳಿಸುತ್ತಿತ್ತು. ಹನ್ನೆರಡು ಚಕ್ರಗಳು ಒಂದೇ ಸವನೆ ತಿರುಗುತ್ತಿದ್ದವು. ಹಳ್ಳಿಯ ಜನ, ಗೊಂಗಡಿಗಳನ್ನು ಹೊತ್ತುಕೊಂಡು ಬಂದು, ಅಚ್ಚರಿಬಟ್ಟು ಎಲ್ಲ ಕಡೆಗೂ ಕಣ್ಣುಗಳನ್ನು ಹೊರಳಿಸಿ ನೋಡುತ್ತಿದ್ದರು. ಹೊರಗೆ ಬಾಗಿಲದ ಮೇಲೆ “ ಕಾಂಗ್ರೆಸ್ ಕಚೇರಿ ” ಎಂಬ ದೊಡ್ಡ ಬೋರ್ಡು ತೂಗುಹಾಕಲ್ಪಟ್ಟಿತ್ತು. ಒಳಗೆ ಪ್ರವೇಶಿಸಿದ ಕೂಡಲೇ ಎದುರಿಗೆ ಎತ್ತರದ ಪೀಠದ ಮೇಲೆ ಗಾಂಧೀಜಿಯವರ ದೊಡ್ಡ ಫೋಟೊ ಇತ್ತು. ಅದಕ್ಕೆ ಹೂಮಾಲೆ ಮತ್ತು ನೂಲಿನ ಮಾಲೆಗಳನ್ನು ಹಾಕಿ ಅಲಂಕರಿಸಿದ್ದರು. ವಿಶಾಲವಾದ ಪಡಸಾಲೆಯ ತುಂಬ ಶಿಸ್ತಿನಿಂದ ಅಚ್ಚುಕಟ್ಟಾಗಿ ಹನ್ನೆರಡು ರಾಟಿಗಳನ್ನು ಇಟ್ಟಿದ್ದರು. ಆ ರಾಟಿಗಳನ್ನು ತಿರುಗಿಸುವವರಲ್ಲಿ ಹಲವಾರು ಕಳಸಾಪೂರ ಮತ್ತು ಸುತ್ತಲಿನ ಹಳ್ಳಿಯವರಿದ್ದರು. ಇನ್ನೂ ಕೆಲವರು ಬೇರೆ ಊರಿನಿಂದ ಬಂದವರು ಇದ್ದರು. ಅವರೆಲ್ಲರೂ ಖಾದಿ ವೇಷಧಾರಿಗಳಾಗಿ ಸ್ವಚ್ಛವಾದ ಬಿಳಿಬಟ್ಟೆಗಳನ್ನು ಧರಿಸಿದ್ದರು. ಚಕ್ರಗಳು ಗರಗರನೆ ತಿರುಗುತ್ತಿದ್ದವು. ನೂಲನ್ನು ಸರಸರನೆ ತೆಗೆಯುತ್ತಿದ್ದರು. “ ರಘುಪತಿ ರಾಘವ ರಾಜಾರಾಮ ” ಎಂಬ ಭಕ್ತಿಭಾವದ ಧ್ವನಿಯು ಗಡುಚಾಗಿ ಯಾವಾಗಲೂ ಕೇಳಿಸು

ತ್ತಿತ್ತು.

ವೆಂಕಟೇಶ ಅವರ ನೇತೃತ್ವದಲ್ಲಿ ನಡೆದ ಈ ಖಾದಿ ನೂಲುವ ಸಪ್ತಾಹವು ಒಳ್ಳೆ ಯಶಸ್ವಿಯಾಗಿತ್ತು. ಹಳ್ಳಿಗರಿಗೆ ಸಂಜೀವಿನಿಯಾಗಿತ್ತು. ಅವರಿಗೆ ಕಾಂಗ್ರೆಸ್ ಅಂದರೆ ಗೊತ್ತಿರಲಿಲ್ಲ. ಖಾದಿ ಅಂದರೆ ಗೊತ್ತಿರಲಿಲ್ಲ. ಗಾಂಧೀಜಿ ಯವರೆಂದರೆ ಗೊತ್ತಿರಲಿಲ್ಲ !! ಇಷ್ಟು ಅಜ್ಞಾನದಲ್ಲಿದ್ದ ಈ ಜನರಲ್ಲಿ ಈ ಸಪ್ತಾ ಹವು ನೂತನ ದೀಪ್ತಿಯನ್ನು ಉಂಟು ಮಾಡಿದಂತಾಗಿತ್ತು. ಹಳ್ಳಿಗರು ಬರು ತ್ತಿದ್ದರು; ಎಲ್ಲವನ್ನು ಕಣ್ಣಾರೆ ನೋಡುತ್ತಿದ್ದರು. ತಾವೂ ಭಜನೆಯ ಮೇಳ ದಲ್ಲಿ ಕೂಡಿಕೊಂಡು ಹಾಡುತ್ತಿದ್ದರು. ಟಕಳಿಗಳನ್ನು ತೆಗೆದುಕೊಂಡು ಬಂದು ತಾವೂ ನೂಲು ತೆಗೆಯುತ್ತಿದ್ದರು.

" ಗಾಂಧೀ ಮಹಾರಾಜಕಿ ಜೈ !!
ಬೋಲೋ ಭಾರತ ಮಾತಾಕಿ ಜೈ !! "

ಎಂಬ ಧ್ವನಿಗಳು ಹೊರಗೆ ಕೇಳಬಂದವು. ಪ್ರಭಾತ ಫೇರಿಯು ಊರಲ್ಲಿ ಸುತ್ತಾಡಿ, ಕಾಂಗ್ರೆಸ್ ಕಚೇರಿಯ ಕಡೆಗೆ ಬಂದಿತು. ವೆಂಕಟೇಶ ಅವರು ಆ ಸ್ವಯಂಸೇವಕರನ್ನು ಸ್ವಾಗತಿಸಿದರು. ಕಾಂಗ್ರೆಸ್ ಕಚೇರಿ ಎದುರಿಗೆ ಸ್ವಲ್ಪ ಬಯಲು ಜಾಗೆಯಿತ್ತು. ಅಲ್ಲಿ ಜನರಿಗೆ ಕುಳಿತುಕೊಳ್ಳಲು ವೆಂಕಟೇಶ ಅವರು ಬಿನ್ನವಿಸಿಕೊಂಡರು.

ವೆಂಕಟೇಶ ಅವರು ಈ ಮೊದಲೇ ಕಾಂಗ್ರೆಸ್ ಚಳುವಳಿಯಲ್ಲಿ ಕೆಲಸ ಮಾಡಿದವರು. ಖಾದಿ ಪ್ರಚಾರಕ್ಕೆ ಓಡಾಡಿದವರು. ಈ ಕ್ಷೇತ್ರದಲ್ಲಿ ಅವರಿಗೆ ಅನೇಕ ಜನರ ಪರಿಚಯವಿತ್ತು. ಅವರಿಗೆ ಸಹಾಯ ಮಾಡುವಂಥ ಮಿತ್ರರೂ ಇದ್ದರು. ಅವರ ನೆರವನ್ನು ತೆಗೆದುಕೊಂಡೇ ವೆಂಕಟೇಶ ಅವರು ಕಳಸಾಪೂರ ದಲ್ಲಿ ಈ ಸಪ್ತಾಹವನ್ನು ಏರ್ಪಡಿಸಿದ್ದರು. ಈ ಸಪ್ತಾಹವು ಜರಗುವುದಕ್ಕಿಂತ ಮೊದಲು ವೆಂಕಟೇಶ ಅವರು ಹಲವು ಹಳ್ಳಿಗಳಲ್ಲಿ ಓಡಾಡಿ ಕಾಂಗ್ರೆಸ್ ಮತ್ತು ಖಾದಿ ಪ್ರಚಾರ ಮಾಡಿದ್ದರು. ಕಳಸಾಪೂರಕ್ಕೆ ಬಂದ ಒಂದು ತಿಂಗಳಲ್ಲಿಯೇ ಅವರು ಇಂಥ ಪ್ರಗತಿ ಸ್ಥಾಪಿಸಿದ್ದು ನಿಜವಾಗಿಯೂ ಶ್ಲಾಘನೀಯವೆ !

ವೆಂಕಟೇಶ ಅವರು ಕಟ್ಟೆಯ ಮೇಲೆ ನಿಂತುಕೊಂಡು ಹಲವು ನಿಮಿಷ ಕೆಲವು ಉಪದೇಶಾಮೃತದ ವಾಕ್ಯಗಳನ್ನು ಹೇಳುವವರಿದ್ದರು. " ರಾಟಿಯ ತಿರುಗಿಸಿರಿ, ಸ್ವಾತಂತ್ರ್ಯವ ದೊರಕಿಸಿರಿ " ಎಂದು ಮುಂತಾದ ಮಾತುಗಳನ್ನು

ಘೋಷಿಸುತ್ತಿದ್ದರು.

ಕೂಡಲೇ ಒಂದು ತೀರ ಹೊಸ ಕಾರು ಭರ್ರನೆ ಅಲ್ಲಿಗೆ ಆಗಮಿಸಿತು. ಡ್ರಾಯವರನು ಹಾರ್‍ನ ಜೋರಾಗಿ ಬಾರಿಸಿದನು. ಅಲ್ಲಿ ನೆರೆದ ಆ ಹಳ್ಳಿಯ ಜನ ಅಲ್ಲಿಂದ ಇಬ್ಭಾಗವಾಗಿ ದಾರಿಯನ್ನು ಮಾಡದೆ, ಕುತೂಹಲದಿಂದ ಆ ಹೊಸ ಶೆವರ್ಲೆಟ್ ಕಾರು ನೋಡಲು ಅದರ ಸುತ್ತಲೂ ಹೋಗಿ ನಿಲ್ಲಹತ್ತಿದ್ದರು. ತುದಿಯಲ್ಲಿ ಕುಳಿತ ಶೀನಪ್ಪನವರು ಬಾಗಿಲ ತೆರೆದು ಹೊರಗೆ ನಿಂತು, "ಮೋಟಾರ ಬಂದರೆ ದಾರಿ ಮಾಡಿಕೊಡಬೇಕು! ಏನು ಮಂಕು ಜನ! ಇಷ್ಟೂ ಸಹ ತಿಳಿಯುವದಿಲ್ಲವೆ? ಈಗ ನಿಮ್ಮ ಮೇಲೆ ಹಾದರೆ, ಎಲ್ಲಿಯಾದರೂ ಏನಾದರೂ ಅನಾಹುತವಾಗಿ ಸತ್ತುಹೋದೀರಿ" ಎಂದು ಗದ್ದರಿಸಿದರು.

ಶೀನಪ್ಪನವರು ಹೊಸ ಠೀವಿಯಲ್ಲಿದ್ದರು. ನಾಟಕಕ್ಕೆ ಹೋದಾಗ ಹಾಕಿಕೊಳ್ಳುವ ಕರೆ ಶರ್ವಾನಿ ಕೋಟನ್ನು ಧರಿಸಿ, ಕಾಲಲ್ಲಿ ಚಡಾವುಗಳನ್ನು ಮೆಟ್ಟಿದ್ದರು. ಅತ್ತರದ ಪರಿಮಳವಂತೂ ಕಾರಿನಂತೆ ಭರದಿಂದ ಧಾವಿಸಿ ಬರುತ್ತಿತ್ತು. ಕಾರಿನ ಮುಂದೆ ಒಂದು ದೊಡ್ಡ ಹೂಮಾಲೆಯನ್ನು ಹಾಕಿದ್ದರು.

ಶೀನಪ್ಪನವರು ಗದ್ದರಿಸಿದರೂ ಜನ ಬೇಗ ಚದರಲಿಲ್ಲ. ಅವರು ಕಾರಿನೊಳಗೆ ಕುಳಿತ ಒಬ್ಬ ಹೆಂಗಸಿನ ಕಡೆಗೆ ನೋಡುತ್ತಿದ್ದರು! ಅವಳು ನಖರಾ ಮಾಡುವ ಸುಂದರ ಯುವತಿಯಾಗಿದ್ದಳು.

"ಏನು ಸತ್ಯಾಗ್ರಹ ಮಾಡುತ್ತಿದ್ದಾರೇನು?" ಶೀನಪ್ಪನವರಿಗೆ ಅವಳು ಕೇಳಿದಳು. ಸೊಲ್ಲಾಪೂರ ಪಟ್ಟಣದಿಂದ ಅವಳು ಬಂದದ್ದರಿಂದ, ವಿದೇಶಿ ಮಾಲಿನ ವಿರುದ್ಧ ಕಾಂಗ್ರೆಸ್ ಜನರು ಮಾಡುವ ಸತ್ಯಾಗ್ರಹವನ್ನು ಅವಳು ಕಂಡು ಅರಿತಿದ್ದಳು. "ಏನು ಶ್ರೀನಿವಾಸರಾವ್, ನಮ್ಮ ಕಾರನ್ನೇ ಬಿಡುವದಿಲ್ಲವೆನ್ನುತ್ತಾರೋ ಅಥವಾ ನಮ್ಮ ವಿದೇಶಿ ಮಾಲು ಕೊಡಬೇಕೆನ್ನುತ್ತಾರೋ" ಎಂದು ಮುಗುಳುನಗೆ ನಗುತ್ತ ಕೇಳಿದಳು.

"ಅದೆಲ್ಲ ರಾಜಕಾರಣ ಇವರಿಗೇನು ಗೊತ್ತು!" ದೇಶಭಕ್ತ ಒಬ್ಬವ ಬಂದಿದ್ದಾನೆ—ಒಂದು ತಿಂಗಳಾಯಿತು! ಏನೋ 'ಕಿತಿಬಿ' ಎಬ್ಬಿಸಿದ್ದಾನೆ!" ಶೀನಪ್ಪನವರು ಕಾರಿನೊಳಗೆ ಬಾಗಿ, ಹಣಿಕಿಕ್ಕಿ ಹೇಳಿದರು. "ಏನೋ ಏನು ನೋಡುತ್ತೀರಿ! ಸರಿಯಿರಿ ದೂರ" ಎಂದು ಜನರಿಗೆ ಮತ್ತೊಮ್ಮೆ ಗದ್ದರಿಸಿ ಶೀನಪ್ಪನವರು ಹೇಳಿದರು.

ಭರ್‍ರ್ರ್ ಎಂದು ಸಪ್ಪಳ ಮಾಡಿ, ಕಾರು ಮುಂದೆ ವಾಡೆಯಕಡೆಗೆ ಸಾಗಿತು! ಜನರು ಅದರ ಬೆನ್ನುಹತ್ತಿ ವಾಡೆಯ ಕಡೆಗೆ ಓಡಿದರು.

ಆ ಗದ್ದಲವನ್ನು ನೋಡಿ, ರಾಟೆಯನ್ನು ತಿರುವುತ್ತ ಒಳಗೆ ಕುಳಿತವರೂ ಏಳಹತ್ತಿದರು. ನಾಲ್ಕು ದಿನಗಳಿಂದ ಅಲ್ಲಿ ನಡೆದು ಬಂದ ನಿಯಮಿತತೆಗೆ, ಪಾವಿತ್ರ್ಯಕ್ಕೆ ಭಂಗ ಬರುವದೆಂದು ವೆಂಕಟೇಶ ಅವರಿಗೆ ಅನಿಸಹತ್ತಿತು. ರಾಟೆಯನ್ನು ಬಿಟ್ಟು ಎದ್ದವರು ಕಳಸಾಪೂರದವರೇ ಇಬ್ಬರಾಗಿದ್ದರು. ವೆಂಕಟೇಶ ಅವರು ಎಷ್ಟು ಬಿನ್ನವಿಸಿಕೊಂಡರೂ, ಅವರು ಹುಡುಗರಂತೆ ಎದ್ದುಹೋದರು. ವೆಂಕಟೇಶ ಅವರಿಗೆ ಮನಸ್ಸಿಗೆ ಕೆಡುಕೆನಿಸಿತು. ಒಂದು ರಾಟೆಯನ್ನು ತಾವೇ ತಿರುಗಿಸಹತ್ತಿದರು. ಇನ್ನೊಂದು ಖಾಲಿಯಾಗಿ ಉಳಿಯಿತು !

ಅರ್ಧ ತಾಸಿನಲ್ಲಿ ಊರೊಳಗಿಂದ ಬಗಿಯು ಬಂದಿತು. ಬಗಿ ಹೊಡೆಯುವವನೂ ಕಾಂಗ್ರೆಸ್ ಕಚೇರಿಯ ಎದುರಿಗೆ ಭಯಂಕರವಾಗಿ ಹಾರ್ನ ಬಾರಿಸಹತ್ತಿದನು. ಈ ಬಗಿಯಲ್ಲಿ ಸಿತಾರು, ಪಿಟೀಲು, ತಬಲಾ ಎಲ್ಲವೂ ಇದ್ದವು. ಕುಂಟ ಅಡುಗೆಯ ರಾಜನು ಅದರಲ್ಲಿ ಕುಳಿತುಕೊಂಡು, ತನ್ನ ಕರ್ಕಶ ಧ್ವನಿಯಿಂದ 'ಆs' ಎಂದು ರಾಗ ತೆಗೆಯುತ್ತಿದ್ದ !

ವೆಂಕಟೇಶ ಅವರಿಗೆ ಈ ಎಲ್ಲ ಕೃತಿಗಳು ಆಶ್ಚರ್ಯವನ್ನುಂಟು ಮಾಡಿದವು. ಗೋವಿಂದರಾಯರು ಶೀನಪ್ಪನವರು ಕೂಡಿ ಈಗಾಗಲೆ ಒಂದು ಜವಳಿ ಅಂಗಡಿಯನ್ನು ಗದಗಿನಲ್ಲಿ ಆರಂಭಿಸಿದ್ದರು. ಶೇಂಗಾದ ಗಿರಣಿಯೊಂದನ್ನು ಅಲ್ಲಿ ಆರಂಭಿಸುವರೆಂಬ ಸುದ್ದಿಯೂ ಇತ್ತು. ಇವು ಯಾವುವೂ ವೆಂಕಟೇಶ ಅವರಿಗೆ ತಿಳಿದುಬರುತ್ತಿದ್ದಿಲ್ಲ. ಈ ದಿನ ಅವರು ಏನು ಮಾಡುತ್ತಿದ್ದಾರೆಂಬುವುದು ಅವರಿಗೆ ಹೊಳೆಯಲಿಲ್ಲ. ಬಹುತರವಾಗಿ ತಮ್ಮ ಕೆಲಸವನ್ನು ಕೆಡಿಸಲು ಏನೋ ಉಪಾಯ ಮಾಡುತ್ತಿದ್ದಾರೆಂದು ಅವರಿಗೆ ಸಂಶಯ ಬರಹತ್ತಿತು. ಏನೇಆದರೂ ತಮ್ಮ ದೃಢವಾದ ನಿಶ್ಚಯವನ್ನು ಬಿಡಬಾರದೆಂದು ಅವರು ಮನಸ್ಸಿನಲ್ಲಿಯೇ ಅಂದುಕೊಂಡರು. 'ರಘುಪತಿ ರಾಘವ ರಾಜಾರಾಮ' ಎಂದು ಭಜನೆಮಾಡುತ್ತ ರಾಟೆಯನ್ನು ತಿರುವಹತ್ತಿದರು.

ಕಾರು ಭರ್‍ರ್ರ್ ಎಂದು ಹೋಗುತ್ತಿತ್ತು ! ಮತ್ತೆ ಬರುತ್ತಿತ್ತು ! ಹಾರ್ನ ಸಪ್ಪಳ ಕೇಳಿಸುತ್ತಿತ್ತು ! ಹೊರಗೆ ಏನೇನೋ ಗದ್ದಲವಿತ್ತು. ವೆಂಕಟೇಶ ಅವರು ಅಚಲರಾಗಿ ಅಲ್ಲಿಯೇ ಕುಳಿತರು !

" ಸಾಹೇಬ ಚಿಕ್ಕಬಾಯಿಯವರು ನಿಮ್ಮನ್ನು ಕರೆಯುತ್ತಾರೆ " ಹನುಮಂತ ಅಲ್ಲಿಗೆ ಬಂದು ವೆಂಕಟೇಶ ಅವರನ್ನು ಎಬ್ಬಿಸಿದ.

ವೆಂಕಟೇಶ ಅವರು ಉತ್ತರ ಕೊಡಲಿಲ್ಲ. ಹನುಮಂತ ಮತ್ತೆ ಕೂಗಿದ " ವೆಂಕಟೇಶರಾವ್, ಸಾಹೇಬ ಚಿಕ್ಕಬಾಯಿಯವರು ನಿಮ್ಮನ್ನು ಕರೆಯುವರು ! "

ತನ್ನ ಭಜನೆಯನ್ನು ನಿಲ್ಲಿಸಿ ವೆಂಕಟೇಶ ಕೇಳಿದರು, " ಯಾಕೋ ಏನು ಕೆಲಸವಿದೆ ಹನುಮಂತ ? "

" ಬೇಗ ಬರಲು ಹೇಳಿದ್ದಾರೆ. "

" ಏನು ಕೆಲಸ ? "

" ನನಗೇನೂ ಗೊತ್ತಿಲ್ಲ ! " ಇಷ್ಟು ಹೇಳಿ ಹನುಮಂತ ಹೊರಡುವವನಿದ್ದ ಆದರೆ ಅವನಿಗೆ ಮತ್ತೆ ಏನೋ ನೆನಪಾಯಿತು " ಅಯ್ಯೋ ನನ್ನ ಮಂಕ ಬುದ್ಧಿ ! ವೆಂಕಟೇಶರಾವ್, ಸಾಹೇಬ ಚಿಕ್ಕಬಾಯಿಯವರಿಗೆ ಮೈಯಲ್ಲಿ ನೆಟ್ಟಗಿಲ್ಲ. ಜ್ವರ ಬಂದಿವೆ ! ಇದನ್ನೆ ಹೇಳಬೇಕೆಂದು ಬಂದೆ ! "

ಹನುಮಂತನು ಹಿಂದುಗಡೆ ಹೇಳಿದ ಮಾತುಗಳನ್ನು ಕೇಳಿ, ವೆಂಕಟೇಶ ಅವರು ಅಲ್ಲಿ ನಿಲ್ಲಲು ಸಾಧ್ಯವಿರಲಿಲ್ಲ. ಹನ್ನೆರಡು ರಾಟಿಗಳು ಹೋಗಿ, ಹತ್ತು ರಾಟಿಗಳಷ್ಟೆ ತಿರುಗಬೇಕಾಯಿತು. ಮತ್ತೊಬ್ಬರಿಗೆ ಅಲ್ಲಿಯ ಕಾರ್ಯಕ್ರಮ ನೋಡಿಕೊಳ್ಳಲು ಹೇಳಿ, ವೆಂಕಟೇಶ ಅವರು ವಾಡೆಯ ಕಡೆಗೆ ಧಾವಿಸಿದರು.

ಅಟ್ಟದ ಮೇಲೆ ಪಲ್ಲಂಗದಲ್ಲಿ ಲಕ್ಷ್ಮಿ ಒರಗಿಕೊಂಡಿದ್ದಳು. ಸಮೀಪದಲ್ಲಿರುವ ವಿರಾಮ ಖುರ್ಚಿಯಲ್ಲಿ ನಾರಾಯಣರಾಯರು ಸುಮ್ಮನೆ ಕುಳಿತುಕೊಂಡಿದ್ದರು. ಗಡಿಬಿಡಿಯಿಂದ ಮೇಲೆ ಬಂದು ವೆಂಕಟೇಶ ಅವರು ಕೇಳಿದರು, "ನಾರಾಯಣರಾವ, ಲಕ್ಷ್ಮೀವೈನಿಯವರಿಗೆ ಹೇಗಿದೆ ಈಗ ? "

" ಜ್ವರ ಬಂದಿವೆ ! "

" ಯಾವಾಗ ? "

" ಇಂದೇ ಬೆಳಗಿನಿಂದ ! "

" ಅಯ್ಯೋ ! ನನಗೆ ಗೊತ್ತಾಗಲಿಲ್ಲ ! ಟೆಂಪರೇಚರ ಎಷ್ಟು ? "

" ನೀವೇ ನೋಡಿರಿ ! "

" ಲಕ್ಷ್ಮೀವೈನಿ ! " ವೆಂಕಟೇಶ ಅವರ ಧ್ವನಿಗೆ, ಸ್ವಲ್ಪ ಜೊಂಪು ಹತ್ತಿದ

ಲಕ್ಷ್ಮಿಗೆ ಎಚ್ಚರವಾಯಿತು. “ಪ್ರಕೃತಿ ಹೇಗಿದೆ?” ಎಂದು ಲಕ್ಷ್ಮಿಗೆ ಕೇಳುತ್ತ ಅವಳ ಕೈಹಿಡಿದು ನೋಡಿದರು.

“ಫೌಜದಾರ ಬಂದಿದ್ದಾರೆ!” ಲಕ್ಷ್ಮಿ ಹೇಳಿದ ಈ ಮಾತನ್ನು ಕೇಳಿ, ಅವಳು ಬಡಬಡಿಸುತ್ತಿರುವಳೇನೋ ಎಂದು ತಿಳಿದರು. “ಬಡಬಡಿಸುತ್ತಾರೆ, ಜ್ವರ ಬಹಳಿವೆಯೋ ಏನೋ ನಾರಾಯಣರಾವ? ಡಾಕ್ಟರನ್ನು ಕರೆದುಕೊಂಡು ಬರಲೇನು?” ವೆಂಕಟೇಶ ಅವರು ಲಕ್ಷ್ಮಿಯ ನಾಡಿಗಳನ್ನು ನೋಡಹತ್ತಿದರು. ನಾರಾಯಣರಾಯರು ಸುಮ್ಮಗೆ ಲಕ್ಷ್ಮಿಯ ಕಡೆಗೆ ನೋಡುತ್ತ ಕುಳಿತಿದ್ದರು.

ಉಸಿರ್ಗರೆಯುತ್ತ ಲಕ್ಷ್ಮಿ ಹೇಳಿದಳು “ಬಡಬಡಿಸುವದಿಲ್ಲ—ನನಗೆ ಎಚ್ಚರಿಕೆಯಿದೆ........ಉಶ್ಯ್ಽ............ಸ್ವಲ್ಪ ನೀರು ಕೊಡಿರಿ............ನಾಲಗೆ ಒಣಗಿದೆ!”

ನಾರಾಯಣರಾಯರು ಒಂದು ವಾಟಗದಲ್ಲಿ ನೀರನ್ನು ತೆಗೆದುಕೊಂಡು ಕುಡಿಸಿದರು. ನೀರು ಕುಡಿಯುವುದು ಮುಗಿಯುತ್ತಿರುವಾಗಲೇ ಕೆಮ್ಮು ಬಂದಿತು. “ಅವ್ವನ ಜಡ್ಡು ಬಂದಿತೋ ಏನೋ....!”

“ಯಾವ ಜಡ್ಡು! ಸುಮ್ಮನೇ ಒಮ್ಮೆ ಕೆಮ್ಮಿದರೆ ಏನು ನೆನಸುತ್ತೀರಿ?” ವೆಂಕಟೇಶ ಸಮಾಧಾನ ಮಾಡುತ್ತ ಹೇಳಿದರು.

“ಅವ್ವ ಹೀಗೇ ಕೆಮ್ಮಿ ಪ್ರಾಣಬಿಟ್ಟಳು!”

“ಹೂಂ! ಹೂಂ! ಲಕ್ಷ್ಮಿವೈನಿ. ಹಾಗೆ ಮಾತನಾಡಬೇಡಿರಿ. ನೀವು ಗಾಬರಿಯಾಗಿದ್ದರೆ ಹೋಗಿ ಗದಗಿನಿಂದ ಡಾಕ್ಟರನ್ನು ಕರೆದುಕೊಂಡು ಬರುವೆ!”

“ಹೂಂ! ಹೂಂ!........ ಅಷ್ಟು ಮಾತ್ರ ಮಾಡಬೇಡಿರಿ. ಉಶ್ಯ್.... ಫೌಜದಾರ ಬಂದಿದ್ದಾರೆ!”

“ಲಕ್ಷ್ಮಿವೈನಿ, ನೀವು ಏನು ಹೇಳುವಿರಿ?”

“ವೆಂಕಟರಾವ, ಹೊರಗೆ ಕಿಡಿಕಿಯಲ್ಲಿ ನೋಡಿರಿ; ಆ ಗದ್ದಲ ಕೇಳಿರಿ.” ಇಷ್ಟು ಹೊತ್ತಿನ ವರೆಗೆ ಸಣ್ಣ ಸಣ್ಣ ವಾಕ್ಯಗಳನ್ನು ಹೇಳಿ ಸುಮ್ಮನೆ ಕೂಡುವ ನಾರಾಯಣರಾಯರು ಒಂದು ಉದ್ದ ವಾಕ್ಯವನ್ನು ಪೂರ್ಣಗೊಳಿಸಿದರು.

ನಾರಾಯಣರಾಯರು ಹೇಳಿದಂತೆ ವೆಂಕಟೇಶ ಅವರು ಹೊರಗೆ ಕಿಟಕಿಯ ಆಚೆ ನೋಡಿದರು. ಅಲ್ಲಿ ಕೆಳಗೆ ಗೋವಿಂದರಾಯರು, ಶೀನಪ್ಪನವರು ಇರುವ ವಾಡೆಯ ಭಾಗದಲ್ಲಿ ಜನರ ಗದ್ದಲ ಬಹಳವಿತ್ತು. ಜನರು ನಗುತ್ತಿದ್ದರು,

ಕೇಳಿಯುತ್ತಿದ್ದರು. ನಡುನಡುವೆ ರಾಗಗಳ ತೆರೆಗಳು ಏಳುತ್ತಿದ್ದವು. ವಾದ್ಯಗಳು ಒದರುತ್ತಿದ್ದವು. ವಾಡೆಯ ಹೊರಗೆ ಮೋಟಾರ ಹಾರ್ನ ಸಪ್ಪಳವಂತೂ ಮೇಲಿಂದ ಮೇಲೆ ಇದ್ದೇ ಇತ್ತು. ಆಳುಗಳು ಸರಭರನೆ ಓಡಾಡುತ್ತಿದ್ದರು. ಅಡುಗೆಯ 'ಖಮ್ಮ' ಗಿನ ಸುವಾಸನೆ ವಾಡೆಯ ಹೊರಗಿನ ಅಂಗಳದಲ್ಲಿಯೂ ಪಸರಿಸಿತ್ತು.

ಕಿಟಕಿಯಿಂದ ಈಚೆಗೆ ಹೊರಳಿ, ವೆಂಕಟೇಶ ಕೇಳಿದರು "ನಾರಾಯಣ ರಾವ, ಮನೆಯಲ್ಲಿ ಏನಿದೆ ಈ ದಿನ?"

"ಖೂನ!" ಎಂದು ಕಣ್ಣು ವಿಶಾಲವಾಗಿ ತೆರೆದು ನಾರಾಯಣರಾಯರು ಹೇಳಿದರು. ಏಕೋ ಅವರ ಸೌಮ್ಯ ಸ್ವಭಾವ ಬದಲಾಗಿತ್ತು. ರಕ್ತ ಕುದಿಯುತ್ತಿರುವವರಂತೆ ಮಾತನಾಡಿದರು.

"ಖೂನ! ಏನೆಂದಿರಿ ನಾರಾಯಣರಾವ! ಖೂನ ಅಂದರೆ ಜನರ ಗುರ್ತು ಮಾಡಿಕೊಳ್ಳುವ ಅರ್ಥವೇನು?"

"ಇವಳನ್ನೆ ಕೇಳಿರಿ." ನಾರಾಯಣರಾಯರು ಮತ್ತೆ ತಮ್ಮ ಮೊದಲಿನ ಪಲ್ಲವಿಗೇ ಬಂದರು.

ಲಕ್ಷ್ಮಿ ಹಾಸುಗೆಯಲ್ಲಿ ಹೊರಳುತ್ತ ಹೇಳಿದಳು "ಫೌಜದಾರ ಊಟಕ್ಕೆ ಬಂದಿದ್ದಾರೆ....! ನೆವ ಊಟದ್ದು! ನಿಮ್ಮನ್ನು ಹಿಡಿದುಕೊಂಡು ಹೋಗಲು ಬಂದಿದ್ದಾರಂತೆ.........ಕೆಳಗೆ ಸುದ್ದಿ!........ ಏನೋ ಎಂತೋ!............ ನಿಮ್ಮ ಕೆಲಸ ಈ ಕಾಂಗ್ರೆಸದ್ದು ಬಿಟ್ಟುಬಿಡಿರಿ........... ಶಾಂತಾಳಿಗೆ ಪತ್ರಹಾಕಿ ಕರೆಯಿಸಿಕೊಳ್ಳಿರಿ........"

"ಲಕ್ಷ್ಮಿವೈನಿ!" ಹಾಸುಗೆಯ ಬಳಿ ಒಂದು ಕುರ್ಚಿಯನ್ನು ಎಳೆದುಕೊಂಡು ವೆಂಕಟೇಶ ಕುಳಿತುಕೊಂಡರು. "ನೀವೇನು ಹೆದರಬೇಡಿರಿ. ನಾನು ಯಾವುದೂ ಖೂನಿ ಏನು ಮಾಡಿಲ್ಲ. ಇನ್ನೂ ಸತ್ಯಾಗ್ರಹವನ್ನು ಮಾಡಿಲ್ಲ. ಈ ಫೌಜದಾರರ ಸ್ವಭಾವ ನನಗೆಲ್ಲ ಗೊತ್ತಿದೆ........... ಶೀನಪ್ಪನವರು ಏನಾದರೂ ಲಂಚ ಕೊಟ್ಟಿರಬಹುದು."

"ಮೂರ್ಖರು!" ವಿರಾಮ ಕುರ್ಚಿಯಲ್ಲಿ ಕುಳಿತ ನಾರಾಯಣರಾಯರು ಒದರಿದರು "ನಾವೇನು ಭಾಗಾದಿ ಅಲ್ಲವೇನು?"

"ಏನೆಂದಿರಿ ನಾರಾಯಣರಾವ?"

“ ಅವಳನ್ನೇ ಕೇಳಿರಿ ! ” ನಾರಾಯಣರಾಯರು ಮತ್ತೆ ತಮ್ಮ ಮಾತನ್ನ
ಹೇಳಿದರು.

ಲಕ್ಷ್ಮಿ ಹೇಳಿದಳು— “ ನಮಗೇನೂ ತಿಳಿಸಿಲ್ಲ. ಏನನ್ನೋ ನಡೆಸಿಬಿಟ್ಟಿ
ದ್ದಾರೆ. ಗದಗಿನಲ್ಲಿ ಅಂಗಡಿ ತೆಗೆದರು. ಈಗ ಮೋಟಾರು ಕೊಂಡಿದ್ದಾರೆ
ಕೇಶನರಿ ಅಂಗಡಿ ಶೀನಪ್ಪ ತೆಗೆಯುವರಂತೆ! ಇನ್ನೂ ಏನನ್ನೋ ತರುವರಂತೆ
ಈ ದಿನದ ಸುದ್ದಿಯನ್ನಂತೂ ಏನೂ ಹೇಳಿಲ್ಲ. ನಾನೇ ಮುಂದಿಯಿಂದ ಕೇ
ತಿಳಿದುಕೊಳ್ಳಬೇಕು.........ಉಶ್ಯ್s........ ಈ ಪರಿಯಿಂದ ನಾವು ಹೇಗೆ ಇ
ಬೇಕು ? ”

ಶೀನಪ್ಪ ಮತ್ತು ಗೋವಿಂದರಾಯರ ಹೇಳಿಕೆಯಂತೆ ಮನೆಯಲ್ಲಿ ಪಾಲು
ಮಾಡಲಿಲ್ಲ. ಸುಬ್ಬಕ್ಕನವರು ತಮ್ಮ ಹಟ ಸಾಧಿಸಹತ್ತಿದರು. ಅಂತೆಯೆ ಈ
ಒಂದು ತಿಂಗಳಲ್ಲಿ ಶೀನಪ್ಪನವರ ದಾರಿಯೇ ಬೇರೆಯಾಯಿತು. ಬೇಕಾದಹಾ
ಬೇಕಾದಷ್ಟು ಖರ್ಚುಮಾಡಿ, ದುಂದುಗಾರಿಕೆ ಮಾಡಹತ್ತಿದರು. ಈ ದುಂದು
ಗಾರಿಕೆ ಕಳಸಾಪೂರದ ಹಳ್ಳಿಯಲ್ಲಿ ಒಂದು ಮೋಜೇ ಅನಿಸಿತು. ತಮ್ಮ
ಹಳ್ಳಿಯು ಸುಧಾರಿಸಹತ್ತಿರುವದೆಂದು ಅವರು ತಿಳಿದುಕೊಂಡರು. ಒಂದು ಕಡೆ
ವೆಂಕಟೇಶ ಅವರ ಹೊಸ ವಿಚಾರಗಳು; ಇನ್ನೊಂದು ಕಡೆಗೆ ಶೀನಪ್ಪನವರ
ಹಣ ವ್ಯಯಮಾಡಿ ತರಿಸುವ ಹೊಸ ಹೊಸ ಪದಾರ್ಥಗಳು! ಹೊಸ ವಾತಾ
ವರಣದಲ್ಲಿದ್ದಂತೆ ಆ ಹಳ್ಳಿಗರಿಗೆ ಅನಿಸಹತ್ತಿತು.

ಕಾಂಗ್ರೆಸ ಕಾರ್ಯ ಒಂದು; ಇನ್ನೊಂದು ತನ್ನ ಸಂಸಾರ! ಮನೆಯಲ್ಲಿ
ನಡೆದ ವಿಚಿತ್ರ ಸಂಗತಿಗಳನ್ನು ಕೇಳಿ, ವೆಂಕಟೇಶ ಅವರ ಮನಸ್ಸು ಮುದುಡಿ
ಕೊಂಡಿತು. ಲಕ್ಷ್ಮಿಯ ಸಲುವಾಗಿ ತನ್ನ ಕಾಂಗ್ರೆಸ್ ಕಾರ್ಯ ಬಂದು ಮಾಡಿ
ಬಿಡಬೇಕೇನೋ ಎಂದು ವಿಚಾರಿಸಿದರು. ಹನ್ನೆರಡು ರಾಟೆಗಳು ಹೋಗಿ
ಹತ್ತು ರಾಟೆಗಳು ಆಗಿದ್ದವು. ಮುಂದೆ ಇದಕ್ಕೂ ಕಡಿಮೆಯಾದರೆ....? ವೆಂಕ
ಟೇಶ ಅವರಿಗೆ ಬಹಳ ವಿಚಾರ ಬಿತ್ತು!

ವೆಂಕಟೇಶ ಅವರು ವಿಚಾರ ಮಾಡುತ್ತ ಕುಳಿತಿರುವಾಗ ಲಕ್ಷ್ಮಿ ಹೇಳಿ
ದಳು “ ನನ್ನ ಸಲುವಾಗಿ ನೀವು ಇಷ್ಟು ಕೆಲಸ ಮಾಡಬೇಕು. ನೀವು ಚಳವಳಿ
ವಿಚಾರ ಮಾಡಬಾರದು........; ಕಾಂಗ್ರೆಸ ಬೋರ್ಡು ತೆಗೆದುಬಿಡಿರಿ. ದೇಶ
ಸೇವೆಯ ಕೆಲಸ ನೀವು ಸಾಧ್ಯವಿದ್ದಷ್ಟು ಒಳಗಿಂದೊಳಗೇ ಮಾಡಬಹುದು...

ಶಾಂತಾಳಿಗೆ ಬರಲು ಪತ್ರ ಬರೆಯಿರಿ. ನಾನು ಅತ್ತೆಯವರ ಕಡೆಯಿಂದ ಬೇಕಾದಷ್ಟು ರೂಪಾಯಿ ಕೊಡಿಸುತ್ತೇನೆ. ನೀವೂ ಉಪಯೋಗ ಮಾಡಿರಿ, ದೇಶಸೇವೆಗೆ ಉಪಯೋಗ ಮಾಡಿರಿ....ನನ್ನ ಸಲುವಾಗಿ ನೀವು ಇಷ್ಟು ಮಾಡ ಬೇಕೆಂದು ಕೇಳಿಕೊಳ್ಳುವೆ. ”

ವೆಂಕಟೇಶ ಹೂಂ ಅನ್ನಲಿಲ್ಲ; ಇಲ್ಲವೆಂದೂ ಅನ್ನಲಿಲ್ಲ. ಇನ್ನು ಸ್ವಲ್ಪ ಅನುಕೂಲ ಪರಿಸ್ಥಿತಿ ಬಂದ ಮೇಲೆಯೇ ಮನೆ ಮಾಡಬೇಕೆಂದು ಯೋಚಿಸು ತ್ತಿದ್ದ.

ಅಷ್ಟರಲ್ಲಿ ಜಿಗಿಜಿಗಿಯುತ್ತ ಹನುಮಂತ ಮೇಲೆ ಓಡಿಬಂದನು. ಅವನು ವಿಶಿಷ್ಟತರವಾದ ಆನಂದದಲ್ಲಿದ್ದನು. ಓಡಿ ಬಂದದ್ದರಿಂದ ತೇಕುತ್ತಿದ್ದನು. “ ನೋಡಿರಿ, ನೋಡಿರಿ ! ಈ ಊರಲ್ಲಿಯೂ ನಾಟಕ ! ಈ ಊರಲ್ಲಿಯೂ ನಾಟಕ !! ” ಸಣ್ಣ ಹುಡುಗರ ಹಾಗೆ ಹನುಮಂತ ಚಪ್ಪಾಳೆ ತಟ್ಟಿ ಕುಣಿದನು. ಕೈಯಲ್ಲಿದ್ದ ಅಚ್ಚುಕಟ್ಟಾಗಿ ಅಚ್ಚಾಗಿದ್ದ ಜಾಹೀರಾತು ಪತ್ರಿಕೆಯನ್ನು ಹನು ಮಂತ ವೆಂಕಟೇಶ ಅವರ ಮುಖದಮೇಲೆ ಎಸೆದು ಮತ್ತೆ ಕೆಳಗೆ ಓಡಿದ.

ವೆಂಕಟೇಶ ಅದನ್ನು ತೆಗೆದುಕೊಂಡು ಮೊದಲಿನಿಂದ ಕೊನೆಯ ವರೆಗೆ ಓದಿದರು. “ ಏನು ?—ಏನು ಬರೆದಿದೆ ? ” ಲಕ್ಷ್ಮಿ ಕೇಳಿದಳು.

“ ಈ ದಿನ ಊರಿನಿಂದ ಕಾರಿನಲ್ಲಿ ಬಂದವಳೇ ಇರಬೇಕು ! ” ವೆಂಕಟೇಶ ವಿಚಾರಮಗ್ನರಾಗಿಯೇ ಉತ್ತರಿಸಿದರು.

“ ಅಹುದು ! ಯಾರೋ ಹೆಂಗಸರು ಬಂದಿರುವರೆಂದು ಕೇಳಿಗೆ. ದೂರ ದೇಶದಿಂದ ಬಂದಿದ್ದಾಳಂತೆ ! ಬಹಳೇ....ಇದು ಇರುವಳಂತೆ ! ”

“ ಮೂರ್ಖರು ! ” ಲಕ್ಷ್ಮಿಯು ಮಾತನಾಡುತ್ತಿರುವಾಗಲೇ ನಾರಾಯಣ ರಾಯರು ಉದ್ಗಾರ ತೆರೆದರು.

ವೆಂಕಟೇಶ ಮತ್ತು ಲಕ್ಷ್ಮಿ ಇಬ್ಬರೂ ನಾರಾಯಣರಾಯರ ಕಡೆಗೆ ಒಮ್ಮೆಲೆ ಹೊರಳಿ ನೋಡಿದರು.

“ ದುಡ್ಡು ನಮ್ಮದು ! ಚೈನಿ ಅವರದು ! ” ಎಂದು ಕಣ್ಣು ವಿಸ್ತಾರವಾಗಿ ತೆರೆಯುತ್ತ ನಾರಾಯಣರಾಯರು ನುಡಿದರು. ಈಗ ನಾರಾಯಣರಾಯರ ಮುಖದಲ್ಲಿ ಹುಚ್ಚು ಕಳೆಯಿರಲಿಲ್ಲ. ವಿಚಾರವಂತರ ಛಾಯೆ ಅವರ ಕರಿ ಮೊಗ ದಲ್ಲಿ ಮಿನುಗುತ್ತಿತ್ತು !

"ಯಾರಿಗೆ ಯಾರೋ ಪುರಂದರ ವಿಠ್ಠಲ!" ನಾರಾಯಣರಾಯ ಮಾತುಗಳನ್ನು ಕೇಳಿ ವೆಂಕಟೇಶ ಅಂದರು "ಈ ಮನೆಯಲ್ಲಿ ಎಲ್ಲರದೂ ಇದೆ ಯಾರದೂ ಇಲ್ಲ! ಎಂಬುವಂತೆ ಆಗಿದೆ............... ಬೇಕಾದವರು ಬೇಕಾದ್ದ ಮಾಡಬಹುದು! ............... ಮುಖ್ಯ ಇದು ಗೋವಿಂದರಾಯರದೇ ಇರ ಬೇಕು!........"

"ಶೀನಪ್ಪನವರದು!" ನಾರಾಯಣರಾಯರು ಅಕ್ಷರಗಳನ್ನು ಒತ್ತಿ ವಿಶಾಲವಾಗಿ ಕಣ್ದೆರೆದು ಹೇಳಿದರು.

"ಗಾಯನದ ಹುಚ್ಚು ಗೋವಿಂದರಾಯರಿಗೆ ಎಂದು ಕೇಳಿದ್ದೆ!" ವೆಂಕ ಟೇಶ ಸಾವಧಾನವಾಗಿ ಹೇಳಿದರು.

"ಅವಳನ್ನೇ ಕೇಳಿರಿ" ನಾರಾಯಣರಾಯರು ಲಕ್ಷ್ಮಿಯ ಕಡೆಗೆ ನೋ ಡುತ್ತ ಹೇಳಿದರು.

"ಏನು ಮಾತಾಡುತ್ತಿರುವಿರಿ? ಯಾರ ಬಗ್ಗೆ ಸಂಪೂರ್ಣ ಹೇಳಿಯಾ ದರೂ ಹೇಳಿರಿ" ಲಕ್ಷ್ಮಿ ನರಳುತ್ತ ಕೇಳಿದಳು. ಅವಳ ಕಾಲು ಹರಿಯುತ್ತಿ ದ್ದವು. ಉಶ್ ಉಶ್ ಎಂದು ನಡುನಡುವೆ ಕಾಲು ಝಾಡಿಸುತ್ತಿದ್ದಳು.

"ನಾಟಕವಿಲ್ಲ ಏನೂ ಇಲ್ಲ! ಗಾಯನ ಕಾರ್ಯಕ್ರಮ. ಇಂದು ಕಾರಿ ನಲ್ಲಿ ಬಂದವಳದೇ ಇರಬೇಕು" ವೆಂಕಟೇಶ ಹೇಳಿದರು.

"ಅವರ ಕಾರಿನಲ್ಲಿ ಬಂದವರು........"

"ಅವರ ಅಲ್ಲ ನಮ್ಮ...." ಲಕ್ಷ್ಮಿಯ ಮಾತುಗಳನ್ನು ಒಮ್ಮೆಲೆ ತಡೆದು ವಿಶಾಲವಾಗಿ ಕಣ್ದೆರೆದು, ನಾರಾಯಣರಾಯರು ಮಾತನಾಡಿದರು.

ಲಕ್ಷ್ಮಿ ತನ್ನ ಮಾತನ್ನು ಸುಧಾರಿಸಿಕೊಂಡು "ನಮ್ಮ ಕಾರಿನಲ್ಲಿ ಬಂದ ವರು ಯಾರು?" ಎಂದು ಮತ್ತೊಮ್ಮೆ ಕೇಳಿದಳು.

"ಈ ಜಾಹೀರಾತಿನಲ್ಲಿ ಬರೆದ ಹೆಸರೇ ಅವಳದ್ದಿರಬೇಕು!" ವೆಂಕಟೇಶ ಆ ಪ್ರಕಟಣೆಯನ್ನು ನೋಡುತ್ತ ಹೇಳಿದರು "ಮಿಸ್ ಭಕ್ತಿವಿಶಾರದೆ ಗಾನ ಕೋಕಿಲೆ ಮೆಹಬೂಬ ಉನ್ನೀಸಾ!"

"ಎಷ್ಟು ದೊಡ್ಡ ಹೆಸರು ಅವಳದು?" ಲಕ್ಷ್ಮಿ ಕೇಳಿದಳು.

"ಹೂಂ! ಲಕ್ಷ್ಮೀವೈನಿ. ಈ ಬಾಯಿಸಾಹೇಬರೇ ಈ ದಿನ ಭಕ್ತಿ ಹಾಡುಗಳನ್ನು ವೆಂಕಟೇಶ ದೇವರ ಗುಡಿಯಲ್ಲಿ ಹೇಳುವಳಂತೆ! ಕಳಸಾಪೂರ

ಭಕ್ತಮಂಡಳಿ ವತಿಯಿಂದ ಈ ಕಾರ್ಯಕ್ರಮವಂತೆ !……….. ಎಲ್ಲದಕ್ಕೂ ಕಿವಿ ಮುಚ್ಚಿಕೊಳ್ಳಬೇಕು; ಕಣ್ಣು ಮುಚ್ಚಿಕೊಳ್ಳಬೇಕು ಅಷ್ಟೆ !……. ಈ ವೇಶ್ಯೆಯ ಸಲುವಾಗಿ ಈ ದಿನ ಎಷ್ಟು ಹಣ ಖರ್ಚು ಮಾಡಿರುವರೋ ಏನೋ !……. ಹಾಂ ! ನನಗೆ ತಿಳಿಯಿತು. ಅವಳಾಗಿಯೆ ಈ ಫೌಜದಾರ ಮುಂತಾದ ದೊಡ್ಡ ಮಂದಿಯನ್ನು ಕರೆದಿರಬೇಕು. ಶೀನಪ್ಪ ಮತ್ತು ಗೋವಿಂದರಾಯರು ನಾಲ್ಕು ಜನರಲ್ಲಿ ತಮ್ಮ ಹೆಸರು ಬರಬೇಕೆಂದು ಏನೋ ನಡೆಯಿಸಿದ್ದಾರೆ. ಈ ಸರಕಾರಿ ನೌಕರದಾರರ ಮರ್ಜಿ ಇದ್ದಿತು ಅಂದರೆ ನಾಳೆ ಏನಾದರೂ ಕೆಲಸವನ್ನು ಅವರಿಂದ ಮಾಡಿಸಿಕೊಳ್ಳಲು ಬರುವದು."

"ಥೂ ! ಥೂ !" ಎಂದು ನಾರಾಯಣರಾಯರು ಅಗಲವಾಗಿ ಕಣ್ಣು ತೆರೆದು ಫೂತ್ಕರಿಸಿದರು.

ಉಶ್ಶ್ಯ ! ಉಶ್ಶ್ಯ ! ಎಂದು ಲಕ್ಷ್ಮಿ ಹಾಸುಗೆಯ ಮೇಲೆ ಕಾಲು ಒಗೆಯ ಹತ್ತಿದಳು. ತಲೆಯಮೇಲೆ ಕೈಯಿಟ್ಟುಕೊಂಡು 'ಅಯ್ಯೋ ತಲೆ !' ಎಂದಳು. "ನೀರು ಕೊಡಿರಿ" ಎಂದು ನಾರಾಯಣರಾಯರನ್ನೇ ಕೇಳಿದಳು.

"ನಾನು ಹೇಳಿದ ಸುದ್ದಿ ನಿಮಗೆ ತ್ರಾಸವಾಯಿತೋ ಏನೋ !" ವೆಂಕಟೇಶ ತಪ್ಪಿತಸ್ಥರಂತೆ ಮಾತನಾಡಿದ. ಲಕ್ಷ್ಮಿಗೆ ಆಯಾಸವಾದುದನ್ನು ನೋಡಿ "ಡಾಕ್ಟರನ್ನು ಬಿಡಿರಿ. ಸುಬ್ಬಕ್ಕನವರನ್ನಾದರೂ ಕರೆಯುವೆ" ಎಂದು ವೆಂಕಟೇಶ ಕೆಳಗೆ ಹೋದರು.

"ಏನು ಲಕ್ಷ್ಮೀಬಾಯಿ, ಜಡ್ಡಾದರೆ ನನಗೆ ತಿಳಿಸಬಾರದೇನು? ಗಂಡಸರು ಬಂದು ಹೇಳಬೇಕೇನು? ನಾನು ಹೇಳುತ್ತೇನೆ, ಮೊದಲು ನೀನು ನನಗೆ ಹೇಳಬೇಕು" ಹೀಗೆ ಮಾತನಾಡುತ್ತಲೆ ಸುಬ್ಬಕ್ಕನವರು ಅಟ್ಟವನ್ನು ಏರಿ ಬಂದರು. ಕೃಷ್ಣರಾಯರು ತೀರಿಕೊಂಡ ಮೇಲೆ ಅವರು ತಮ್ಮ ಕೋಣೆಯನ್ನು ಬಿಟ್ಟು ವಿಶೇಷವಾಗಿ ಎಲ್ಲಿಯೂ ಓಡಾಡುತ್ತಿದ್ದಿಲ್ಲ. ಇಂದೇ ಅವರು ಅಟ್ಟವನ್ನೇರಿ ಮೇಲೆ ಬರಬೇಕಾಯಿತು. "ಕೆಳಗೆ ನೂರಾ ಎಂಟು ಜನರ ಗದ್ದಲ. ಮನೆ ಎಂಬುವುದು ಮಠವಾಗಿದೆ! ಯಾರಿಗೂ ಏನೂ ಅನ್ನುವ ಹಾಗಿಲ್ಲ. ಲಕ್ಷ್ಮೀಬಾಯಿ ಒಂದು ರೀತಿಯಿಂದ ನೀನು ಇಲ್ಲೆ ಇದ್ದದ್ದು ಗುಣಾನೇ ಆಯಿತು. ಎಲ್ಲಿ ಅಕ್ಕ, ತಲಿ ನೋಯಿಸತದೇನು ? ಕಾಲು ಹರಿಯುವದೇನು? ಆ ?"

ಸುಬ್ಬಕ್ಕನವರು ಒಂದೊಂದೇ ಪ್ರಶ್ನೆಯನ್ನು ಕೇಳುತ್ತ ಅವಳ ತಲೆ ಕಾಲು ಒತ್ತಿ ನೋಡಹತ್ತಿದರು.

ವೆಂಕಟೇಶ ಅವರು ಆತುರತೆಯಿಂದ ಕೇಳಹತ್ತಿದರು "ಡಾಕ್ಟರ್ನ ಕರೆದು ಕೊಂಡು ಬರಲೇನು ?"

ಸುಬ್ಬಕ್ಕ ಮುಗುಳುನಗೆ ನಗುತ್ತ ಹೇಳಿದರು "ನಿಮಗೆ ತಿಳಿಯುವದಿಲ್ಲ!" ಮುಗುಳುನಗೆಯಲ್ಲಿ ಸುಬ್ಬಕ್ಕನವರಿಗೆ ಕೆಲವು ನಿಮಿಷ ಮಾತುಗಳೆ ಹೊರಡಲಿಲ್ಲ. "ವೆಂಕಟೇಶರಾವ, ನಾನೊಂದು ಔಷಧ ಹೇಳುತ್ತೇನೆ. ಗದಗಿಗೆ ಹೋಗಿ ಬೇಗನೇ ತೆಗೆದುಕೊಂಡು ಬರಬೇಕು. ಅಂದರೆ ಅದರಿಂದ ಗುಣವಾಗುವುದು."

"ಏನು ತರಬೇಕು ಹೇಳಿರಿ........" ವೆಂಕಟೇಶ ಅವರ ಮಾತುಗಳನ್ನು ತಡೆದು ನಾರಾಯಣರಾಯರು ಹೇಳಿದರು "ನಮ್ಮ ಕಾರು ತೆಗೆದುಕೊಂಡು ನಾನೇ ಹೋಗಿ ಬರುತ್ತೇನೆ, ಹೇಳು— "

"ಲಕ್ಷ್ಮೀಬಾಯಿ, ನಿಮಗೆ ಏನು ಬೇಕು ಹೇಳವಾ? ಪೇಡೆಯೋ ಬರ್ಫಿಯೋ........? ಅಲ್ಲs?........ ಆರೇಳು ದಿನಗಳ ಹಿಂದೆಯೆ ನಿನಗೆ ವಾಂತಿ ಯಾಗಿತ್ತು. ಆಗಳೇ ನನಗೆ ಸಂಶಯ ಬಂದಿತ್ತು!"

ಸುಬ್ಬಕ್ಕನವರ ಮಾತಿನ ಅರ್ಥ ಆಗ ವೆಂಕಟೇಶ ಅವರಿಗೆ ಆಯಿತು. ಎಲ್ಲರೂ ಹರ್ಷದಿಂದ ನಗಲು ಆರಂಭಿಸಿದರು!

ಐದಾರು ದಿನಗಳ ನಂತರ, ಸುಬ್ಬಕ್ಕನವರು ಮೊಮ್ಮಗನನ್ನು ಕೊಡಬಹು ದಾದ ತಮ್ಮ ಪ್ರೀತಿಯ ಸೊಸೆಯನ್ನು ಗುಪ್ತವಾಗಿ ತಮ್ಮ ಕೋಣೆಗೆ ಕರೆದು ಕೊಂಡು ಹೋಗಿ, ಪಿಸುಮಾತುಗಳಲ್ಲಿ ಹೇಳಿದರು "ಈ ದಿನ ನಿನಗೊಂದು ಮಾತು ಹೇಳುತ್ತೇನೆ. ನೀನು ಯಾರ ಮುಂದೆಯೂ ಹೇಳಬೇಡ........" ಅವರು ಕೀಲಿಕೈ ತೆಗೆದುಕೊಂಡು ತಮ್ಮದೊಂದು ತಿಜೂರಿಯನ್ನು ತೆರೆದರು. ಅದರಲ್ಲಿರುವ ಸುಂದರವಾದ, ಎತ್ತರವಾದ ಬೆಳ್ಳಿಯ ಡಬ್ಬಿಯನ್ನು ತೆಗೆದು "ಮನೆ ಪಾಲು ಯಾವಾಗ ಆಗುವದೋ ಹೇಳಲಿಕ್ಕೆ ಬರುವದಿಲ್ಲ. ನಾನು ಹೇಳು ತ್ತೇನೆ, ಅವರು ಬಹಳೇ ಗಂಟು ಬಿದ್ದಿದ್ದಾರೆ!........ ನಿನ್ನ ಲಗ್ನವಾದ ಕೂಡಲೆ ಹಲವು ಆಭರಣ ನಿನಗೆ ಮಾಡಿಸಿದ್ದೆ. ನಿನಗೆ ನೆನಪಿರಬಹುದು........ ಈಗ ಮೊಮ್ಮಗನಿಗೆ ಇರಲಿ ಎಂದು ಭಂಗಾರ ತೆಗೆದಿಟ್ಟದ್ದೇನೆ." ಸುಬ್ಬಕ್ಕ ಮೇಲಿಂದ ಮೇಲೆ ಹಸನ್ಮುಖಿಯಾಗಿ ಲಕ್ಷ್ಮಿಯ ಕಡೆಗೆ ನೋಡುತ್ತಿದ್ದರು. "ಲಕ್ಷ್ಮೀ

ಬಾಯಿ, ಏನೇ ಆಗಲಿ ಇದು ನಿನ್ನ ಹತ್ತಿರ ಇರಲಿ. ಮುಂದೆ ಏನಾಗುವುದೋ ಯಾರಿಗೆ ಗೊತ್ತು! ನಾನು ಹೇಳುತ್ತೇನೆ ಕಾಲ ಎಂಥದು ಬರುವುದೋ ಏನ್ನೋ!.... ನೋಡು, ಈ ಚೀಲದಲ್ಲಿ ಹಾಕಿ ಮೇಲೆ ಬೇರೆಯಾಗಿ ಇಟ್ಟುಕೊ." ಆ ಬೆಳ್ಳಿಯ ಪೆಟ್ಟಿಗೆಯನ್ನು ಒಂದು ಚೀಲದಲ್ಲಿ ಹಾಕಿಕೊಟ್ಟರು. "ಲಕ್ಷ್ಮೀ ಬಾಯಿ, ನಾನು ಹೇಳುತ್ತೇನೆ, ಇದು ಎಲ್ಲ ನನ್ನದು. ಇವರು ಇದ್ದಾಗಲೇ ನನಗೆ ಕೊಟ್ಟಿದ್ದಾರೆ. ನಾನು ನಿನಗೇ ಕೊಡಬೇಕೆಂದು ಮೊದಲಿನಿಂದಲೂ ತೆಗೆದಿಟ್ಟದ್ದೇನೆ. ಭದ್ರವಾಗಿ ಇಡು. ಆ್ಞs! ನಾನು ಹೇಳುತ್ತೇನೆ!"

ಲಕ್ಷ್ಮಿ ಎಲ್ಲದಕ್ಕೂ ಮೌನವಾಗಿದ್ದಳು!

## ೧೯

ಓರೆಗುಂಟೆ ಪರ್ವತವನ್ನಿಳಿದು ಮೋಟಾರು ಸಾಗಿತು. ಐದಾರು ದಿನ ಮಳೆ ಹೊರಪಾದ್ದರಿಂದ, ಆಕಾಶವು ಸ್ವಚ್ಛವಾಗಿತ್ತು. ಎರಡು ಮೂರು ಮಳೆ ಸೆಳಕುಗಳು ಬಿದ್ದು ಭೂಮಿ ನೀರುಂಡದ್ದರಿಂದ ನೆಲವು ಹಸಿರು ಮುರಿಯುತ್ತಿತ್ತು. ಇಂಥ ವಾತಾವರಣದಲ್ಲಿ ಮತ್ತೆ ಮೋಟಾರನ್ನು ಹೊರಗೆ ತೆಗೆದುಕೊಂಡು ಓಡಾಡುವದೆಂದರೆ ಸಂತೋಷದ ಅನುಭವವೇ ಸರಿ. ಶೀನಪ್ಪನವರು ಮೋಟಾರನ್ನು ಹೊಡೆಯಲು ಹೊಸದಾಗಿ ಕಲಿತಿದ್ದರು. ಆದ್ದರಿಂದ ಅದನ್ನು ತೆಗೆದುಕೊಂಡು ಎಲ್ಲಿಯಾದರೂ ಹೋಗುವದೆಂದರೆ ಅವರಿಗೆ ಬಹಳ ಆನಂದವೆನಿಸುತ್ತಿತ್ತು. ದಾರಿ ಎಂಥದು ಎಂಬುದನ್ನು ಅವರು ಲೆಕ್ಕ ಹಾಕುತ್ತಿದ್ದಿಲ್ಲ. ಸಾಧಾರಣ ದಾರಿಯಿದ್ದರಾಯಿತು. ಮೋಟಾರನ್ನು ಹೊಡೆದುಕೊಂಡು ಹೋಗಿ ಬಿಡುತ್ತಿದ್ದರು.

ಮೋಟರ ಬಂದು ತೋಟದ ಬಳಿ ನಿಂತಿತು. ಜೋರಾಗಿ ಹಾರ್ನನ್ನು ಶೀನಪ್ಪನವರು ಬಾರಿಸಿದರು. ಆ ಹಾರ್ನಿನ ಸಪ್ಪಳ ಕೇಳಿ ನಾಯಿಗಳು ಬೊಗಳ ಹತ್ತಿದವು. ತರುವಾಯ ಮುದುಕಪ್ಪ ತಾನಾಗಿಯೆ ಓಡಿಬಂದನು.

"ಓಹೋ! ಶೀನಪ್ಪನವರು! ಬರ್ರಿ ರಾಯರ ಬರ್ರಿ ರಾಯರ!" ವಿನಯದಿಂದ ಮುದುಕಪ್ಪ ಶೀನಪ್ಪನವರಿಗೆ ಮಾತನಾಡಿದನು.

ಶೀನಪ್ಪನವರು ತಮ್ಮ ಶರ್ವಾನಿ ಕೋಟಿನಲ್ಲಿ ರಾಜನ ಠೀವಿಯಿಂದ ಕೆಳ
ಳಿದರು. ಮುದುಕಪ್ಪ ಬಾಗಿ ಬಾಗಿ ಅವರಿಗೆ ೨-೩ ಸಲ ನಮಸ್ಕಾರ ಮಾಡಿ
"ಏನು ಮುದುಕಪ್ಪ, ನಾನು ಬಂದದ್ದು ಅದು ಹೇಗೆ ಗೊತ್ತಾಗಲಿಲ್ಲ. ಕಿವಿನ
ಕೇಳಸದಷ್ಟು ಮುದುಕ ಆದಿಯೋ ಏನೋ?" ಎಂದು ಶೀನಪ್ಪನವರ
ಕೇಳಿದರು.

"ರಾವಸಾಹೇಬ, ನಿಮ್ಮ ಸಪ್ಪಳಕ್ಕಿಂತ ನಮ್ಮ ನಾಯಿ ಸಪ್ಪಳಾನೇ ನವ
ಗುರುತು ನೋಡ್ರಿ!"

"ಹೊಸ ಅನುಭವ ಬರಬೇಕು ಇನ್ನೂ ಮುದುಕಪ್ಪ ನಿನಗ! ಒಂದೆರಡ
ಸಲ ನಮ್ಮ ಕಾರು ಇಲ್ಲೆ ಬಂದಿತು ಅಂದರೆ ಗೊತ್ತಾಗತದ ತಾನೆ!"

ಮುದುಕಪ್ಪ ಒಂದು ಗುಡಾರನ್ನು ಹಾಸಿದ; ಒಂದು ತಕ್ಕೆಯನ್ನು
ತಂದಿಟ್ಟ. ಅಲ್ಲಿ ಆಸನಸ್ಥರಾಗಿ, ಶೀನಪ್ಪನವರು ತಮ್ಮ ಕಣ್ಣುಗಳನ್ನು ಮುದ
ಕಪ್ಪನ ಮನೆಯ ಸುತ್ತಲೂ ಚೆಲ್ಲಿದರು. ಮುದುಕಪ್ಪನ ಮನೆಯಲ್ಲಿದ್ದ ರಾಟ
ಯನ್ನು ನೋಡಿ "ಶಾಬ್ಬಾಸ ಮುದುಕಪ್ಪ! ನಾನು ಹೇಳಿದಂತೆ ಎಲ್ಲ ಮಾಡಿ
ರುವಿ. ಅಂತೂ ಮನೆಯಲ್ಲಿ ರಾಟಿ ಬಂದಿದೆ!"

"ರಾವಸಾಹೇಬ, ನಾನೂ ಅದೇನೋ ಆತಲ್ಲ ನೂಲೂದು ಸತ್ತಾಹ
ಅದಕ್ಕ ಹೋಗಿದ್ದೆ ಒಂದು ದಿವಸ!"

"ಸತ್ತಾಹ! ಮುದುಕಪ್ಪ ಚಲೋ ಹೇಳಿದಿ ನೋಡು. ಸತ್ತೇ ಹೋ-
ಯಿತು ಅದು ನಾಲ್ಕೇ ದಿವಸಕ್ಕ. ನಮ್ಮ ಫೌಜದಾರ ಒಮ್ಮೆ ಊರೊಳಗ
ಹಾಯೂಣ ಜನ ಗಾಬರೆ ಆಯ್ತು!........"

"ಶೀನಪ್ಪನವರ, ನಮ್ಮ ಮ್ಯಾಲೆ ಆ ವೆಂಕಟೇಶ ಅಪ್ಪನವರದು ಬಹಾಳ
ಪಿರುತಿ. ಅವರ ಉಪದೇಶ ಕೇಳಿದವ ನಾನೇ ಮೊದಲು! ಮತ್ತ ಅವರಂತ
ಹೋಗುವವ ಮೊದಲ ನಾನೇ. ಹಿಂಗಾಗಿ ನನ್ನ ಮ್ಯಾಲೆ ಬಹಾಳ ವಿಶ್ವಾಸ
ಅವರದು! ಖಾದಿ ಟೊಪಿಗಿ, ಅಂಗಿ ಎಲ್ಲಾ ತರಸೀನಿ ನೋಡ್ರಿ!"

"ಶಾಬ್ಬಾಸ್ ಮುದುಕಪ್ಪ! ನಿನಗ ಕೆಲಸದ್ದು ಟುಕಿ ಸ್ವಲ್ಪ ಹೇಳಿದರಾತು
ಬಹಳೇ ಲಗು ಕಲಿತುಕೊಳ್ಳುವಿ ನೋಡು.......... ನಮ್ಮ ನಖರಾ ಉನ್ನೀಸಾ
ಅವಳ ಗಾಯನ ಹೆಂಗ ಅನಿಸಿತು ಮುದುಕಪ್ಪ?"

"ಶೀನಪ್ಪನವರ, ಅದರ ಉತ್ತರ ನಾನು ಹೇಳಬೇಕೇನ್ರಿ?........ಎಲ್ಲಾ

ಜನರಿಗೆ ಹುಚ್ಚು ಹಿಡಿದದ, ಹುಚ್ಚು !"

ಮುದುಕಪ್ಪನ ಪ್ರಶಂಸೆಯನ್ನು ಕೇಳಿ ಶೀನಪ್ಪನವರು ಗಹಗಹಿಸಿ ಹುಚ್ಚು ನಗೆ ನಕ್ಕರು. "ಮುದುಕಪ್ಪ, ಯಾವಾಗಾದರೂ ಒಂದೇ ಏಟಿಗೆ ಎರಡು ಹಕ್ಕಿ ಹೊಡೆಯಬೇಕು. ಹ್ಹ ! ಹ್ಹ !" ಹೀಗೆನ್ನುತ್ತ ಶೀನಪ್ಪನವರು ಮತ್ತೆ ನಕ್ಕರು. "ನಮಗಂತೂ ಗಾಯನ ಕೇಳಲು ಒಂದು ಹಕ್ಕಿ ಸಿಕ್ಕಿತು. ಅದಲ್ಲದೆ ಆ ದೇಶ ಭಕ್ತನ ಫಜೀತಿ........! ಹ್ಹ ! ಹ್ಹ !" ಶೀನಪ್ಪನವರ ನಗೆಗೆ ಕೊನೆಯಿರಲಿಲ್ಲ "ಮುದುಕಪ್ಪ, ಈ ವೇಷ ಮಾತ್ರ ನೀನು ಬಿಡಬೇಡ. ಮೊನ್ನೆ ಎಲ್ಲಾ ಪಾಲು ಮುಗಿಸಿಬಿಟ್ಟೆವಿ. ಎಲ್ಲರೂ ತಾವೇ ಬಾಗಿದರು. ನಮ್ಮ ಪ್ರತಿಯೊಂದು ಕರಾರಿಗೂ ಒಪ್ಪುವಂತೆ ಮಾಡಿದಿವಿ. ಎಲ್ಲಾ ಮೋಜ ಆಯಿತು ! ಮುದುಕಪ್ಪ, ನಾನು ಏನು ಮಾಡಿದೆ ಗೊತ್ತದೆ ಏನು ನಿನಗೆ?"

"ಏನೇನು ಆಯಿತು ?"

"ಏನು ಆಯಿತು ಅಂತ, ಏನು ಕೇಳುವಿ ?........... ಈಗ ನೀನು ನನ್ನ ರೈತ ಅಲ್ಲ. ಅವರ ರೈತ !"

"ಹಾಂ !" ಎಂದು ಮುದುಕಪ್ಪ ಆಶ್ಚರ್ಯದಿಂದ ಉದ್ಗಾರ ತೆಗೆದ.

"ಏನೂ ಗಾಬರಿಯಾಗಬೇಡ, ಮುದುಕಪ್ಪ. ಎಲ್ಲಾ ನಾನೇ ಹೇಳಿದ್ದು. ತೋಟ ಬೇಕು ಅನ್ನುತ್ತಿದ್ದರು. ತೆಗೆದುಕೊಳ್ಳಲಿ. ಅಂದೆ. ಮುದ್ದಾಂ ನಾನು ಒಪ್ಪಿಗೆ ಕೊಟ್ಟೆ. ಮುದುಕಪ್ಪ ನೋಡು, ನಿನ್ನ ವೇಷ ಹಾಗೆಯೇ ಇರಬೇಕು. ಮರೆಯಬೇಡ."

"ಇಲ್ರಿ ಶೀನಪ್ಪನವರ, ನೋಡಿಯಾದರೂ ನೋಡಿರಿ."

"ಶಾಬ್ಬಾಸ್ !........ ತಗೋ ಈ ಗಂಟು." ಶೀನಪ್ಪನವರು ತಮ್ಮ ಶರ್ವಾನಿ ಕೋಟಿನ ಗುಂಡಿಗಳನ್ನು ಉಚ್ಚಿ, ಒಳಕಿಸೆಯಲ್ಲಿಯ ಒಂದು ಕಾಗದದ ಪುಡಿಕೆಯನ್ನು ಕೊಟ್ಟರು.

ಅದರಲ್ಲಿ ಮೂರು ನೂರು ರೂಪಾಯಿಗಳ ನೋಟು ಇದ್ದವು. ಮುದುಕಪ್ಪನ ಮನಸ್ಸು ಆನಂದದಿಂದ ಒಮ್ಮೆಲೆ ಅರಳಿತು. ಅವನಿಗೆ ಉತ್ತರ ಕೊಡ ು ಮಾತುಗಳೇ ಹೊರಡಲಿಲ್ಲ.

"ಮರೆತೀಯಾ ಮತ್ತೆ !" ಶೀನಪ್ಪನವರು ತಮ್ಮ ಕೋಟಿನ ಗುಂಡಿಗಳನ್ನು ಹಾಕಿಕೊಳ್ಳುತ್ತ ಹೇಳಿದರು.

“ಅಯ್ಯೋ! ನೀವು ಹೇಳಿದ ಒಂದು ಕೆಲಸವಾದರೂ ತಪ್ಪಿಸೀ
ನಾನು? ಏನೋ ನಿಮ್ಮ ಪುಣ್ಯ! ಭಿಕ್ಷಾದವ ಹೋಗಿ........”

“ಲಕ್ಷಾಪತಿ ಆಗುವಿ! ಹ್ಹ! ಹ್ಹ!” ಶೀನಪ್ಪನವರು ತಮ್ಮ ನ
ಯನ್ನು ತಡೆದು ಮುದುಕಪ್ಪನಿಗೆ ಮತ್ತೆ ಕೆಲವು ಕಿವಿಮಾತುಗಳನ್ನು ಹೇಳಿದ
“ಅವರ ಪಾಲಿಗೆ ಯಾವ ಯಾವ ಹೊಲ, ತೋಟ ಇವೆ ಎಲ್ಲ ರೈತರಿಗೂ ಭೆ
ಯಾಗಿ ಹೇಳು. ಹೊಲ ನಮ್ಮವೇ! ನಾವು ಕಾಯಂ ಕುಳಗಳು! ಎಂ
ಜಗಳಾಡಲು ಹೇಳು. ಕೋರ್ಟಿನ ಖರ್ಚು ನಾನು ಕೊಡುತ್ತೇನೆ. ಮೇ
ಅವರಿಗೆ ಧನ ಸಹಾಯ....”

“ಶೀನಪ್ಪನವರ, ಇದೆಲ್ಲ ನೀವು ನನಗೆ ಹೇಳಬೇಕೇನ್ರಿ? ಈಗಿನ ದಿವ
ದಾಗ, ಕಲಿಯುಗದಾಗ, ರೂಪಾಯಿ ಕೊಟ್ಟರ ಬೇಕಾದ್ದವರು ನಾಚಿಕೆ ಬಿ
ಕುಣಿಯಲಿಕ್ಕೂ ತಯಾರ.... ಆ ಕೆಲಸ ನಾನು ಹೇಗೆ ಮಾಡಿಸತೀನಿ! ಆ
ಚಮತ್ಕಾರ ನೋಡಿಯಾದ್ರೂ ನೋಡ್ರಿ ನೀವು....”

ಮುದುಕಪ್ಪನ ಜಾಣತನದ ಮಾತಿಗೆ ಶೀನಪ್ಪನವರು ತಲೆದೂಗಿದರ
ಮುದುಕಪ್ಪ ಒಳಗೆ ಹೋಗಿ, ಒಂದು ತಂಬಿಗೆ ತಾಜಾ ಹಾಲನ್ನು ಬುರುಗುದ
ತೆಗೆದುಕೊಂಡು ಶೀನಪ್ಪನವರ ಎದುರಿಗೆ ಇಟ್ಟನು. ಆ ಹಾಲನ್ನು ಕುಡಿಯು
ಶೀನಪ್ಪನವರು ಮತ್ತೊಂದು ಎಚ್ಚರಿಕೆಯ ಮಾತನ್ನು ಮುದುಕಪ್ಪನಿಗೆ ಹೇ
ದರು— “ನಿನ್ನ ಹೆಂಡತಿ ಆ ಜೋಗಿತಿ ಮತ್ತೆ ಅವರ ಕಡೆಗೆ ಇರುವಳೇನು?

“ಅಯ್ಯೋ!” ಮುದುಕಪ್ಪ ತಿರಸ್ಕಾರದಿಂದ ನುಡಿದನು. “ಈ ಜ
ದೊಳಗ ಅದು ಸಾಧ್ಯವೇ ಇಲ್ಲ. ನಿಮ್ಮನ್ನು ನಾವು ಮರೆಯೋದು ಶ
ಹೇಗೆ?........ ಗೋವಿಂದರಾಯರು ಬಂದಿದ್ದರು........ಆಕಿಗೂ ಒಂದು ಕೆಲಸ
ಹೇಳ್ಯಾರೆ!”

“ಯಾವ ಕೆಲಸಪಾ ಅದು? ಮತ್ತೆ ಬೇರೆ ಏನಾದರೂ....”

“ಏನೂ ಇಲ್ಲ. ಇದೇ—! ವೆಂಕಟೇಶ ಅವರಿಗೆ ಮಾಟ ಮಾಡಿಸಲಿ
ಹೇಳಿದರು. ಅವರು ಆ ಸಣ್ಣ ಬಾಯರನ್ನ ಬೆನ್ನ ಹತ್ತಿರಬೇಕು......
ಹಾಂಗ....!”

“ಶಾಬ್ಬಾಸ್! ಒಳ್ಳೇ ಉಪಾಯ, ಮುದಕಪ್ಪ....” ಶೀನಪ್ಪನವ
ಸ್ವಲ್ಪ ಯೋಚಿಸಿ ಹೇಳಿದರು “ನೋಡು ಮುದುಕಪ್ಪ, ನನಗೇನು ಹಾಗೆ ಕೆ

ಮನಸ್ಸು ಇಲ್ಲ. ನೀನೇ ನೋಡು. ನಾನು ಎಂದಾದರೂ ಹೀಗೆ ಮಾಡಿದ್ದೇನು? ತಿನ್ನಲಿ, ನಮ್ಮ ಜನಾ, ನಮ್ಮ ಊರವರು ಬೇಕಾದಷ್ಟು ತಿನ್ನಲಿ! ಅದಕ್ಕೆ ನಾನು ಏನೂ ಬೇಡ ಅನ್ನುವದಿಲ್ಲ. ಯಾರೋ ಹೊರಗಿನವರು ಬಂದು ತಿಂದರೆ? ಆ್ಞs? ಅದಕ್ಕ ನಾನು ಅವರಿಗೆ ದೇಶಭುಕ್ತ ಅಂತ ಕರೆಯುವೆ! ................ಮುದುಕಪ್ಪ, ಗೋವಿಂದರಾಯರ ಉಪಾಯ ನನಗೂ ಮನಸ್ಸಿಗೆ ಬಂದಿತು ನೋಡು. ಯಾಕಂದರೆ ನಮ್ಮ ಸಣ್ಣಬಾಯರೂ, ಆ ದೇಶಭುಕ್ತರೂ ಯಾವಾಗಾದರೂ ಕೂಡಿಕೊಂಡೇ ಓಡಾಡತಿರತಾರ!"

"ಹೌದ್ರಿ ಶೀನಪ್ಪನವರ, ಇಲ್ಲೆ ತೋಟಕ್ಕ ಬಂದರೂ ಇಬ್ಬರೂ ಕೂಡೇ! ಅದಕ್ಕ ಒಂದು ದಿವಸ ನಾನು ಒಂದು ಮೋಜು ಮಾಡಬೇಕು ಅಂತ ಮಾಡೀನಿ."

"ಹೂಂ! ಯಾವುದು ಅದು ಮುದುಕಪ್ಪ?"

"ಈಗ ಹೇಳೋಣಿಲ್ಲ ಬಿಡ್ರಿ. ಆ ಪ್ರಸಂಗ ಬಂದಾಗ ನಿಮಗೇ ಗೊತ್ತಾಗತದೆ. ಶೀನಪ್ಪನವರ, ಇಂಥಾ ಜನರು ಬಂದು ನಮ್ಮ ಕಳಸಾಪೂರ ಕಿರುತಿ ಎಲ್ಲೆ ಕೆಡಿಸಿಬಿಡತಾರೋ ಅಂತೀನಿ."

"ಮುದುಕಪ್ಪ, ನಿನ್ನ ಬುದ್ಧಿ ಸುಧಾರಿಸಿದರೂ, ಅವರಿಗೆ ಇನ್ನೂ ಬುದ್ಧಿ ಬಂದಿಲ್ಲ ನೋಡು!" ಶೀನಪ್ಪನವರು ಈ ಮಾತುಗಳನ್ನು ಹೇಳುತ್ತ, ಅಲ್ಲಿಂದ ಬೀಡಾರವನ್ನು ಕಿತ್ತಿದರು.

ಮೋಟಾರ ಸಾಗುವದಕ್ಕಿಂತ ಮೊದಲು ಅನೇಕ ವೇಳೆ ಅವರ ಹಾರ್ನ್ ಬಾರಿಸಿ ಸಪ್ಪಳ ಮಾಡಿ, ಮತ್ತೆ ಪ್ರಯಾಣ ಬೆಳಿಸಿದರು. ಅಲ್ಲಲ್ಲಿ ಹಾಯ್ದು, ಅವರು ಊರ ಕಡೆಗೆ ಬಂದರು.

ಆಗ ಮಧ್ಯಾಹ್ನ ಹತ್ತು ಗಂಟೆ ಸಮಯವಾಗಿತ್ತು. ಲಕ್ಷ್ಮಿ ವೆಂಕಟೇಶ ದೇವರ ಗುಡಿಗೆ ಹೋಗಿ, ಸುಬ್ಬಕ್ಕನವರ ಜೊತೆಗೆ ತಿರುಗಿ ಮನೆಗೆ ಬರುತ್ತಿದ್ದಳು. ಅವಳು ಹಸಿರು ಸೀರೆ ಮತ್ತು ಹಸಿರು ಕುಪ್ಪಸ ತೊಟ್ಟಿದ್ದಳು. ಮೈಮೇಲೆ ಹೊಸ ಹೊಸ ಆಭರಣಗಳಿದ್ದವು. ಬೆಳಗಿನಲ್ಲಿ ಸ್ವಚ್ಛವಾಗಿ ಎರೆದುಕೊಂಡದ್ದರಿಂದ, ಅವಳ ದೇಹಕ್ಕೆ ಅದೊಂದು ರೀತಿಯ ಮೆರುಗಿತ್ತು.

ಶೀನಪ್ಪನವರು ತಮ್ಮ ಕಾರಿನಲ್ಲಿ, ಲಕ್ಷ್ಮಿಯನ್ನು ದೂರದಿಂದಲೇ ಗುರುತಿಸಿದ್ದರು. ಅದೇಕೊ ಮನಸ್ಸು ಅವಳ ಕಡೆಗೆ ಹರಿಯಿತು. ಹೊಸ ಚೆಲುವು-

ತನ್ನ ಆಕರ್ಷಕ ಕಿರಣಗಳಿಂದ ಅವರನ್ನು ಜಗ್ಗುತ್ತಿರುವಂತೆ ಅವರಿಗೆ ಭಾಸ
ಯಿತು. ಮೋಟರು ಅವರ ಹತ್ತಿರ ನಿಲ್ಲಿಸಿ ಬಿಡಬೇಕೆ ಅಥವಾ ಮುಂದೆ ಹೊ
ಬೇಕೆ? ಹೀಗೆ ವಿಚಾರ ಮಾಡಮಾಡುತ್ತಲೇ, ಲಕ್ಷ್ಮಿಯ ಹತ್ತಿರ ಬ
ಮೋಟಾರಿಗೆ ಒಮ್ಮೆಲೆ ಬ್ರೆಕ್ ಹಾಕಿಬಿಟ್ಟರು.

ಶೀನಪ್ಪನವರನ್ನು ನೋಡಿ ಲಕ್ಷ್ಮಿ ದೂರ ಸರಿದು ನಿಂತಳು. ಸುಬ
ನವರೆ ಶೀನಪ್ಪನವರ ಕೂಡ ಮಾತನಾಡಿದರು. ಮನೆ ಪಾಲಾಗುವ ಹೊ
ಬೇಕಾದಷ್ಟು ಜಗಳವಾಡಿದ್ದರೂ, ಅನೇಕ ಸಲ ಅತ್ತು ದುಃಖಿಸಿದ್ದರೂ ಗಭಿ
ಯಾದ ತಮ್ಮ ಸೊಸೆಯನ್ನು ನೋಡುವದೆಂದರೆ ಅವಳಿಗೆ ಅಗಣಿತ ಆನ
ತಮ್ಮ ಸೊಸೆಯ ವಿಷಯ ಹೇಳುವದೆಂದರೆ ಅವರ ನಾಲಗೆಗೆ ದಣಿವೇ ಇ
ಶೀನಪ್ಪನವರು ಭೆಟ್ಟಿಯಾದಾಗಲೂ ಅವರು ಅದೇ ಮಾತನ್ನೇ ಎತ್ತಿದರು.
“ನೋಡು ಶೀನಪ್ಪ ನಾನು ಹೇಳುತ್ತೇನೆ. ಇವೊತ್ತು ಅವಳಿಗೆ ಹೋ
ಊಟ. ನಾಳೆ ಹೋಳಿಗೆ ಊಟ ಗದಗಿನಲ್ಲಿ. ಅವಳಿಗೆ ಸಾಲಾಗಿ ಮನೆ ಸಿಕ್ಕಿ
ಲಕ್ಷ್ಮೀಬಾಯಿಗೆ ಏನು ಬೇಕು, ಎಲ್ಲಾ ಕೊಡಿಸಬೇಕೂ! ಅಂದರೇ ಮುತ್ತಿನ
ಮಗ ಹುಟ್ಟುತಾನೆ!”

ಲಕ್ಷ್ಮಿ ನಾಚಿಕೆಯಿಂದಲೋ ಏನೋ ಮತ್ತಿಷ್ಟು ತಲೆ ಬಾಗಿಸಿದ
ಶೀನಪ್ಪನವರು ಅವಳ ಕಡೆಗೇ ನೋಡುತ್ತ “ಹಾಗಾದರೆ ಇಂದು ಹೋ
ಎಲ್ಲಿದೆ?”

ಸುಬ್ಬಕ್ಕನವರು ತಾವೇ ಉತ್ತರ ಹೇಳಿದರು “ಹೊಸದಾಗಿ ಬಂದಿ
ಳಲ್ಲ ಶಾಂತಾಬಾಯಿ ಅವಳ ಮನೆಯಲ್ಲಿ. ಇಕಿ ಗೆಳತಿ ಅವಳು!”

“ಅವರಿಗೆ ಮನೆ ಸಿಕ್ಕಿತೇನು?” ಏನೂ ಗೊತ್ತಿಲ್ಲದವರಂತೆ ಶೀನ
ವರು ಪ್ರಶ್ನೆ ಮಾಡಿದರು.

“ಏನಾದರೂ ಮಾಡಬೇಕಲ್ಲ ಶೀನಪ್ಪ. ಕರೆಯಿಸಿಕೊಂಡ ಮೆ
ಏನಾದರೂ ಮಾಡಲೇಬೇಕಲ್ಲ. ನನ್ನ ಪಾಲಿನ ಸ್ಥಳದಲ್ಲಿಯೆ ಕೆಲವು ಭ
ಮಾಡಿಸಿಕೊಟ್ಟಿದ್ದೇನೆ ಮುಂದೆ ಅವರಿಗೂ ಒಂದು ಹೊಸ ಮನೆ ಕಟ್ಟಿಸಿಕೊ
ಬೇಕು. ನಾನು ಹೇಳುತ್ತೇನೆ, ಇನ್ನು ಎಲ್ಲರಿಗೂ ಮನೆ ಆಗಲೇಬೇಕು.”

ಜಾಗಿರದಾರರ ದೊಡ್ಡ ವಾಡೆ ಇಬ್ಭಾಗವಾಗಿ ಹೋಗಿತ್ತು. ಅದ
ಮೂರು ಸಾಲುಗಳಾಗಿದ್ದವು. ಅಡಿಗೆಯ ಒಲೆ ಬೇರೆ ಬೇರೆ ಪ್ರಾರಂಭವಾದ

ಬ್ಬರವೇ—ಒಂದು ನಾರಾಯಣರಾಯರವು; ಇನ್ನೊಂದು ಗೋವಿಂದರಾಯ ದು. ಆನಂದರಾಯರಂತೂ ಸಂಸಾರವನ್ನು ಹಚ್ಚಿಕೊಂಡಿರಲೂ ಇಲ್ಲ. ಅವರು ಊರೊಳಗೆ ಇರಲೂ ಇಲ್ಲ. ಶೀನಪ್ಪನವರು ತಮ್ಮದೊಂದು ದೊಡ್ಡ ವಾಡೆ ಯನ್ನು ಕಳಸಾಪೂರದಲ್ಲಿ ಕಟ್ಟಿಸುವ ಸಿದ್ಧತೆ ನಡೆಸಿದ್ದರು; ಟ್ರಕ್ಕುಗಳಲ್ಲಿ ಮನೆ ಕಟ್ಟುವ ಕಲ್ಲುಗಳು ಬಂದು ಬೀಳುತ್ತಿದ್ದವು. ಶೀನಪ್ಪನವರ ಸಿದ್ಧತೆ ನೋಡಿದ ಕೂಡಲೇ, ವೆಂಕಟೇಶ ಅವರಿಗೂ ಒಂದು ಮನೆ ಕಟ್ಟಿಸಿಕೊಡಬೇಕು ಎಂದು ನಿರ್ಣಯವಾಗಿತ್ತು. ಎಲ್ಲರೂ ಒಟ್ಟುಗೂಡಿ ಇರುವಾಗ ಬದುಕಿದವರು ಸುಬ್ಬ ಕ್ಕನವರು. ಮನೆ ಒಡೆಯುವುದನ್ನು ಕಣ್ಣಾರೆ ಕಂಡು ಅವರಿಗೆ ವಜ್ರಾಘಾತ ವಾಗಿತ್ತು. ಆದರೂ ತಮ್ಮ ಸೊಸೆ—ಗರ್ಭಿಣಿ ಸೊಸೆ ಅವಳನ್ನು ನೋಡಿ ತಮ್ಮ ಅಪಾರ ದುಃಖವನ್ನು ದೂರ ಮಾಡಿಕೊಳ್ಳುತ್ತಿದ್ದರು. ಮಂಜಿನೆದುರು ನಿಂತ ಸೂರ್ಯನಂತೆ, ಅವರ ದುಃಖದೆದುರು ಲಕ್ಷ್ಮಿ ನಿಂತಿದ್ದಳು. ದುಃಖವನ್ನು ಮರೆತಾಗ ಬಹಳ ಸರಳ ಮನಸ್ಸಿನಿಂದ ಸುಬ್ಬಕ್ಕನವರು ಇದ್ದ ಸಂಗತಿಯನ್ನೆಲ್ಲ ಹೇಳಿಬಿಡುತ್ತಿದ್ದರು.

ಎಲ್ಲ ಗೊತ್ತಿದ್ದರೂ, ಏನೂ ಗೊತ್ತಿಲ್ಲದವರಂತೆ ಶೀನಪ್ಪನವರು ಸುಬ್ಬಕ್ಕ ನವರ ಮಾತುಗಳನ್ನು ಕೇಳಿಕೊಂಡರು. ಸುಬ್ಬಕ್ಕ ಮತ್ತೆ ಹೇಳಿದರು, "ಶೀನಪ್ಪ ಗೋವಿಂದರಾಯರಿಗೂ ನೀನೇ ಹೇಳು. ಜಗಳಾಡಿದರೇನು ಆಯಿತು? ಒಲಿ ಬೇರೆ ಹೂಡಿದರೇನು ಆಯ್ತು? ಪ್ರೀತಿ ಪ್ರೀತಿಯೆ !........ನಾನು ಹೇಳುತ್ತೇನೆ! ಒಂದು ದಿನ ಲಕ್ಷ್ಮೀಬಾಯಿಯನ್ನು ಊಟಕ್ಕೆ ಕರೆ ಎಂದು ಹೇಳು. ಎಲ್ಲಾ ಮುಗಿದು ಹೋಯಿತಲ್ಲಾ! ಇನ್ನಾದರೂ ಸುಖದಿಂದ ಬಾಳ್ರಿ. ನಾನು ಹೇಳ್ತ ತ್ತೇನೆ. ಲಕ್ಷ್ಮೀಬಾಯಿಗೆ ಊಟಕ್ಕೆ ಕರೆ ಎಂದು ಹೇಳು. ನಿನ್ನ ಮಾತು ಗೋವಿಂದರಾಯ ಕೇಳುವನು........"

"ಹೂಂ" ಎಂದು ಶೀನಪ್ಪನವರು ಮೋಟಾರನ್ನು ಮುಂದೆ ಹೊಡೆದು ಕೊಂಡು ಹೋದರು.

ಶೀನಪ್ಪನವರು ಮನೆಗೆ ಹೋಗಿ ತಮ್ಮ ಕೋಣೆಯಲ್ಲಿ ಗಾಳಿ ಹಾಕಿಕೊ ಳ್ಳುತ್ತ ವಿರಾಮ ಖುರ್ಚಿಯ ಮೇಲೆ ಕುಳಿತರು. ಅವರ ಕಣ್ಣುಮುಂದೆ ಲಕ್ಷ್ಮಿಯ ಚಿತ್ರವೇ ಬರುತ್ತಿತ್ತು. ಬೀಸಣಿಕೆಯನ್ನು ಬೀಸಿ ಎಷ್ಟು ಗಾಳಿ ಹಾಕಿ ಕೊಂಡರೂ, ನಾಚಿಕೊಂಡು ಕೆಳಮೊಗ ಮಾಡಿಕೊಂಡು ನಿಂತ ಲಕ್ಷ್ಮಿಯ

ರೂಪ ಅವರ ಕಣ್ಣೆದುರು ನಿಲ್ಲುತ್ತಿತ್ತು. ಲಕ್ಷ್ಮಿಯ ಸೌಂದರ್ಯ ಸಂ
ಯನ್ನು ಆ ದಿನ ಶೀನಪ್ಪನವರು ಅರಿತರಲ್ಲದೆ, ಅವಳ ಮೈಮೇಲಿರುವ ಅ
ಕಾರ ಸಂಪತ್ತಿಯನ್ನೂ ಅವರು ನಿರೀಕ್ಷಿಸಿದರು. ಆ ದಿನ ಅವರ ಮನಸ್ಸಿನಲ್ಲಿ
ಎರಡು ಭಾಗಗಳಲ್ಲಿ ಆಟ ನಡೆದಿದ್ದಿತು. ಒಂದು ಕಡೆ ಅವಳ ಮೇಲಿನ ಮೋ
ಇನ್ನೊಂದು ಕಡೆಗೆ ಕುಹಕ ನೀತಿ!

ಲಕ್ಷ್ಮಿಯ ಮೈಮೇಲಿರುವ ಅಲಂಕಾರದ ಭಂಗಾರದ ಆಭರಣ
ಎಲ್ಲಿಂದ ಬಂದವು? ಅವುಗಳನ್ನು ಯಾರು ಕೊಟ್ಟಿರುವರು? ಒಟ್ಟು ಭಂಗ
ಬೆಳ್ಳಿಯನ್ನು ಪಾಲು ಮಾಡುವಾಗ ಇವು ಕಾಣಲೇ ಇಲ್ಲ. ಈಗ ಹೇಗೆ ಹ
ಬಿದ್ದಿವೆ? ಬಹುತರವಾಗಿ ಸುಬ್ಬಕ್ಕನವರು ಇವುಗಳನ್ನು ತೆಗೆದಿಟ್ಟುಕೊಂ
ಬೇಕು. ಈ ಊಹೆ ಶೀನಪ್ಪನವರಿಗೆ ಸರಿಯಾದುದೆಂದು ಬಲವಾಗಿ ಅನಿಸಿ
ಇದಕ್ಕೆ ಒಂದು ಕಾರಣವೂ ಇತ್ತು. ಲಕ್ಷ್ಮಿಯ ಲಗ್ನವಾದಾಗ ಗುಪ್ತವ
ಭಂಗಾರವನ್ನು ಸುಬ್ಬಕ್ಕನವರು ಶೀನಪ್ಪನವರ ಕಡೆಗೆ ಕೊಟ್ಟಿದ್ದರು. ಲಕ್ಷ್
ಹಲವು ಆಭರಣಗಳನ್ನು ಮಾಡಿಸಲು ಹೇಳಿದ್ದರು. ಇದೆಲ್ಲ ಹಳೆಯ ಸಂ
ನೆನಪಾಗಿ, ತಮ್ಮ ವಿಚಾರವನ್ನು ಶೀನಪ್ಪನವರು ಮನಸ್ಸಿನಲ್ಲಿಯೆ ದೃಢಪ
ಕೊಂಡರು. ಗೋವಿಂದರಾಯರಿಗೆ ಈ ಸುದ್ದಿಯನ್ನು ತಿಳಿಸಬೇಕು. ಅದರಲ್ಲಿಯ
ಅವರಿಗೆ ಪಾಲು ಸಿಗುವಂತೆ ಮಾಡಿಕೊಳ್ಳಬೇಕು. ಹೀಗೆ ಮನಸ್ಸಿನ ಒಂ
ಭಾಗ ವಿಚಾರಿಸುತ್ತಿತ್ತು.

ಮನಸ್ಸಿನ ಗೋಡೆಯ ಇನ್ನೊಂದು ಭಾಗದಲ್ಲಿ ಬೇರೆ ಆಟವೇ ನಡೆದಿತ
ಅದೂ ಹಳೆಯ ಸಂಗತಿ! ಡಾ. ಏಡನ್ ಅವರು ಶೀನಪ್ಪನವರಿಗೆ ತಮ್ಮ
ಗಿನ ಕೋಣೆಯಲ್ಲಿ ಕರೆದು ಹೇಳಿದ್ದರು. "ನಾರಾಯಣರಾಯರ ಈ ಹು
ಲಗ್ನವಾದರೆ ಕಡಿಮೆಯಾಗಬಹುದು. ಆದರೆ ಹೆಂಡತಿಗೆ ಮಾತ್ರ ಸುಖ ಸಿ
ವದಿಲ್ಲ!" ಎಂದು. ಆಗ ಶೀನಪ್ಪನವರು ಡಾಕ್ಟರಿಗೆ ಕೇಳಿದ್ದರು "ಏಕೆ
ಎಂದು. ಡಾಕ್ಟರರು "ನಾರಾಯಣರಾಯರಿಂದ ಮಕ್ಕಳಾಗಲಿಕ್ಕಿಲ್ಲ" ಎಂ
ಹೇಳಿದ್ದರು. ಶೀನಪ್ಪನವರಿಗೆ ಈ ದಿನ ಡಾ. ಏಡನ್ ಅವರು ಹೇಳಿದ ಮಾ
ಗಳು ನೆನಪಾಗತೊಡಗಿದವು. ಲಕ್ಷ್ಮಿ ಗರ್ಭಿಣಿಯಾದದ್ದು ಸುಳ್ಳು ಇದ್ದ
ಇರಬಹುದು. ಇದೇನೋ ಅತ್ತೆಯವರಾದ ಸುಬ್ಬಕ್ಕನವರ ಹುಚ್ಚು ಇದ್ದ
ಇರಬಹುದು ಎಂದು ಅವರು ತರ್ಕಿಸಿದರು. ಲಕ್ಷ್ಮಿಯನ್ನು ತಮ್ಮ ಮೋಹ

ಬಲೆಯಲ್ಲಿ ಇನ್ನೂ ಶಿಲುಕಿಸಬಹುದೇ ಎಂದು ಯೋಚಿಸಿದರು. ಅವರಿಗೆ ತಮ್ಮ ಹೆಂಡತಿ ತೀರಿಕೊಂಡ ಮೇಲೆ, ಲಗ್ನವಾಗಬೇಕು ಎಂದು ಎನಿಸಿರಲಿಲ್ಲ. ತಮ್ಮ ಹೆಂಡತಿಯ ಸಲುವಾಗಿ ಅಷ್ಟು ತ್ಯಾಗವನ್ನು ಮಾಡಲು ತಾವು ಸಿದ್ಧರಿರುವದಾಗಿ ಶೀನಪ್ಪನವರು ಎಲ್ಲರ ಮುಂದೆ ಹೇಳಿಕೊಳ್ಳುತ್ತಿದ್ದರು. ಆದರೆ ಅದು ಹೊರಗಿನ ತೋರಿಕೆಯ ಮಾತಾಗಿತ್ತು. ಒಳಗೊಳಗೆ ಜೀವ ಯಾವುದಾದರೊಂದು--ಏಕೆ ಬೇಕಾದಷ್ಟು ಹೆಣ್ಣನ್ನು ಬಯಸುತ್ತಿತ್ತು. ನಾಟಕಗಳಲ್ಲಿ ಹೆಂಗಸರನ್ನು ನೋಡುವುದು, ವೇಶ್ಯಾಜನರ ಗಾಯನ ಕೇಳುವುದು, ಹೆಣ್ಣಿನ ಸಲುವಾಗಿ ಅನೇಕ ಉಪಾಯಗಳನ್ನು ಮಾಡುವುದು, ಅವರ ಸಲುವಾಗಿ ಹಣವನ್ನು ನೀರಿನಂತೆ ವ್ಯಯ ಮಾಡುವುದು ಇವು ಅವರ ಚಟವಾಗಿ ಬಿಟ್ಟವು. ಹೀಗಾಗಿ ಹೊರಗಿನ ತೋರಿಕೆಗೆ ಅವರು ವಿಧಿಪೂರ್ವಕ ಲಗ್ನವಾಗದಿದ್ದರೂ, ಅವರು ಅನೇಕ ಹೆಣ್ಣುಗಳ ಸಹವಾಸವನ್ನು ಬಯಸಿ ಓಡಾಡುತ್ತಿದ್ದರು. ಶ್ರೀಮಂತರ ಮನೆಯಲ್ಲಿಯೆ ಅವರು ಉಂಡುಟ್ಟು ಸುಖವಾಗಿ ಬೆಳೆದದ್ದರಿಂದ, ಯೌವನದ ಕಳೆಯು ಅವರ ಮುಖದಲ್ಲಿತ್ತು. ತಮ್ಮ ರೂಪದಿಂದ ಮತ್ತು ತಮ್ಮ ಶ್ರೀಮಂತಿಕೆಯಿಂದ ಅವರು ಸುಂದರ ಸ್ತ್ರೀಯರನ್ನು ತಮ್ಮ ಕಡೆಗೆ ವಶಮಾಡಿಕೊಳ್ಳಲು ಹವಣಿಸುತ್ತಿದ್ದರು. ಆ ದಿನ ಅದೇಕೊ ಅವರಿಗೆ ಬಹಳವಾಗಿ ಅನಿಸಹತ್ತಿತು—ಲಕ್ಷ್ಮಿ ತಮ್ಮ ವಶವಾಗಬಹುದು ಎಂದು. ವಿಶ್ವಾಮಿತ್ರನು ಅಡವಿಯಲ್ಲಿ ಹರಿಶ್ಚಂದ್ರನಿಗೆ ಅನೇಕ ಘೋರ ವಿಪತ್ತುಗಳನ್ನು ಒಡ್ಡಿದಂತೆ ಶೀನಪ್ಪನವರೂ ಲಕ್ಷ್ಮಿಯು ತನ್ನ ಸಂಪತ್ತು ದೊರಕಿಸುವಲ್ಲಿ ಅನೇಕ ಆತಂಕಗಳನ್ನು ನಿರ್ಮಾಣ ಮಾಡಿದ್ದರು. ಹಣದ ವ್ಯಯದಲ್ಲಿ ದುಂದುಗಾರಿಕೆಯನ್ನು ಆರಂಭಿಸಿದ ಕೂಡಲೇ, ತಮ್ಮ ಪಣವನ್ನು ಬಿಟ್ಟುಕೊಟ್ಟ ಸುಬ್ಬಕ್ಕನವರಂತೆ ಲಕ್ಷ್ಮಿಯ ಸ್ಥಿತಿಯೂ ಆಗಬಹುದೆಂದು ಶೀನಪ್ಪನವರು ಭಾವಿಸಿದರು.

ಮನಸ್ಸಿನ ಎರಡು ಭಾವನೆಗಳ ಸ್ಪರ್ಧೆಯಲ್ಲಿ ಲಕ್ಷ್ಮಿಯನ್ನು ಮೋಹಿಸುವ ವಿಚಾರವೇ ಗೆದ್ದಿತ್ತು! ಗಾಳಿ ಹಾಕಿಕೊಳ್ಳುವ ಬೀಸಣಿಕೆಯು ತಾನಾಗಿಯೆ ನಿಂತಿತು. ಆ ದಿನವೇ ಲಕ್ಷ್ಮಿಯನ್ನು ಕಾಣುವ ನಿರ್ಣಯ ಮಾಡಿದರು. ಅವಳನ್ನು ಕಾಣಲು, ಊಟಕ್ಕೆ ಕರೆಯುವ ಒಂದು ಉತ್ತಮ ನೆವವನ್ನು ಮುಂದೆ ಮಾಡಿಕೊಂಡು ಹೋಗಬೇಕೆಂದರು.

ಆ ದಿನ ಸಂಜೆ! ಆಳುಗಳು ಎಲ್ಲ ಕಡೆಗೂ ದೀಪಗಳನ್ನು ಅದೇ ಆಗ

ಹಚ್ಚಿ ಇಟ್ಟಿದ್ದರು. ಗಂಡಸರೆಲ್ಲಾ ಹೊರಗೆ ಎಲ್ಲೆಲ್ಲಿಯೋ ಹೋಗಿಬಿಟ್ಟಿದ್ದ ತಮ್ಮ ಕೆಲಸದ ನೆವ ಹೇಳಿ ಶೀನಪ್ಪನವರು ಮನೆಯಲ್ಲಿಯೇ ಕುಳಿತುಕೊ ದ್ದರು.

ಬಿಳಿ ಧೋತರ ಉಟ್ಟುಕೊಂಡು, ರೇಶಿಮೆಯ ಶರ್ಟುವೊಂದನ್ನು ಧ ಕೊಂಡು ಶೀನಪ್ಪನವರು ಒಂದೊಂದೇ ಕೋಣೆಯನ್ನು ದಾಟಿ, ಲಕ್ಷ್ಮಿ ಇರು ಭಾಗದ ಕಡೆಗೆ ಹೊರಟರು. ಲಕ್ಷ್ಮಿಯು ಕೋಣೆಯಲ್ಲಿ ದೀಪವಿದ್ದುದು ಕಿ ಯೊಳಗಿನ ಬೆಳಕಿನಿಂದ ಕಂಡುಬಂದಿತು. ಅಟ್ಟವನ್ನೇರಿ ಶೀನಪ್ಪನವರು ಹೋ ಬೇಕೆಂದರು. ಅಷ್ಟರಲ್ಲಿ ಕಿಲಿಕಿಲಿ ನಗೆಯ ಧ್ವನಿ ಕೇಳಿಸಿತು. ಆದ್ದರಿಂದ ಅವ ಕೆಳಗೇ ನಿಂತು ಬಂದವರು ಯಾರೆಂದು ನಿರೀಕ್ಷಿಸಹತ್ತಿದರು.

“ ಶಾಂತಾ, ಹೊಸದಾಗಿ ನನ್ನ ಲಗ್ನವಾದಾಗ ನಿನಗೆ ಹೇಳಿದ್ದಿಲ್ಲವೇನು ನನ್ನ ಮನೆಯಲ್ಲಿಯೇ ನಿನ್ನನ್ನು ಇಟ್ಟುಕೊಳ್ಳುವೆನೆಂದು. ನೆನಪಿದೆಯೇನ ನಿನಗೆ ?.”

“ ಅಕಸ್ಮಾತ್ತಾಗಿ ಅಂದ ಮಾತು, ನಿಜವಾಗುತ್ತವೆಯೋ ಏನೋ ನಮ್ಮವ್ವಾ, ಈಗ ಎಷ್ಟೋ ಸುರಕ್ಷಿತವಾಗಿದೆ. ಎಲ್ಲ ನಿನ್ನ ಪುಣ್ಯ.”

“ ನನ್ನದೇನು ಪುಣ್ಯ ಮಹಾರಾಯಳೇ. ನಮ್ಮ ಗೆಳೆತನದ್ದು ಅಷ್ಟೆ ಆಗ ಪರಕಾರ ಉಟ್ಟುಕೊಂಡು ಆಟವಾಡುತ್ತಿದ್ದೆವು. ನೆನಪಿದೆಯೇನಕೆ ? ”

ಇಬ್ಬರೂ ಕಿಲಕಿಲನೆ ನಕ್ಕರು !

“ ಲಕ್ಕ್ಮಾ, ನಾನು ನಿನಗೆ ಹೇಳಿದ್ದೆ. ಇಬ್ಬರೂ ಕೂಡಿ ಸಾಯುವ ವರೆಗೂ ಹೀಗೆ ಆಟವಾಡಿ ಇರೋಣ ಎಂದು. ನಮ್ಮ ನಸೀಬ ಒಳ್ಳೆಯದು. ಆದ್ದರಿ ದಲೆ ದೈವ ನಮ್ಮನ್ನು ಒಂದೇ ಕಡೆಗೆ ಎಳೆದು ತಂದಿದೆ. ನೋಡವ್ವಾ ಲಕ್ಕ್ಮಾ ನಾನಂತೂ ಇವರ ಸ್ವಭಾವದ ಸಲುವಾಗಿ ಬೇಸತ್ತು ಹೋಗಿದ್ದೆ. ಪಿರಿಪಿ ತಿರುಗುತ್ತಿದ್ದರು. ಮನೆಯಲ್ಲಿಯ ಕಾಳಜೀ ಏನೂ ಇರುತ್ತಿರಲಿಲ್ಲ. ಪುಣ್ಯಕ್ಕೆ ಈಗ ಇಲ್ಲಿಯೇ ಇರುತ್ತಾರೆ ! ”

“ ಶಾಂತಾ, ನನ್ನ ಮನಸ್ಸೂ ಈಗ ಶಾಂತವಾಗಿದೆ ನೋಡು. ಬಂಧ ಬಳಗಕ್ಕಿಂತ ಗೆಳತಿಯರೇ ನೆಟ್ಟಗೆ !..........ನಿಂತುಕೊಂಡೇ ಮಾತನಾಡುತ್ತಿ ಯಲ್ಲ ? ಒಳಗೆ ಬಂದಾದರೂ ಬಾ. ”

“ ಲಕ್ಕ್ಮಾ, ನಿನಗೇನು ಚಿಂತೆ !........ ಇನ್ನು ಆರೇ ತಿಂಗಳು ತಡೆ. ತಿ

ಉವುದು! ರಾಜ, ಅಲ್ಲಿ ನನ್ನ ದಾರಿ ನೋಡುತ್ತಿರಬೇಕು." ಶಾಂತಾ ನಗು
ಗುತ್ತ ಕೆಳಗಿಳಿದು ಹೋದಳು.

ಆ ದಿನ ಶಾಂತಾ ಲಕ್ಷ್ಮಿಗೆ 'ಕುಬಸ' ಮಾಡಿದ್ದಳು. ಆರತಿಯ ಕಾರ್ಯ
ುಗಿದ ಮೇಲೆ, ಅವಳನ್ನು ಅಟ್ಟದ ವರೆಗೆ ಅವಳು ಕಳಿಸಿ ಹೋದಳು. ಲಕ್ಷ್ಮಿ
ನ್ನ ಆಭರಣಗಳನ್ನೆಲ್ಲ ಬಿಚ್ಚಿ, ಬೆಳ್ಳಿಯ ಪೆಟ್ಟಿಗೆಯಲ್ಲಿ ಹಾಕಿ, ಕಪಾಟಿನ ಕೀಲಿ
ಾಕುತ್ತಿರುವಾಗ, ಹಿಂದೆ ಸಪ್ಪಳವಾಯಿತು. ಹೊರಳಿ ನೋಡಿದಳು. ಅಲ್ಲಿ
ನಪ್ಪನವರು ಬಂದು ನಿಂತಿದ್ದರು.

ಗಾಬರಿಯಿಂದ ಅವಳ ಮೈ ಬೆವರೊಡೆಯಿತು.

ಶೀನಪ್ಪನವರು ತಾವಾಗಿಯೇ ಮಾತು ಆರಂಭಿಸಿದರು. "ಲಕ್ಕಮ್ಮಾ,
ಳೆ ನಿನ್ನನ್ನು ಊಟಕ್ಕೆ ಕರೆಯಬೇಕಾಗಿತ್ತು! ಅದಕ್ಕೆ ಬಂದೆ!"

ಲಕ್ಷ್ಮಿ ಏನೂ ಉತ್ತರ ಕೊಡಲಿಲ್ಲ. ಅವಳು ಏನೋ ಕೆಲಸದಲ್ಲಿರುವಂತೆ
ಟಸಿದಳು.

ಅವಳ ರೀತಿಯನ್ನು ಮನಗಂಡು, ಶೀನಪ್ಪ ತಾವೇ ಮಾತು ಮುಂದುವರಿ
ದರು. "ಲಕ್ಕಮ್ಮಾ, ನನ್ನದೆಲ್ಲ ತಪ್ಪಾಯಿತು ಎಂದು ಒಪ್ಪಿಕೊಳ್ಳುತ್ತೇನೆ.
ದಿನದೆಲ್ಲ ಮರೆತು ಬಿಡು. ಗಂಗಾಸ್ನಾನ ಮಾಡಿದರೆ ಪಾಪಗಳೆಲ್ಲ ತೊಳೆದು
ೋಗುವವಂತೆ! ಈ ದಿನ ಮಧ್ಯಾಹ್ನ ನಾನು ಕಣ್ಣೀರ ಸ್ನಾನವನ್ನು ಮಾಡಿ
ನೆ!........ನನ್ನ ಮನಸ್ಸು ಶುದ್ಧವಾಗಿದೆ. ನೋಡು ಲಕ್ಕಮ್ಮಾ, ಇಲ್ಲವಾದರೆ
ನ್ನು ಊಟಕ್ಕೆ ಕರೆಯಲು ನಾನಾಗಿಯೇ ಇಲ್ಲಿಯ ವರೆಗೆ ಏತಕ್ಕೆ ಬರು
ದ್ದೆ?"

ಲಕ್ಷ್ಮಿ ಮತ್ತೂ ಏನೂ ಉತ್ತರ ಕೊಡಲಿಲ್ಲ. ಅವರ ಕಡೆಗೆ ಮುಖ
ನ್ನೇ ತಿರುಗಿಸಲಿಲ್ಲ.

"ಲಕ್ಕಮ್ಮಾ, ನಿನಗೆ ನಿಜವಾದ ಸಂಗತಿ ಹೇಳುತ್ತಿದ್ದೇನೆ. ನನ್ನ ಮನಸ್ಸು
ೕಳ ಶುದ್ಧವಾಗಿದೆ. ಅದಕ್ಕೇ ಈ ಊರಲ್ಲಿ 'ಭಕ್ತಮಂಡಳಿ' ಯನ್ನೊಂದು
ಪನೆ ಮಾಡಿದ್ದೇವೆ."

ಆ ಮಾತನ್ನು ಕೇಳಿ ತನ್ನ ಚಂಚಲ ಕಣ್ಣುಗಳಿಂದ ಲಕ್ಷ್ಮಿ ಶೀನಪ್ಪನವರ
ಗೆ ಹೊರಳಿ ನೋಡಿದಳು. ದೀಪದ ಬೆಳಕು, ಅವಳ ಕಣ್ಣೊಳಗಿನ ಬೆಳಕಿ
ಲೀನವಾಯಿತು.

“ ಈ ಸುಂದರ ಚಂಚಲ ಕಣ್ಣುಗಳನ್ನು ಗುರುತಿಸಿದ್ದೇನೆ ಲಕ್ಕಮ್ಮಾ. ಅಂತೆಯೆ ಇಂಥ ದೊಡ್ಡ ಮನೆತನಕ್ಕೆ ನಿನ್ನನ್ನು ಗಂಟು ಹಾಕಿದೆ. ”

ಲಕ್ಷ್ಮಿ ಮತ್ತೆ ಹೊರಳಿ ಅವರ ಕಡೆಗೆ ದಿಟ್ಟಿಸಿ ನೋಡಿದಳು.

“ ಲಕ್ಕಮ್ಮಾ, ನನ್ನ ಮನಸ್ಸೇ ಶುದ್ಧವಿರುವಾಗ ನೀನು ಯಾವುದೋ ರೀತಿಯಿಂದ ಏಕೆ ನೋಡುತ್ತಿರುವೆ?........ ನನಗೇನು ಹೆಣ್ಣಿಗೆ ಕಡಿಮೆಯಿಲ್ಲ. ಆ ಸೊಲ್ಲಾಪೂರದ ಕೋಕಿಲೆ ಹೇಗೆ ನನ್ನ ಕಡೆಗೆ ಓಡಿಬಂದಿದ್ದಳು. ಒಂದು ದಿನ ವೆಂದು ಹೇಳಿ ಬಂದರೆ, ಮೂರು ದಿನವಿದ್ದು ಹೋದಳು. ಲಕ್ಕಮ್ಮಾ, ನನ ಗೇನು ಹೆಣ್ಣಿನ ಆಶೆ ಇಲ್ಲ—ನೀನು ತಿಳಿದುಕೊಂಡಂತೆ ! ನಿನಗೆ ಸುಖವಾಗ ಬೇಕೆಂಬುವದೇ ಮುಖ್ಯ ನನ್ನ ಉದ್ದೇಶ. ನಿನ್ನ ತಾಯಿಗೆ ನಾನು ಈ ರೀತಿ ಯಾಗಿ ವಚನ ಕೊಟ್ಟಿದ್ದೆ. ನಿನ್ನ ಸುಖವೇ ನನ್ನ ಸುಖ! ನಿನಗೆ ದುಃಖ ವಾದರೆ ನನಗೂ ದುಃಖ! ಆದರೆ ಒಂದು ಮಾತು ಮಾತ್ರ ಹೇಳುತ್ತೇನೆ.... ”

ಶೀನಪ್ಪನವರ ಮಾತು ಕೇಳಬರುತ್ತಿದ್ದರೂ ಲಕ್ಷ್ಮಿ ಏನೂ ಉತ್ತರಕೊಡದೆ ಸುಮ್ಮನೇ ನಿಂತಿದ್ದಳು.

“ ಲಕ್ಕಮ್ಮಾ, ಈಗ ನನಗೆ ಅನಿಸುತ್ತಿದೆ. ನನ್ನದು ತಪ್ಪಾಯಿತೋ ಏನೋ ಎಂದು. ನಿನಗೆ ಅನುಗುಣನಾದ ವರ ಸಿಗಲಿಲ್ಲ !........ಏನೋ ವಿಧಿ ಪೂರ್ವಕ ಲಗ್ನವಾಯಿತು ಎಂದು ಕುರುಡಿಯಂತೆ ನೀನು ಅವರ ಬೆನ್ನು ಹತ್ತಿರ ಬೇಕು ಅಷ್ಟೆ! ನಮ್ಮ ಹಿಂದೂ ಧರ್ಮ ವಿಚಿತ್ರವಿದೆ!........... ನಿನಗೆ ನಿಜ ವಾದ ಸುಖ ಸಿಗಬೇಕಿದ್ದರೆ, ಈ ಹುಚ್ಚು ನಾರಾಯಣರಾಯರಿಂದ ಏನು ?.... ಹೀಗೆ ಏನಾದರೂ ಆದರೆ, ಸೋಡಚೀಟಿ ಕೊಡಲು ನಮ್ಮಲ್ಲಿ ಅನುಕೂಲವಿಲ್ಲ. ಪಾಪ ! ನಿನಗೆ ಎಷ್ಟು ತ್ರಾಸವಿದೆಯೋ ಏನೋ ! ನಿನ್ನಂಥ ಎಷ್ಟು ಹೆಂಗಸರು ಈ ಜಗತ್ತಿನಲ್ಲಿ ಬಳಲುತ್ತಿರುವರೋ ಏನೋ !........ ನೋಡು ಲಕ್ಕಮ್ಮಾ, ನನಗೆ ಇಲ್ಲಿ ಪಾಲು ಸಿಕ್ಕಿದೆ! ಬೇಕಾದಷ್ಟು ಹಣವೂ ಸಿಕ್ಕಿದೆ! ಬೇರೆ ಯಾವು ದಾದರೂ ಊರಿಗೆ ಹೋಗಿ ಒಂದು ದೊಡ್ಡ ಬಂಗಲೆ ಕಟ್ಟಿಸಬೇಕೆಂದಿದ್ದೇನೆ. ಅಲ್ಲಿ ಸುಖವಾಗಿ ಇರಬೇಕು. ನಮ್ಮನ್ನು ಯಾರೂ ಅಲ್ಲಿ ಕೇಳುವದಿಲ್ಲ. ನಮ್ಮನ್ನು ಅಂದರೆ ಯಾರು ಯಾರು ಎಂದು ತಿಳಿದಿರುವಿ ? ”

ಲಕ್ಷ್ಮಿ ಕಸಿವಿಸಿಯಿಂದ ಶೀನಪ್ಪನವರ ಕಡೆಗೆ ನೋಡಿದಳು.

“ ಸಂಜೀವರಾಯರನ್ನು ಅಲ್ಲಿಗೆ ಕರೆದುಕೊಂಡು ಬರುತ್ತೇನೆ. ನಾನು,

ನೀನು, ಸಂಜೀವರಾಯರು ! ”

“ ಶೀನೂಕಾಕಾ ! ” ಜೋರಿನಿಂದ ಲಕ್ಷ್ಮಿ ಒದರಿದಳು. “ ನೀವು ಇಲ್ಲಿಂದ ಬೇಗನೇ ಕೆಳಗೆ ಇಳಿಯಿರಿ. ಇಲ್ಲವಾದರೆ ನಿಮ್ಮ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ”

ಶೀನಪ್ಪನವರು ಹುಚ್ಚುನಗೆ ನಕ್ಕರು. “ ಪ್ರೇಮ ಮೂರು ಪ್ರಕಾರದ್ದು. ಸಹಜವಾಗಿ ಬರುವುದು; ಒತ್ತಾಯದ್ದು; ಮೂರನೆಯದು ದುಡ್ಡಿನದು. ಈಗ ನಾನು ಮೊದಲನೆಯದನ್ನು ವಜಾಮಾಡಿ ಬಿಟ್ಟಿದ್ದೇನೆ; ಈಗ ಎರಡನೆಯದು. ”

“ ಶೀನೂಕಾಕಾ ! ” ಲಕ್ಷ್ಮಿ ಗದ್ದರಿಸಿದಳು.

“ ಲಕ್ಕಮ್ಮಾ, ನಾನು ಎಲ್ಲಿಯ ವರೆಗೆ ಉತ್ತಮನೋ ಅಲ್ಲಿಯ ವರೆಗೆ ಉತ್ತಮ. ಒಮ್ಮೆ ತಲೆ ಕೆಟ್ಟಿತೆಂದರೆ ನನ್ನ ದಾರಿಯಲ್ಲಿ ಯಾರೂ ಅಡ್ಡ ಬರಲಾರರು ! ”

“ ಶೀನೂಕಾಕಾ ! ”

“ ಲಕ್ಕಮ್ಮಾ, ಹುಚ್ಚ ನಾರಾಯಣನ ಜೊತೆಗೆ ಇದ್ದು ನೀನು ಹುಚ್ಚಿಯಾಗಿರುವಿ. ನಾರಾಯಣರಾಯರಿಂದ ಮಕ್ಕಳೇ ಆಗುವುದಿಲ್ಲವೆಂಬುದು ನನಗೆ ಗೊತ್ತಿದೆ ! ”

“ ಏನಂದೀ ? ”

“ ಅವರದೇ ಮಗುವಾಗಿದ್ದರೆ ಅದೂ ಹುಚ್ಚುಆಗುವುದು ಅಂದೆ, ”

ಶೀನಪ್ಪನವರು ಆಡಿದ ಮಾತುಗಳನ್ನು ಸಹಿಸುವದಾಗಲಿಲ್ಲ. “ ನಾನು ಹುಚ್ಚಿ ? ” ಎಂದವಳೇ ಜೋರಾಗಿ ಅವರ ಕಪಾಳಕ್ಕೆ ಏಟು ಬಿಟ್ಟು, ಅವರನ್ನು ಕೆಳಗೆ ನೂಕಿ ಬಿಟ್ಟಳು !

## ೨೦

ಶೀನಪ್ಪನವರು ಏನೂ ಮಾತನಾಡದೆ ತಮ್ಮ ಕೋಣೆಗೆ ಮರಳಿಬಂದರು. ಈಗ ಅವರ ಮನಸ್ಸು ಏಕಾಗ್ರವಾಯಿತು. ಅದು ಎರಡು ಕಡೆಗೆ ಹರಿಯುತ್ತಿರಲಿಲ್ಲ. ಮರುದಿನವೇ ಗೋವಿಂದರಾಯ ಮತ್ತು ಸೀತಕ್ಕ ಅವರ ಮುಂದೆ

ಭಂಗಾರದ ಪ್ರಸ್ತಾಪವನ್ನು ಎತ್ತಿ ಸವಿಸ್ತರವಾಗಿ ಎಲ್ಲವನ್ನು ತಿಳಿಹೇಳಿದರು.

ಸೀತಕ್ಕ ಸುಬ್ಬಕ್ಕನವರ ಜೊತೆಗೆ ಜಗಳವಾಡಲು ಆರಂಬಿಸಿದಳು. ಸುಬ್ಬಕ್ಕನವರ ಕುಟಿಲ ರಾಜಕಾರಣವನ್ನು ನಾಲ್ಕು ಜನರೆದುರು ಬಣ್ಣಿಸಿ ಹೇಳಹತ್ತಿದಳು "ಇವರ ಸ್ವಭಾವ ನನಗೆ ಗೊತ್ತು! ಅದಕ್ಕೇ ನಾನು ಇವರಲ್ಲಿ ಮೊದಲಿನಿಂದ ವಿಶ್ವಾಸವಿಟ್ಟಿಲ್ಲ" ಎಂದು ಹೇಳಹತ್ತಿದರು.

"ಅದು ನನ್ನ ಭಂಗಾರ; ಇವರೇ ಗಳಿಸಿ ಇಟ್ಟದ್ದು ಬಡ್ಡಿ ವ್ಯವಹಾರದಿಂದ. ನಾನು ಹೇಳುತ್ತೇನೆ. ನಾನು ಇದನ್ನು ಯಾರಿಗೂ ಕೊಡುವದಿಲ್ಲ." ಎಂದು ಸುಬ್ಬಕ್ಕನವರು ಜಾಹೀರುಪಡಿಸಹತ್ತಿದರು.

ಹದಿನೈದು ಇಪ್ಪತ್ತು ದಿನಗಳ ವರೆಗೆ ಇದೇ ರೀತಿಯಾಗಿ ಮನೆಯೆಲ್ಲಿ ಜಗಳ ನಡೆಯಿತು. ಒಬ್ಬರಿಗೊಬ್ಬರು ಹರಿಹಾಯ್ದು ಮಾತನಾಡುತ್ತಿದ್ದರು. ಭಂಗಾರದ ಆಭರಣಗಳಿದ್ದ ಆ ಬೆಳ್ಳಿಯ ಪೆಟ್ಟಿಗೆಯನ್ನು ಲಕ್ಷ್ಮಿಯ ಕಡೆಯಿಂದ ತರಿಸಿ, ಸುಬ್ಬಕ್ಕನವರು ಮತ್ತೆ ತಮ್ಮ ಕೋಣೆಯಲ್ಲಿಟ್ಟುಕೊಂಡರು. ಈ ಜಗಳದ ಸಲುವಾಗಿ ತಮ್ಮ ಸೊಸೆಗೆ ಹೊರಗೆ ಹಾಕಿಕೊಂಡು ಹೋಗಲು ಅವುಗಳನ್ನು ಕೊಡಲಿಲ್ಲ.

ಒಂದು ದಿನ ಗದಗಿಗೆ ನಾರಾಯಣದೇವರ ಗುಡಿಗೆ ಹೋಗಿ, ರಾತ್ರಿ ಬಹಳ ದಣಿದು ಬಂದು ಸುಬ್ಬಕ್ಕನವರು ಮಲಗಿಕೊಂಡರು. ತಮ್ಮ ದಣಿಕೆಯಲ್ಲಿ ಅವರು ತಮ್ಮ ಕಪಾಟಿನ ಕೀಲಿಕೈಯನ್ನು ದೇವರ ಮನೆಯಲ್ಲಿಯೆ ಇಟ್ಟು ಮರೆತುಬಿಟ್ಟರು.

ಇಂಥ ಸಮಯವನ್ನೇ ನಿರೀಕ್ಷಿಸುತ್ತಿದ್ದ ಅಡುಗೆಯ ಕುಂಟ ರಾಜಪ್ಪ, ಆ ಕೀಲಿಕೈಯನ್ನು ತೆಗೆದುಕೊಂಡು ಶೀನಪ್ಪನವರಿಗೂ ಗೋವಿಂದರಾಯರಿಗೂ ತೋರಿಸಿದ. ಅವರಿಬ್ಬರೂ ತಲೆ ಹಾಕಿ ಏನೇನು ಮಾಡಬೇಕು? ಹೇಗೆ ಮಾಡಬೇಕು? ಎಂಬುದನ್ನು ರಾಜಪ್ಪನಿಗೆ ತಿಳಿಸಿ ಹೇಳಿದರು. ಅದರ ಎಲ್ಲ ಸಿದ್ಧತೆ ಆಯಿತು.

ಆ ದಿನ ಸುಬ್ಬಕ್ಕನವರಿಗೆ ಗಾಢವಾದ ನಿದ್ದೆ ಹತ್ತಿತು. ಒಮ್ಮೆಲೆ ನಸಕು ಆಗುವ ಮುನ್ನ ಮುಂಜಾನೆ ನಾಲ್ಕು ಗಂಟೆಗೆ ಅವರಿಗೆ ಎಚ್ಚರವಾಯಿತು. ತಮ್ಮ ರೂಢಿಯಂತೆ ಅವರು ಹೊರಗೆ ಹೋಗಿ ಬರಬೇಕೆಂದು ದೀಪವನ್ನು ನೋಡಿದರು. ದೀಪವು ಆರಿ ಹೋಗಿತ್ತು. ಕತ್ತಲಲ್ಲಿಯೆ ಸಾವರಿಸುತ್ತ ಎದ್ದು, ಸಮೀಪವಿರುವ

ದೇವರ ಮನೆಗೆ ಹೋದರು. ದೇವರ ಮುಂದಿನ ಬತ್ತಿಯು ಮಿಣಿಮಿಣಿಯಾಗಿತ್ತು. ಅದನ್ನು ಸ್ವಲ್ಪ ದೊಡ್ಡದು ಮಾಡಿ, ಆ ಬೆಳಕಿನಲ್ಲಿಯೇ ಅವರು ಬಚ್ಚಲ ಮನೆಯ ಕಡೆಗೆ ಸಾಗಿದರು. ಕೂಡಲೇ ಸರ್‍ರನೆ ಯಾರೋ ಅವರೆದುರು ಓಡಿ ಹೋದಂತಾಯಿತು. ಸುಬ್ಬಕ್ಕನವರು ಚಿಟ್ಟನೇ ಚೀರಿ “ ಕಳ್ಳರು ! ಬರ್‍ರಿ ! ಬರ್‍ರಿ! ” ಎಂದು ಕೂಗಿಕೊಂಡು, ಗಾಬರಿಯಲ್ಲಿ ಮೂರ್ಛಿತರಾಗಿ ಕೆಳಗೆ ಬಿದ್ದರು. “ ರಾಜ್ಯಾ, ಹನಮ್ಯಾ ” ಎಂದು ಜೋರಾಗಿ ಒದರಿದರು.

ಅಡುಗೆಯ ರಾಜಪ್ಪ ಒಂದು ದೀಪವನ್ನು ಹಿಡಿದುಕೊಂಡು ಬಂದನು. “ ಏನಾಯಿತು ಬಾಯರೇ ?—ಏನಾಯಿತು ? ”

“ ಕಳ್ಳರು ರಾಜ್ಯಾ ! ”

ಅಡುಗೆಯ ರಾಜಪ್ಪ ಎಲ್ಲರನ್ನೂ ಕೂಗಿದ. ಮನೆಯ ಜನರು ಎದ್ದು ಗಡಿಬಿಡಿಯಿಂದ ಬಂದರು. ದೀಪಗಳನ್ನು ಹಿಡಿದು ಗಾಬರಿಯಿಂದ ನೋಡಹತ್ತಿದರು. ಹಿಂದಿನ ಬಾಗಿಲುಗಳೆಲ್ಲ ತೆರೆದುಬಿಟ್ಟಿದ್ದವು. ಹಿತ್ತಲ ಬಾಗಿಲವೂ ಸಹ ತೆರೆದ ಹಾಗೆಯೇ ಇತ್ತು. ಅಡುಗೆಯ ಮನೆಯಲ್ಲಿ ಹಲವು ಸಾಮಾನುಗಳು ಅತ್ತಿತ್ತ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದವು. ಆಳುಗಳು ವಾಡೆಯ ಸುತ್ತಲೂ ಓಡಾಡಿ ನೋಡಿದರು. ಯಾರ ಸುಳಿವೂ ಹತ್ತಲಿಲ್ಲ. ‘ ನಾನು ಯಾರನ್ನೂ ನೋಡಿಲ್ಲ’ ಎಂದು ಪಾರೇ ಮಾಡುವವನು ಹೇಳಿದ.

ಮನೆಯ ಜನರು ಏನೇನು ತಮ್ಮ ತಮ್ಮ ಸಾಮಾನುಗಳು ಹೋಗಿವೆಯೆಂದು ಹುಡುಕಹತ್ತಿದರು. ಸುಬ್ಬಕ್ಕನವರಿಗೆ ತಮ್ಮ ಕಪಾಟಿನ ಕೀಲಿಕೈಯೇ ಸಿಗಲಿಲ್ಲ. ಅಲ್ಲಲ್ಲಿ ಹುಡುಕುತ್ತ ತಮ್ಮ ಕೋಣೆಯ ಕಪಾಟಿನ ಕಡೆಗೆ ಹೋದರು. ಕಪಾಟಿನ ಬಾಗಿಲ ಮುಂದೆ ಮಾಡಿದ್ದಿತು. ಒಳಗೆ ನೋಡಿದರು—ಅಲ್ಲಿ ಭಂಗಾರದ ಸಾಮಾನು ಹಾಕಿದ ಬೆಳ್ಳಿಯ ಪೆಟ್ಟಿಗೆಯೇ ಇರಲಿಲ್ಲ.

“ ಘಾತವಾಯಿತು ! ಘಾತವಾಯಿತು ! ” ಸುಬ್ಬಕ್ಕನವರು ಚೀರಿಕೊಂಡರು. ಗೊಳೋ ಎಂದು ಅತ್ತರು !

ಶೀನಪ್ಪ, ಗೋವಿಂದರಾಯ, ವೆಂಕಟೇಶ ಎಲ್ಲರೂ ಅವರಕಡೆಗೆ ಬಂದರು. ಶೀನಪ್ಪ ಹೇಳಿದರು—“ ನನ್ನದೂ ಟೇಬಲ್ಲ ಮೇಲಿಟ್ಟ ಭಂಗಾರದ ಚೇನು ಹೋಗಿಬಿಟ್ಟಿದೆ. ಇನ್ನೂ ಕೆಲವು ಸಾಮಾನು ಇಲ್ಲವೇ ಇಲ್ಲ............ ನಮ್ಮ ಮನೆಯಲ್ಲಿ ಎಂದೂ ಕಳವು ಆಗಿರಲಿಲ್ಲ. ಇದೊಂದು ಹೊಸದಾಗಿ ಆರಂಭ

ವಾಯಿತು. ಇದನ್ನು ಯಾರು ಮಾಡಿರುವರೋ ನೋಡುತ್ತೇನೆ. ಪೋಲಿಸರಿಗೆ ಕಂಪ್ಲೇಟ ಮಾಡಿ ಕಳ್ಳರನ್ನು ಹಿಡಿದು ತರಿಸುತ್ತೇನೆ. ನಮ್ಮ ಮನೆ ಕಳವು ಮಾಡುವ ಧೈರ್ಯ ಈ ಕಳಸಾಪೂರದಲ್ಲಿ ಯಾರಿಗೆ ಇದೆ?"

ಸುಬ್ಬಕ್ಕನವರು ಅತ್ತರು! ಅವರ ಕಣ್ಣುಗಳಿಂದ ಕಂಬನಿ ಬಸಿದು ಹೋದವು. ವಾಡೆಯಲ್ಲಿ ನಡೆಯುವ ಒಂದೊಂದೇ ಘಟನೆಗಳು ಅವರನ್ನು ಅಧೋಲೋಕಕ್ಕೆ ಒಯ್ಯುತ್ತಿದ್ದವು. ಕೃಷ್ಣರಾಯರು ತೀರಿಕೊಂಡ ಮೇಲೆ ಅವರ ಪರಿಸ್ಥಿತಿಯೆ ಹೀಗಾಯಿತು. ತಮ್ಮ ಜೊತೆಗೆ ಜಗಳಾಡಿದ ಶೀನಪ್ಪನವರದೇ ಕಂತ್ರಾಟವಿದು ಇರಬೇಕೆಂದು ಅವರಿಗೆ ಅನಿಸಹತ್ತಿತು. ಆದರೆ ಬಹಿರಂಗವಾಗಿ ಇದನ್ನು ಹೇಳುವುದು ತ್ರಾಸದಾಯಕವಿತ್ತು. ಮನಸ್ಸಿನ ಉದ್ವೇಗದಲ್ಲಿ ಈ ಮಾತನ್ನು ಅಡುಗೆಯ ರಾಜಪ್ಪನ ಮುಂದೆ ಹೇಳಿದರು— "ಗೋವಿಂದರಾಯ ನಂಥವರು ಯಾರೋ ಇಲ್ಲಿ ಓಡಿಹೋದಂತಾಯಿತು" ಎಂದು ನುಡಿದರು. ವಸ್ತುಗಳನ್ನು ಕಳೆದುಕೊಂಡ ಹೆಂಗಸರ ನಾಲಗೆ ಸುಮ್ಮನೆ ನಿಲ್ಲುವದಿಲ್ಲ. ಮಾತ ನಾಡಿ ಬಿಟ್ಟಿತು. ಓಡಿಹೋದವನು ನಿಜವಾಗಿ ಅಡುಗೆಯ ರಾಜಪ್ಪನೇ ಇದ್ದನು. ಅವನಿಗೆ ಎಲ್ಲವೂ ಗೊತ್ತು. ಮುದ್ದಾಂ ಸುಬ್ಬಕ್ಕನವರು ಆಡಿದ ಈ ಮಾತನ್ನು ಗೋವಿಂದರಾಯರ ಎದುರಿಗೆ ಹೇಳಿದನು. ಗೋವಿಂದರಾಯರು ಉರಿದೆದ್ದರು.

ನೇರವಾಗಿ ಸುಬ್ಬಕ್ಕನವರ ಮುಖದ ಮೇಲೆ ತಮ್ಮ ಮಾತುಗಳ ಮಳೆ ಸುರಿಸಿದರು— "ಇದೊಂದು ಅನ್ನುವುದು ನಿಮಗೆ ಕಡಿಮೆಯಾಗಿತ್ತು. ನಮ್ಮ ಮುಖಕ್ಕೆ ಕಪ್ಪು ಬಳೆಯಬೇಕೆಂದಿರುವಿರೇನು? ಏನೋ ಮನೆಯಲ್ಲಿ ಹಿರಿಯರು ಎಂದು ಸುಮ್ಮನೆ ನಿಮಗೆ ಮಾನ ಕೊಟ್ಟದ್ದು ನಮ್ಮದೇ ತಪ್ಪಾಯಿತು. ಕಳ್ಳ ರಂತೆ ಕಳ್ಳರು! ನಮಗೇನು ಕಡಿಮೆಯಾಗಿದೆ?........ ಲಕ್ಷ್ಮಿ ಕಾಲು ಹೊಸೆ ಯುತ್ತ ಬಿದ್ದಿದ್ದಾಳೆ ನಮ್ಮ ಮನೆಯಲ್ಲಿ!........ಇಷ್ಟು ನಮ್ಮ ಮೇಲೆ ಸಂಶಯ ವಿದ್ದರೆ, ಬಿಟ್ಟುಬಿಡಿರಿ. ಎಲ್ಲಿಯಾದರೂ ನಾವು ಬದುಕುತ್ತೇವೆ. ಹುಟ್ಟಿಸಿದ ದೇವರು ಹುಲ್ಲು ಮೇಯಿಸುವದಿಲ್ಲ. ಗದಗಿನಲ್ಲಿ ಬೇರೆ ಮನೆ ಕಟ್ಟಿಸಿ ಕೊಂಡು ಇರುತ್ತೇವೆ. ನೀವೂ ಬೇಡ; ನಿಮ್ಮ ಹಂಗೂ ಬೇಡ." ಇದೇ ಮಾತಿಗೆ ಸೀತಕ್ಕನವರು ದನಿಗೂಡಿಸಿದರು.

ಇದೇ ಗದ್ದಲದಲ್ಲಿ ಹನುಮಂತ ಓಡುತ್ತ ಬಂದನು. "ಅವ್ವಾವರ, ಕೀಲಿ ಕೈ ಸಿಕ್ಕಿತು! ಕೀಲಿಕೈ ಸಿಕ್ಕಿತು! ತಗೊಳ್ರಿ. ನನ್ನ ಹಾಸಿಗೆಯ ಹತ್ತಿರವೇ ಇತ್ತು!

ತಗೊಳ್ರೀ ” ಹನುಮಂತ ಉಬ್ಬಿನಿಂದ ಆ ಕೀಲಿಕೈಯನ್ನು ತಂದುಕೊಟ್ಟ. ಆದರೆ ಉಳಿದವರು ಯಾರೂ ಅವನನ್ನು ಸಂತೋಷದಿಂದ ನೋಡಲಿಲ್ಲ!

ಹನುಮಂತನೇ ಕಳ್ಳನಿರಬೇಕೆಂದು ವಾಡೆಯಲ್ಲಿಯ ಬಹು ಜನ ತಿಳಿದುಕೊಂಡಿತು. ವಸ್ತುಸ್ಥಿತಿಯನ್ನು ತಿಳುಹಿಸಿ ಶೀನಪ್ಪನವರು ಪೋಲೀಸರಿಗೆ ವರದಿ ಕೊಟ್ಟರು. ಮುಂದೆ ಏಳು ದಿನಗಳಲ್ಲಿಯೇ ಫೌಜದಾರರು ಪೋಲೀಸರೊಂದಿಗೆ ಕಳಸಾಪೂರಿಗೆ ಆಗಮಿಸಿದರು. ಅದೂ ಇದೂ ಚೌಕಶಿ ಮಾಡಿದಂತೆ ಮಾಡಿ, ಹನುಮಂತನನ್ನು ಹಿಡಿತರಿಸಿದರು.

ಪಾಪ! ಹನುಮಂತನಿಗೆ ಇಂಥ ಕಾರಭಾರ ಏನೂ ಗೊತ್ತಿರಲಿಲ್ಲ. ಅವನು ಅಳಲಿಕ್ಕೆ ಆರಂಭಮಾಡಿದ. ಆ ಮುದುಕನ ಕಣ್ಣುಗಳಲ್ಲಿ ನೀರು ಬರುವದನ್ನು ನೋಡಿ ಲಕ್ಷ್ಮಿಗೆ ಬಹಳ ಕೆಡುಕೆನಿಸಿತು. “ ಚಿಕ್ಕ ಬಾಯಿಯವರ, ನೀವೇ ಹೇಳ್ರಿ. ನಾನು ಎಂದಾದರೂ ಕಳವು ಮಾಡಿರುವೆನೇನು? ನನಗ ದುಡ್ಡು ಬೇಡ; ದುಗಾಣಿ ಬೇಡ; ಸೇವಾ ಒಂದೇ ಆದರೆ ಸಾಕು. ನಾನು ಯಾರ ಹೆಣಕ್ಕ ಈ ಭಂಗಾರ ಬಡಿಯಲಿ? ”

ಅವನ ಮಾತಿಗೆ ಪೋಲೀಸರು ಸೊಪ್ಪು ಹಾಕಲಿಲ್ಲ. ಲಕ್ಷ್ಮಿಯ ಎದುರಿಗೆ ಅವನು ಮಾತನಾಡುತ್ತ ನಿಂತಿರುವಾಗ ಅವನನ್ನು ದರದರ ಎಳೆದುಕೊಂಡು ಹೋದರು. ಹನುಮಂತ ಚೀರಿದ ಒದರಿದ. ಲಕ್ಷ್ಮಿಗೆ ಅವನನ್ನು ನೋಡಿ ಅತಿ ಸಂಕಟವಾಯಿತು. ಹೆಂಗಸು, ಆ ಪೋಲೀಸರ ಎದುರಿಗೆ ಅವಳು ಏನೂ ಮಾಡಲು ಬರುವಂತಿರಲಿಲ್ಲ.

ಮನೆಯಲ್ಲಿ ಎಲ್ಲರಿಗೂ ಬಹಿರಂಗವಾಗುವಂತೆ ಇದೊಂದು ಭಯಂಕರವಾದ ಘಟನೆ ನಡೆಯುತ್ತಿರುವಾಗ, ಮತ್ತೊಂದು ಸಂಗತಿ ನಾರಾಯಣರಾಯರನ್ನು ಕಾಡಿಸುತ್ತಿತ್ತು. ದಿನಾಲು ಗದುಗಿನ ವಕೀಲರ ಮುಖಾಂತರ ಅವರಿಗೆ ಹೊಲಗಳ ಬಗ್ಗೆ ರಜಿಸ್ಟರ್ಡ ನೋಟೀಸುಗಳು ಬರುತ್ತಿದ್ದವು. ಆ ನೋಟೀಸುಗಳಲ್ಲಿ ಪ್ರತಿಯೊಬ್ಬ ರೈತ ತಾನು ಆನುವಂಶಿಕವಾಗಿ ಅನೇಕ ವರ್ಷಗಳಿಂದ ಹೊಲವನ್ನು ಮಾಡುತ್ತಿದ್ದುದರಿಂದ, ತಾನು ಕಾಯಂ ಕುಳನೆಂದೂ, ಒಡೆಯರಿಗೆ ಹೊಲದಲ್ಲಿ ವಿಶೇಷ ಅಧಿಕಾರವಿಲ್ಲವೆಂದೂ ತಿಳಿಸುತ್ತಿದ್ದ. ವೆಂಕಟೇಶ ಅವರು ಏನಾದರೂ ಹೊಲದ ಕೆಲಸದ ಬಗ್ಗೆ ಅಲ್ಲಿಗೆ ಹೋದರೆ ಯಾವ ರೈತನೂ ಇವರನ್ನು ಒಳ್ಳೆಯ ರೀತಿಯಿಂದ ನೋಡುತ್ತಿದ್ದಿಲ್ಲ ಮತ್ತು ಸತ್ಕರಿಸುತ್ತಿದ್ದಿಲ್ಲ. ಈ

ರೈತರ ವಿರುದ್ಧ ಕೋರ್ಟಿನ ಕಟ್ಟೆಯನ್ನು ಏರುವ ಪ್ರಸಂಗ ಬಂದಿತು. ಇದರಿಂದ ರೈತ ಮತ್ತು ನಾರಾಯಣರಾಯರಲ್ಲಿ ತ್ವೇಷಭಾವನೆ ಮತ್ತಿಷ್ಟು ಹೆಚ್ಚಾಗತೊಡಗಿತು. ಬರುವ ವರುಷ ಲಾವಣಿ ವಸೂಲ ಆಗುವುದೂ ದುಸ್ತರವೆನಿಸುವಂತಾಯಿತು. ಪರಿಸ್ಥಿತಿ ಹೀಗೆಯೇ ಉಳಿದರೆ, ಬಡತನವು ಬರುವುದು ನಿಶ್ಚಿತವೆಂದೆನಿಸಿತು.

ಲಕ್ಷ್ಮಿ ಮತ್ತು ನಾರಾಯಣರಾಯರು ಈ ಶೋಚನೀಯ ಸ್ಥಿತಿಯಲ್ಲಿರುವಾಗ, ಅಕಸ್ಮಾತ್ ಆನಂದರಾಯರು ಅಲ್ಲಿಗೆ ಆಗಮಿಸಿದರು. ಈಗ ಅವರು ಮುದುಕರಾದಂತೆ ತೋರುತ್ತಿದ್ದರು. ಬಿಳಿ ಗಡ್ಡವನ್ನು ಬೆಳೆಸಿ ತಪಸ್ವಿಗಳಂತಾಗಿದ್ದರು. ಮೈಮೇಲೆ ಅಂಗಿಯನ್ನು ತೊಟ್ಟಿರಲಿಲ್ಲ. ಆದರೆ ಒಂದು ಬಟ್ಟೆಯನ್ನು ಹೊದ್ದುಕೊಂಡಿದ್ದರು. ಅವರನ್ನು ಕಾಣುವುದೆಂದರೆ ಲಕ್ಷ್ಮಿಗೆ ದೇವರ ದರ್ಶನವಾದಂತೆ ಆಯಿತು. ಮೈಮೇಲಿನ ಸಂಸಾರದ ಭಾರವೆಲ್ಲ ಒಮ್ಮೆಲೆ ಇಳಿದಂತಾಯಿತು. ಆದರೆ ಅವರ ಜೊತೆಗೆ ಮಾತನಾಡಬೇಕೆಂದರೆ, ಅವರ ಮಾತೇ ಕಡಿಮೆ !

ಅವರು ಕಳಸಾಪೂರಿಗೆ ಏಕೆ ಬಂದರು ? ಎಂದು ಹೋಗುವರು ಎಂಬುವುದನ್ನು ಯಾರ ಮುಂದೆಯೂ ಹೇಳುತ್ತಿರಲಿಲ್ಲ. ಕಳಸಾಪೂರಿಗೆ ಬಂದಾಗ ಮಾತ್ರ, ಪ್ರತಿದಿನ ಸಂಜೆ ಮನೆಯ ಹಿಂದಿನ ದಿಬ್ಬವನ್ನೇರಿ ಆ ಮರದ ಕೆಳಗೆ ಕುಳಿತುಕೊಳ್ಳುತ್ತಿದ್ದರು. ಅದೇ ಸಮಯ ನೋಡಿಕೊಂಡು ಲಕ್ಷ್ಮಿ, ದಿಬ್ಬವನ್ನು ಏರಿ ಹೋದಳು.

ಆನಂದರಾಯರು ಹಸನ್ಮುಖಿಯಾಗಿ ಅಲ್ಲಿ ಕುಳಿತಿದ್ದರು. ಮಳೆಗಾಲವು ಮುಗಿಯುತ್ತ ಬಂದದ್ದರಿಂದ, ನೀರನ್ನುಂಡ ಭೂಮಿಯು ತೃಪ್ತಿಪಡೆದು ಆಹ್ಲಾದದಾಯಿನಿಯಾಗಿದ್ದಳು. ಲಕ್ಷ್ಮಿಯಂತೆಯೆ ಅವಳು ಹಸಿರು ಸೀರೆಯನ್ನು ತೊಟ್ಟುಕೊಂಡಿದ್ದಳು. ಆ ದಿನ ಸಂಜೆ ಆಕಾಶವೂ ನಿರಭ್ರವಾಗಿತ್ತು. ಸಂಜೆಯ ಸೂರ್ಯನ ಕೆಂಪು, ಭೂಮಿಯ ಹಸಿರಿನ ಜೊತೆಗೆ ಮದುವೆಯಾದಂತೆ ಎಲ್ಲೆಡೆಗೂ ಬಣ್ಣಗಳು ರಾರಾಜಿಸುತ್ತಿದ್ದವು. ಆನಂದರಾಯರು ಪ್ರಫುಲ್ಲವದನರಾಗಿ ಗೀತೆಯ ಕೆಲವು ಶ್ಲೋಕಗಳನ್ನು ಪಠಿಸುತ್ತಿದ್ದರು.

ಸೇವಾರ್ಪಣೆಯ ಭಾವನೆಯಿಂದ ಲಕ್ಷ್ಮಿ ಅವರಿಗೆ ಉದ್ದಂಡ ನಮಸ್ಕಾರ ಮಾಡಿದಳು.

" ಇದೇನು ಲಕ್ಷ್ಮಿ, ನಾನು ದೇವರೆಂದು ತಿಳಿದೆ ಏನು? ಏಳಮ್ಮಾ ಏಳು. "

" ನೀವು ನನಗೆ ದೇವರೇ ಸರಿ! " ಲಕ್ಷ್ಮಿ ಎದ್ದು ಅವರ ಪಾದದ ಸಮೀಪ ಕುಳಿತು ಹೇಳಿದಳು " ನೀವು ಇಲ್ಲಿ ಮನೆಗೆ ಬಂದಿರೆಂದರೆ, ನನ್ನ ಮನಸ್ಸು ಎಷ್ಟೋ ಹಗುರವಾಗಿ ಇರುತ್ತದೆ. ಇಲ್ಲಿ ಇರಲು ಧೈರ್ಯವೂ ಇರುತ್ತದೆ! "

" ಲಕ್ಷ್ಮಿ, ನಿನ್ನ ಧೈರ್ಯವೇ ಹೆಚ್ಚಿನದು. ನೀನು ಹೆಂಗಸು! ಇಷ್ಟು ಧೈರ್ಯದಿಂದ ಇಲ್ಲಿ ಬಾಳುವಿ ಎಂದು ನನಗೆ ಅನಿಸಿರಲಿಲ್ಲ. "

" ಯಾವ ಧೈರ್ಯ? ಸುಮ್ಮನೇ ಜೀವ ಹಿಡಿದುಕೊಂಡು ಇದ್ದೇನೆ. "

" ಹಾಗೇನೂ ಅನ್ನಬೇಡ, ಲಕ್ಷ್ಮಿ. ನೀನು ಶೀನಪ್ಪನವರನ್ನು ಹೀಗೆ ಹೊರಗೆ ಹಾಕಿದ್ದು ಸಾಮಾನ್ಯ ಕೆಲಸವಲ್ಲ! ನಾನು ಎಂದಿಗೂ ಯಾರಿಗೂ ಈ ಮಾತನ್ನು ಹೇಳಿಲ್ಲ. ಇಂದೇ ನಿನ್ನೆದುರಿಗೆ ಹೇಳುತ್ತಿದ್ದೇನೆ. ಅವರಿಗೆ ಒಂದು ಶಬ್ದ ವಿರುದ್ಧ ಅನ್ನಲು ನಮ್ಮಲ್ಲಿ ಯಾರೂ ಸಿದ್ಧರಿರಲಿಲ್ಲ. ಅಂಥದು .... "

" ನಾನೇನೋ ವಿರುದ್ಧ ನಿಂತೆ. ಆದರೆ ಈಗ ಅದರ ಪರಿಣಾಮ? ಅಯ್ಯೋ, ಎಲ್ಲಾ ಸರ್ವನಾಶವಾಗುತ್ತಿದೆ. ಹನುಮಂತನಿಗೆ ಜೇಲು ಆಯಿತು! ನಮ್ಮ ಹೊಲ ಕೈಬಿಟ್ಟು ಹೋಗುವ ಪ್ರಸಂಗ ಬಂದಿದೆ. ಇನ್ನೂ ಏನೇನು ಬರುವುದೋ ಯಾರಿಗೆ ಗೊತ್ತು !........ "

" ಲಕ್ಷ್ಮಿ, ನಿಮ್ಮ ಪಾಲಿಗೆ ಇಷ್ಟಾದರೂ ದೊರೆತಿದೆ. ನನಗೆ ಅದೂ ಇಲ್ಲ........ "

" ಏನೆಂದಿರಿ? ನಿಮಗೆ ಏನೂ ಕೊಟ್ಟಿಲ್ಲವೆ? "

" ಅದರ ಮೇಲೆ ನನಗೆ ಏನೂ ಆಶೆಯಿಲ್ಲ ಎನ್ನು. ನಮ್ಮ ಆಸ್ತಿಯಮೇಲೆ ವಾಸನಾಭೂತಗಳು ಓಡಾಡುತ್ತಿವೆ. "

" ನಿಮ್ಮ ಮಾತಿನ ಅರ್ಥ ನನಗಾಗಲಿಲ್ಲ! "

" ಲಕ್ಷ್ಮಿ, ನೀನು ಇನ್ನೂ ಚಿಕ್ಕವಳು. ನಿನಗೆ ಹೇಗೆ ತಿಳಿಯಬೇಕು? ಇಲ್ಲಿಯದೆಲ್ಲ ವಿಚಿತ್ರವಿದೆ. ಯಾರ ಕುತ್ತಿಗೆಯನ್ನು, ಯಾರು, ಯಾವ ವೇಳೆಯಲ್ಲಿ, ಹೇಗೆ ಕೊಯ್ಯುತ್ತಾರೋ ಹೇಳಲು ಬರುವದಿಲ್ಲ. ಇರಲಿ............ಆ ಮಾತೇಕೆ? "

" ಹಾಗೆ ಮಾತನಾಡಬೇಡಿರಿ. ನನ್ನ ಮುಂದೆ ಎಲ್ಲವನ್ನೂ ಹೇಳಿರಿ. ನಾನೂ ಕುತ್ತಿಗೆ ಕೊಯ್ಯುವವಳು ಎಂದು ನೀವು ತಿಳಿದಿರುವಿರೇನು ? "

" ಛೀ, ಛೀ, ಆ ಮಾತನ್ನು ಆಡಬೇಡ. ನಾನು ಇಲ್ಲಿ ಇರದಿದ್ದರೂ, ನಿನ್ನ ಸುದ್ದಿಯನ್ನೆಲ್ಲ ಕೇಳಿ ನನಗೆ ಗೊತ್ತಿದೆ. ನೋಡು ಲಕ್ಷ್ಮಿ, ನಮ್ಮ ವಂಶದ ಪದರಿನಲ್ಲಿ ಬಿದ್ದವಳು ಎಂದು ಈ ಮಾತನ್ನು ನಿನಗೆ ಹೇಳುತ್ತಿದ್ದೇನೆ........ " ಈ ದಿನ ಮಧ್ಯಾಹ್ನ ಗೋವಿಂದ ಮತ್ತು ಶೀನಪ್ಪ ನನ್ನನ್ನು ಕರೆದು ಕೇಳಿದರು—ನನ್ನ ಪಾಲಿನ ಹಣವನ್ನು ಸುಂದರಾಳ ಮದುವೆಯ ಸಲುವಾಗಿ ಖರ್ಚು ಮಾಡಿದ್ದಾರಂತೆ ! ಬೀಳು ಹೊಲಗಳನ್ನು ನನ್ನ ಹೆಸರಿನಲ್ಲಿ ಬರೆದಿದ್ದಾರೆ. ' ನೀವೇನು ಸನ್ಯಾಸಿ ! ಹಿಂದೆ ಇಲ್ಲ ಮುಂದೆ ಇಲ್ಲ ! ಈ ದೊಡ್ಡ ಆಸ್ತಿ ತೆಗೆದುಕೊಂಡು ಏನು ಮಾಡುವಿರಿ ? ' ಎಂದು ಅಪಹಾಸ್ಯದಿಂದ ನಕ್ಕುಬಿಟ್ಟರು. ಒಳ್ಳೆಯದು ಎಂದು ನಾನು ಹಾಗೆಯೆ ಬಂದೆ. "

" ನೀವು ಸುಮ್ಮನೆ ಇದ್ದಿರಾ ? ಅದಕ್ಕೆ ಒಪ್ಪಿಗೆ ಕೊಟ್ಟಿರಾ ? "

" ಹೂಂ ! ಲಕ್ಷ್ಮಿ, ಒಪ್ಪಿಗೆ ಕೊಟ್ಟೆ. ಇವು ವಾಸನಾಭೂತಗಳು !.... ಇವರಿಂದ ದೂರವಿರುವುದೇ ಹಿತ. ಆಸ್ತಿ ಏನು ಬರುತ್ತದೆ ಹೋಗುತ್ತದೆ ! ಮುಖ್ಯ ಮನುಷ್ಯನಿಗೆ ಚಾರಿತ್ರ್ಯ ಬೇಕು. ಲಕ್ಷ್ಮಿ, ಈ ದೊಡ್ಡ ಆಸ್ತಿ ನಮಗೆ ಹೇಗೆ ಬಂದಿತು ಗೊತ್ತಿದೆಯೇನು ನಿನಗೆ ?............ ಎಲ್ಲ ಗುಪ್ತ ಕಾರಸ್ಥಾನ ! ನಮ್ಮ ಪೂರ್ವಜರು ದೇಶದ್ರೋಹಿಗಳು ! ದೇಶಾಭಿಮಾನವಿಲ್ಲದವರು !........ ನಮ್ಮ ರಾಜರ ವಿರುದ್ಧ ಯುದ್ಧ ಮಾಡಿದ ಕಂಪೆನಿ ಸರಕಾರಕ್ಕೆ ಗುಪ್ತವಾಗಿ ಸಹಾಯ ಮಾಡಿದರು. ನಮ್ಮ ರಾಜರ ಸಂರಕ್ಷಣೆಯ ಗುಟ್ಟನ್ನೆಲ್ಲ ತಿಳಿಸಿಕೊಟ್ಟು ಕಂಪೆನಿ ಸರಕಾರದವರು ಗೆಲ್ಲುವಂತೆ ನೆರವಾದರು. ಅದಕ್ಕೇ ನಮ್ಮ ಪೂರ್ವಜರಿಗೆ ಈ ದೊಡ್ಡ ಜಹಗೀರು ದೊರೆಯಿತು............ ಇದಲ್ಲದೆ ಜನರಿಗೆ ಮೋಸಮಾಡಿ, ಪೀಡಿಸಿ, ಹೊಲ ಒತ್ತಿ ಬರೆಯಿಸಿಕೊಂಡು ವಂಚನೆಯಿಂದ ಹಲವು ಆಸ್ತಿಯನ್ನು ಪಡೆದಿದ್ದಾರೆ........ ಲಕ್ಷ್ಮಿ, ಒಳ್ಳೇ ರೀತಿಯಿಂದ ದೊರಕಿಸಿದ ಧನ ಯಾವಾಗಲೂ ಚಿರಂತನವಾಗಿ ಉಳಿಯುತ್ತದೆ. ಇಲ್ಲವಾದರೆ ಅದರ ಪಾಪ ತುಂಬಿ ಬಂದಾಗ ಹಿರಣ್ಯಕಶ್ಯಪನಿಗೆ ತಾನೇ ಮರಣ ಬಂದಂತೆ, ಇವೂ ನಾಶವಾಗಿ ಹೋಗುತ್ತವೆ. ನಮ್ಮ ಪೂರ್ವಜರ ಪಾಪದ ಆಸ್ತಿ ಈಗ ನಾಶವಾಗುತ್ತಿದೆ ಅಷ್ಟೆ. ಇದು ನನಗೆ ಎಂದೋ ಗೊತ್ತಾಯಿತು. ನಮ್ಮ ಮನೆಯಲ್ಲಿ

ಹೊರಗೆ ಪಡಸಾಲೆಯಲ್ಲಿ ಲಕ್ಷ್ಮಿ ಮತ್ತು ಸರಸ್ವತಿ ದೇವಿಯವರ ಎರಡು ದೊಡ್ಡ ಫೋಟೋಗಳು ಜೋಡಿಯಾಗಿ ಕಂಗೊಳಿಸುತ್ತಿದ್ದವು. ಹುಡುಗರು ಆಟವಾಡು ವಾಗ, ಸರಸ್ವತಿಯ ಫೋಟೋಕ್ಕೆ ಕಲ್ಲು ತಾಕಿ ಒಡೆದು ಹೋಯಿತು. ಒಂದು ದಿನ ಅದು ಜೀರ್ಣವಾಗಿ ತಾನೇ ಕೆಳಗೆ ಬಿತ್ತು. ನಮ್ಮ ನಾರಾಯಣನ ತಲೆಯು ಮೇಲೆಯೆ ಬಿತ್ತು. ನಾರಾಯಣ ಚಿಟಚಿಟನೇ ಚೀರಿದ. ಅವನ ತಲೆಯೇ ಕೆಡುತ್ತ ಹೋಯಿತು............... ಆ ಫೋಟೋ ಬಿದ್ದದ್ದು ದೊಡ್ಡ ಅಪ ಶಕುನವೇ ಆಯಿತು !........... ಅಂದಿನಿಂದ ನಮಗೆ ಏನೂ ಏಳಿಗೆಯೇ ಇಲ್ಲ........ "

"ಏನಾಯಿತು ಮುಂದೆ ?" ಮಾತನ್ನು ನಿಲ್ಲಿಸಿದ ಆನಂದರಾಯರಿಗೆ ಲಕ್ಷ್ಮಿ ಕೇಳಿದಳು.

"ಹೂಂ !" ಎಂದು ಆನಂದರಾಯರು ಉಸಿರ್ಗರೆದರು. "ನಾವೇ ಬುದ್ಧಿಯಿಲ್ಲದವರು ಏನು ಮಾಡುವುದು. ಸರಸ್ವತಿಯೇ ನಮಗೆ ಒಲಿಯಲಿಲ್ಲ. ನಮ್ಮ ನಾರಾಯಣನ ಫಜೀತಿಯಂತೂ ಹೇಳಲಾಸಲ್ಲ. ಲಕ್ಷ್ಮಿ, ಈ ದಿನ ನಿನ್ನ ಮುಂದೆ ಹೇಳಬೇಕೆಂದೆನಿಸಿದೆ; ಹೇಳುತ್ತೇನೆ. ಕೆಳಗೆ ಅಲ್ಲಿ ದಿನ್ನಿದೇವರು ಇದೆ. ನಿನಗೆ ಗೊತ್ತಿದೆಯೇನು ? ನೀನು ನೋಡಿದ್ದರೂ ನೋಡಿಃಬಹುದು. ನೀನು ಬಂದು ಆಗಲೇ ಎರಡು ವರ್ಷಗಳಾಗಿ ಹೋದವು. ಇಲ್ಲಿಯ ಎಲ್ಲ ಸ್ಥಳ ನೋಡಿರಲು ಸಾಕು. ಅದು ಮೊದಲು ನಮ್ಮ ಕನ್ನಡ ನಾಡಿನ ಜೈನ ರಾಜರ ಶ್ರೇಷ್ಠ ಯಾತ್ರಾಸ್ಥಳವಾಗಿತ್ತು. ಆದರೆ ಮುಂದೆ ನಮಗೆ ದೇಶಗತಿ ಬಂದಃಮೇಲೆ ಒಂದು ಸಂಗತಿ ನಡೆದು ಹೋಯಿತು. ನಮ್ಮ ಮುತ್ತಜ್ಜನ ಅಪ್ಪ ಒಬ್ಬ ಹೊಲೆಯರವಳನ್ನು ಪ್ರೀತಿಸುತ್ತಿದ್ದನಂತೆ ! ಇದು ಗೊತ್ತಾದ ಕೂಡಲೆ ಅವಳ ಗಂಡ ಕೊಡಲಿಯನ್ನು ಹಿಡಿದುಕೊಂಡು ಬಂದನಂತೆ ! ರಾಯರೊಬ್ಬರೇ ಇಲ್ಲಿ ದಿಬ್ಬದ ಮೇಲೆ ಓಡಾಡುತ್ತಿದ್ದರು. ಅವರನ್ನು ಕಡಿದು, ಅಲ್ಲಿ ಆ ದಿನ್ನಿದೇವರ ಹತ್ತಿರ ಒಗೆದುಹೋದನಂತೆ ! ಅಂದಿನಿಂದ ಎಲ್ಲರೂ ಅಲ್ಲಿಗೆ ಹೋಗುವುದನ್ನು ಬಿಟ್ಟುಬಿಟ್ಟಿದ್ದಾರೆ. ಅವರು ಭೂತವಾಗಿ ಅಲ್ಲಿ ಒಡಾಡುತ್ತಿರುವರಂತೆ ! ಆದರೆ ಮಾಟ ಮಾಡುವ ಜನ, ಭೂತ ಪರೀಕ್ಷೆ ಮಾಡುವ ಜನ ಕೆಲವರು ಅಲ್ಲಿಗೆ ಬರು ತ್ತಾರೆ. ಲಕ್ಷ್ಮಿ, ಹೆದರಿಕೆ ಬರುತ್ತದೇನು ಮತ್ತೆ ? ಹಾಗಿದ್ದರೆ ನಾನು ಮಾತ ನಾಡದಿರುವದೇ ನೆಟ್ಟಗೆ."

" ಇಲ್ಲ. ಹೇಳಿರಿ, ಹೇಳಿರಿ. " ಲಕ್ಷ್ಮಿ ಹೆದರಿಕೆಯಿಂದ ಸ್ವಲ್ಪ ನಡುಗಿದರೂ ಧೈರ್ಯ ತಂದುಕೊಂಡು ಹೇಳಿದಳು.

" ಅಲ್ಲಿ ಮಾಟ ಮಾಡುವ ಜನರಿಂದಲೇ ನಮ್ಮ ನಾರಾಯಣನ ಫಜೀತಿಯಾಗಿರಬೇಕೆಂದು ನನಗೆ ಅನಿಸುತ್ತದೆ. ಅದನ್ನು ಗೋವಿಂದರಾಯನೇ ಮಾಡಿಸಿರಬೇಕು. ಅವನಿಗೆ ನಾರಾಯಣನನ್ನು ಕಂಡರೆ ಆಗುವದಿಲ್ಲ. ಮಲತಮ್ಮನೆಂಬ ಹೊಟ್ಟೇಕಿಚ್ಚು ! ನಾರಾಯಣನಿಗೆ ಹುಚ್ಚು ಹಿಡಿಯುವಂತೆ ಗೋವಿಂದರಾಯನೇ ಮಾಡಿಸಿದ್ದಾನೆಂದು ಈಗಲೂ ಅನಿಸುತ್ತದೆ. ಲಕ್ಷ್ಮೀ, ಇಲ್ಲಿ ನೀನು ಹೊಂದಿಕೊಂಡು ಇದ್ದದ್ದೇ ಹೆಚ್ಚಿನದು !........ ಒಳ್ಳೆಯ ಮನುಷ್ಯ ಇಲ್ಲಿ ಸುಖವಾಗಿ ಬಾಳಲು ಸಾಧ್ಯವಿಲ್ಲ. ಅದಕ್ಕೇ ನಾನು ಈ ಮನೆತನದ ಆಶೆಯನ್ನು ಬಿಟ್ಟುಹೋದದ್ದು. ಮೊದಲು ಹುಚ್ಚೆದ್ದು ನಾಟಕ ಕಂಪನಿಯ ಬೆನ್ನುಹತ್ತಿ ತಿರುಗುತ್ತಿದ್ದೆ. ನನ್ನ ದುಃಖವನ್ನು ಮರೆಯಲು ಕುಡಿದು ಎಲ್ಲಿಯಾದರೂ ಬೀಳುತ್ತಿದ್ದೆ. ಸುಂದರಾಳ ಪರಿಸ್ಥಿತಿ ನೋಡಿ, ಈಗ ಎಲ್ಲವನ್ನೂ ಬಿಟ್ಟುಬಿಟ್ಟಿದ್ದೇನೆ. ಸನ್ಯಾಸಿಯಾಗಿ ಈ ಗೀತೆಯನ್ನು ಓದುವುದರಲ್ಲಿಯೇ ಹೆಚ್ಚು ತೃಪ್ತಿಯಿದೆ. "

" ನೀವೇಕೆ ಮನೆ ಬಿಟ್ಟು ಹೋದಿರಿ.... ? ಏನು ತ್ರಾಸವಾಯಿತು ನಿಮಗೆ ? "

" ಲಕ್ಷ್ಮಿ, ಜಗತ್ತಿನಲ್ಲಿ ಕೆಲವು ಪ್ರಾಣಿಗಳು ಇವೆ. ಅವು ಏನು ಮಾಡುತ್ತವೋ, ಅವುಗಳಿಗೆಲ್ಲ ನಾವು ಸುಮ್ಮನೇ ಇರಬೇಕು, ಅವು ಸ್ವೇಚ್ಛಾಚಾರಿಗಳು !........ ಅವುಗಳ ವಿರುದ್ಧ ಹೋಗಿ ಸ್ವಲ್ಪ ಕೆಣಕಿದರೆ ಸಾಕು ! ನಮ್ಮನ್ನು ನುಂಗಿಯೇ ಬಿಡುತ್ತವೆ. ಅಂಥ ಪ್ರಾಣಿ ನಮ್ಮ ವಾಡೆಯಲ್ಲಿ ಇವೆ. ಲಕ್ಷ್ಮಿ, ನಾವೇ ಅವುಗಳನ್ನು ಸಾಕಿ ಕೊಬ್ಬಿಸಿದ್ದೇವೆ. ಈಗ ಅವೇ ನಮ್ಮನ್ನು ಕೆಳಮೆಟ್ಟಿ ಹಾರಾಡುತ್ತಿವೆ. ಲಕ್ಷ್ಮಿ ನಿನ್ನನ್ನು ನೋಡಿದಾಗ, ಏಕೋ ನಾನು ಒಬ್ಬ ತಂಗಿಯನ್ನು ಕಂಡಂತೆ ಭಾಸವಾಗುತ್ತದೆ. ನನ್ನನ್ನು ಪ್ರೀತಿಸಿದ ಒಬ್ಬ ತಂಗಿಯೂ ಇಲ್ಲ. ಒಬ್ಬ ತಂಗಿ ಸಿಕ್ಕಳಲ್ಲಾ ಎಂದು ಈ ದಿನ ನನಗೆ ಆನಂದವಾಗುತ್ತಿದೆ ! ಯಾರಿಗೂ ಹೇಳದ ಸಂಗತಿ ನಿನಗೆ ಈ ದಿನ ಹೇಳಿಬಿಡುತ್ತೇನೆ. ಬಹಳ ದಿನಗಳಿಂದ ನಾನು ನನ್ನ ಅಂತರಾಳದಲ್ಲಿ ಇದನ್ನು ಮುಚ್ಚಿಟ್ಟುಕೊಂಡಿದ್ದೇನೆ. ನಾನು ಹೇಳುವುದು ಕಟ್ಟುಕಥೆಯಲ್ಲ. ನನ್ನ ಜೀವನದಲ್ಲಿಯೇ ನಡೆದು ಹೋದ

ಸಂಗತಿ !........ ನಾನು ಆಗಲೇ ಹೇಳಿದ ಪ್ರಾಣಿ ಯಾವುದು ಎಂಬುವದು ನಿನಗೆ ಗೊತ್ತಾಗಿರಬೇಕು. ಅವನ ಹೆಸರನ್ನು ಉಚ್ಚರಿಸಲೂ ಸಹ ನನಗೆ ನಾಚಿಕೆಯಾಗುತ್ತಿದೆ......... ನನ್ನ ಜೊತೆಗೆ ಬೇಕಾದ ಹಾಗೆ ಓಡಾಡುತ್ತಿದ್ದ. ಇಬ್ಬರೂ ಕೂಡಿ ಬೇಕಾದ ಹಾಗೆ ನಲಿಯುತ್ತಿದ್ದೆವು........... ಆದರೆ ?......... ಆದರೆ ?.......... "

ಆನಂದರಾಯರ ನಾಲಗೆ ತಡವರಿಸಹತ್ತಿತು. ಆನಂದರಾಯರು ಏನು ಹೇಳಬೇಕೆಂದಿದ್ದಾರೆಂಬುದನ್ನು ಕೇಳಲು ಆತುರಳಾಗಿ ಲಕ್ಷ್ಮಿ ಕುಳಿತಳು.

ಆನಂದರಾಯರು ವಿಚಿತ್ರ ಮುಖ ಮಾಡಿಕೊಂಡು ಹೇಳಿದರು " ಅವನು ನನ್ನ ಹೆಂಡತಿಯ ಜೊತೆಗೂ ಇದ್ದನು. ಏನು ಮಾಟ ಮಾಡಿಸಿದ್ದನೋ ಯಾರಿಗೆ ಗೊತ್ತು ?........ ಈ ಮಾತನ್ನು ಚಿಕ್ಕವಳಾದ ನಿನ್ನೆದುರಿಗೆ ಹೇಳಲು ನನಗೆ ನಾಚಿಕೆಯಾಗುತ್ತಿದೆ ತಂಗೀ. ಸುಂದರಾ ನನ್ನ ಮಗಳೇ ?........... ಅಲ್ಲ....ಅಲ್ಲ....ಎಂದೆನಿಸಿತು........ ಅಯ್ಯೋ !........ ನನ್ನ ತಲೆ ಕೆಡಹತ್ತಿತು .......... ಎರಡನೆಯ ಸಲ ಗರ್ಭಿಣಿಯಿದ್ದ ಇವಳಿಗೆ ಒಂದು ದಿನ ನಾನು ಸಿಟ್ಟುಮಾಡಿ ಈ ಮಾತಿನಲ್ಲಿ ಹೇಳಿದೆ.... ತಂಗೀ, ನಾನು ಏನು ಹೇಳಲಿ ?.... ಆನಂದರಾಯರ ಕಣ್ಣುಗಳಲ್ಲಿ ಎಂದೂ ಇಲ್ಲದ ಕಂಬನಿಗಳು ಹೊರಬೀಳತೊಡಗಿದವು. ಉದ್ವೇಗದಿಂದ ಅವರ ಎದೆ ಹಾರಹತ್ತಿತು. ದುಃಖ, ಕೋಪ ಎರಡೂ ಅವರ ಮಾತುಗಳಲ್ಲಿ ಕೂಡಿಕೊಂಡಿದ್ದವು.

" ತಂಗೀ, ನಾನು ಏನು ಹೇಳಲಿ ? ಈ ಪ್ರಾಣಿ ಇವಳಿಗೆ ವಿಷ ಕುಡಿಸಿ ಬಿಟ್ಟನು ! ಬೆಳಗಿನಲ್ಲಿ ನಾನು ಅವಳ ಹೆಣವನ್ನು ನೋಡಿದೆ........... ಅಯ್ಯೋ ಅವಳು ನನ್ನನ್ನು ಬಿಟ್ಟುಹೋದಳು ! ನನ್ನನ್ನು ಬಿಟ್ಟು ಹೋದಳು !........ ಅಲ್ಲ, ಲಕ್ಷ್ಮಿ, ತಂಗೀ........ಮುಂದೆ ನಾನು ಇಲ್ಲಿ ಇರುವುದೇ ಅಸಾಧ್ಯವಾಯಿತು ! ಅಯ್ಯೋ ! " ಆನಂದರಾಯರು ತಮ್ಮ ತಲೆಯನ್ನು ಬಿಗಿಯಾಗಿ ಹಿಡಿದುಕೊಂಡರು. " ನಾನೇ ವಿಷ ಹಾಕಿದೆ ! ನನ್ನ ಮೇಲೆ ಆರೋಪ ! ಎಲ್ಲಾ ಆ ಪ್ರಾಣಿ ಮಾಡಿದ್ದು .... ! ನಾನು ಆರೋಪಿ....ಅಯ್ಯೋ ! "

ಮಾತನಾಡುತ್ತ ಆಡುತ್ತ ಆನಂದರಾಯರು ಧೊಪ್ಪನೆ ಲಕ್ಷ್ಮಿಯ ಕಾಲುಬಳಿ ಬಿದ್ದುಬಿಟ್ಟರು. ಲಕ್ಷ್ಮಿ ಗಾಬರಿಯಾಗಿ ಅವರ ಕಡೆಗೆ ನೋಡಹತ್ತಿದಳು.

ಚಂದಿರನು ಎಂದಿನಂತೆ ಮೇಲೆ ಬಂದು ನಗುತ್ತಿದ್ದನು! ಹುಣಸೆಯ ಮರ ಗಟ್ಟಿಯಾಗಿ ಅದೇ ದಿನ್ನಿಯ ಮೇಲೆ ನಿಂತುಕೊಂಡಿತ್ತು! ಸುತ್ತಲಿನ ಸೃಷ್ಟಿ ಚಿರಂತನವಾದ ಶಾಂತಿಯ ಪರದೆಯನ್ನು ಹೊದ್ದುಕೊಂಡು ಮಲಗಿತ್ತು

## ೨೧

ಇನ್ನು ಮೂರು ದಿನಗಳಲ್ಲಿಯೆ ನವರಾತ್ರಿ ಆರಂಭ. ನವರಾತ್ರಿ ಹಬ್ಬ ವೆಂದರೆ ಕಳಸಾಪೂರ ಮತ್ತು ಸುತ್ತುಮುತ್ತಲಿನ ಹಳ್ಳಿಯ ಜನರಿಗೆ ಬಹಳ ಸಂಭ್ರಮ. ವೆಂಕಟೇಶ ದೇವರ ಗುಡಿಯಲ್ಲಿ ವಿಜೃಂಭಣೆಯಿಂದ ಪೂಜೆ, ಪುನ ಸ್ಕಾರಗಳು ನಡೆಯುತ್ತಿದ್ದವು. ದಾನ, ಧರ್ಮಾದಿಗಳು ಆಗುತ್ತಿದ್ದವು. ಪುರಾಣ ಪುಣ್ಯ ಕಥೆಗಳ ಏರ್ಪಾಟು ಇರುತ್ತಿತ್ತು! ಎಲ್ಲವನ್ನೂ ಸುಗಮವಾಗಿ ಸಾಗಿಸಿ ಕೊಂಡು ಹೋಗುವವರು ಜಾಗಿರದಾರರು. ಅವರ ನೇತೃತ್ವದಲ್ಲಿ ಎಲ್ಲ ಕಾರ್ಯ ಕ್ರಮಗಳು ಸಾಗುತ್ತಿದ್ದವು.

ಹಿಂದಿನ ವರ್ಷ ಕೃಷ್ಣರಾಯರು ತಿರುಪತಿಗೆ ಹೋಗಿಬಿಟ್ಟಿದ್ದರಿಂದ ನಿರ್ವಾಹವಿಲ್ಲದೆ ಗೋವಿಂದರಾಯರು ಎಲ್ಲ ಕಾರ್ಯಕ್ರಮ ನಡೆಯಿಸಬೇಕೆಂದ ಸಾರಲಾಗಿತ್ತು. ಈ ವರ್ಷವಂತೂ ಅವರೇ ಬಾಧ್ಯಸ್ಥರಿದ್ದರು. ಆದ್ದರಿಂದ ಗೋವಿಂದರಾಯರು ಅತ್ಯಾನಂದದಿಂದ ಎಲ್ಲ ತಯಾರಿಯನ್ನು ನಡೆಸಿದ್ದರು. ಸುಬ್ಬಕ್ಕನವರೂ ಈ ಸಂಸಾರದಿಂದ ನಿವೃತ್ತರಾದ್ದರಿಂದ, ಸೀತಕ್ಕನವರೇ ಎಲ್ಲ ತಿನಸಿನ ಸಿದ್ಧತೆ ಮಾಡುತ್ತಿದ್ದರು.

ಲಕ್ಷ್ಮಿ ವೈಯಕ್ತಿಕವಾಗಿ ಹಬ್ಬವನ್ನು ಆಚರಿಸಬೇಕೆಂದು ಮಾಡಿಕೊಂ ಡಳು. ಸುಬ್ಬಕ್ಕನವರು ಅವಳಲ್ಲಿಯೇ ಊಟ ಮಾಡುತ್ತಿದ್ದರು. ಏನೇ ಆದರೂ ಹಬ್ಬವು ಹಬ್ಬವೇ! ತನ್ನ ಮನೆತನಕ್ಕೆ ತಕ್ಕಂತೆ, ಸುಬ್ಬಕ್ಕನವರಿಗೆ ತೃಪ್ತಿಯಾಗುವಂತೆ ಸಾಮಾನುಗಳನ್ನು ಮಾಡಿ ಇಡಬೇಕು. ಇದಕ್ಕಾಗಿ ದಿನಾಲು ಅವಳು ಬೇರೆ ಬೇರೆ ಸಾಮಾನುಗಳ ಸಂಗ್ರಹ ಮಾಡುತ್ತಿದ್ದಳು. ವೆಂಕ ಟೇಶ, ನಾರಾಯಣರಾಯರೂ ಅಲ್ಲಲ್ಲಿ ಓಡಾಡುತ್ತಿದ್ದರು. ಈ ಓಡಾಟದಲ್ಲಿ ನಾರಾಯಣರಾಯರು ಅಸ್ವಸ್ಥವಾಗಿ ಮಲಗಿಕೊಂಡರು.

ಮುದುಕಪ್ಪ ಕೆಲವು ಬೆಲ್ಲದ ಪೆಂಟೆಗಳನ್ನು ಮತ್ತು ಗೋದಿ ಚೀಲಗಳನ್ನು ಕೊಡುವದಾಗಿ ಹೇಳಿದ್ದ. ನಾರಾಯಣರಾಯರಿಗೆ ಮೈಯಲ್ಲಿ ನೆಟ್ಟಗಿಲ್ಲದ್ದರಿಂದ, ವೆಂಕಟೇಶ ಒಬ್ಬರೇ ಹೊರಡುವವರಿದ್ದರು. ಲಕ್ಷ್ಮಿಗೆ ಏನೋ ತೋಟಕ್ಕೆ ಹೋಗಬೇಕೆಂಬ ಬಯಕೆಯಾಯಿತು. ಗರ್ಭಿಣಿಯಿರುವಾಗ, ಅವರ ಮನಸ್ಸಿನ ವಿರುದ್ಧ ಹೋಗಬಾರದಂತೆ !........ ಸುಬ್ಬಕ್ಕನವರಿಗೆ ಹೇಳಿ, ಚಕ್ಕಡಿಯಲ್ಲಿ ತೋಟಕ್ಕೆ ಹೋದಳು.

ಸಂಜೆ ಆರು ಗಂಟೆಯಾದರೂ ಮನೆಗೆ ತಿರುಗಿ ಬರಲಿಲ್ಲ. ನಾರಾಯಣರಾಯರು ಹಾಸುಗೆಯಲ್ಲಿ ಮಲಗಿ ಏನೋ ಲೆಕ್ಕ ಹಾಕಹತ್ತಿದರು. ಅವರು ಚಟಕ್ಕನೇ ಎದ್ದು, ಶರ್ಟ ಧರಿಸಿಕೊಂಡು ತೋಟದ ಕಡೆಗೆ ಹೊರಟರು.

ಅವರು ದಿನ್ನೆಯ ಕೆಳಗೆ ಅಡ್ಡ ದಾರಿ ಹಿಡಿದು ಸಾಗಿದ್ದರು. ಯಾರೋ ಒಮ್ಮೆಲೆ ಚಪ್ಪಾಳೆ ತಟ್ಟಿದರು. ನಾರಾಯಣರಾಯರು ಹೊರಳಿ ನೋಡಿದರು. ಮಬ್ಬುಗತ್ತಲೆಯಲ್ಲಿ ಅವರು ಯಾರು ಎಂಬುದು ಚೆನ್ನಾಗಿ ಗೊತ್ತಾಗಲಿಲ್ಲ.

ಆ ವ್ಯಕ್ತಿ ಮತ್ತೊಮ್ಮೆ ಚಪ್ಪಾಳೆ ತಟ್ಟಿತು. " ವೆಂಕಟೇಶ ! ಇಲ್ಲೆ ! ಇಲ್ಲೆ !" ಎಂದು ಕೂಗಿತು.

ದಿನ್ನೆಯ ದೇವರ ಹತ್ತಿರ ನಿಂತು ಯಾರು ಒದರುತ್ತಿರಬಹುದು ! ನಾರಾಯಣರಾಯರಿಗೆ ಗೊತ್ತಾಗಲೇ ಇಲ್ಲ ! ಎರಡು ಮೂರು ಸಲ ಹೊರಳಿ ಹೊರಳಿ ನೋಡಿದರು.

ಮತ್ತೆ ಚಪ್ಪಾಳೆ ! ಮತ್ತೆ ಅದೇ ಧ್ವನಿ !!

ನಾರಾಯಣರಾಯರಿಗೆ ಅನಿಸಿತು—ಅವರು ಇಲ್ಲಿಯೇ ಇರಬೇಕೇನೋ ಎಂದು. ಕೆಳಗಿಳಿದು ದಿನ್ನೆಯ ದೇವರ ಕಡೆಗೆ ಸಾಗಿದರು.

ಕಲ್ಲು ಮರೆಯಲ್ಲಿ ಹೆಂಗುಸೊಬ್ಬಳು ನಿಂತ ಹಾಗೆ ಕಾಣಿಸಿತು. ಲಕ್ಷ್ಮಿ ಅಲ್ಲಿ ಒಬ್ಬಳೇ ಏಕೆ ನಿಂತಿರಬೇಕು ? ನಾರಾಯಣರಾಯರಿಗೆ ಏನೋ ಸಂಶಯ ಬಂದಿತು. ಧೈರ್ಯದಿಂದ ಮುಂದೆ ಸಾಗಿ ಬಂದರು.

ಆ ಹೆಂಗಸು ಲಕ್ಷ್ಮಿಯಾಗಿರಲಿಲ್ಲ. ಆದರೆ ಮುದುಕಪ್ಪನ ಹೆಂಡತಿ ಜೋಗಿತಿಯಾಗಿದ್ದಳು. ಹಿಂದಕ್ಕೆ ಇವಳನ್ನು ನೋಡಿದ ಕೂಡಲೇ ನಾರಾಯಣರಾಯರು ಹೆದರುತ್ತಿದ್ದರು. ಆಗ ಅವರೇನೂ ಧೈರ್ಯಗುಂದಲಿಲ್ಲ; ಅಂಜಲಿಲ್ಲ. " ವೆಂಕಟೇಶ ಎಲ್ಲಿ ಇದ್ದಾರೆ ? " ಎಂದು ತಮ್ಮ ಕಣ್ಣುಗಳನ್ನು ಅಗಲವಾಗಿ

ತೆರೆದು ಕೇಳಿದರು.

ಅವರ ಕಣ್ಣು ನೋಡಿ, ಜೋಗಿತಿಗೆ ಸ್ವಲ್ಪ ಅಂಜಿಕೆ ಬಂದಿತು. ಅವಳು ಅಲ್ಲಿ ವೆಂಕಟೇಶ ಅವರ ದಾರಿಯನ್ನು ಕಾಯುತ್ತಿದ್ದಳು. ತೋಟಕ್ಕೆ ಬಂದಾಗ ಜೋಗಿತಿ ಅವರನ್ನು ಗುರುತು ಮಾಡಿಕೊಂಡಿದ್ದಳು. ಪುರಾತನ ಕಾಲದ ಹಲವು ಮೂರ್ತಿಗಳ ಬಗ್ಗೆ ಚರ್ಚೆ ನಡೆಯಿಸಿದಾಗ, ಈ ದಿಗಂಬರ ಮೂರ್ತಿಯ ಹಲವು ವಿಚಿತ್ರಗಳನ್ನು ಅವಳು ಹೇಳಿದ್ದಳು. ಮತ್ತು ಅದನ್ನು ತಾನು ತೋರಿಸುವದಾಗಿಯೂ, ತಾನು ಅದರ ಪೂಜಾರಿಣಿ ಬಹಳ ದಿವಸಗಳಿಂದ ಇರುವದಾಗಿಯೂ ತಿಳಿಸಿದ್ದಳು. ಆದ್ದರಿಂದ ವೆಂಕಟೇಶ ಆ ವಿಚಿತ್ರ ತಿಳಿದುಕೊಳ್ಳುವುದರ ಸಲುವಾಗಿ ಅಲ್ಲಿಗೆ ಆ ದಿನ ಸಂಜೆ ಬರುವದಾಗಿ ಅವಳಿಗೆ ವಚನ ಕೊಟ್ಟಿದ್ದರು. ಅವರು ಬಂದಾಗ, ಗೋವಿಂದರಾಯರು ಹೇಳಿದ ಹಾಗೆ ವೆಂಕಟೇಶ ಅವರಿಗೆ ಮಾಟ ಮಾಡಿಸಬೇಕೆಂದು ಗೊತ್ತು ಮಾಡಿಕೊಂಡಿದ್ದಳು. ವೆಂಕಟೇಶ ತಮ್ಮ ಹೆಂಡತಿಯ ಮೇಲಿನ ಮನಸ್ಸು ತೆಗೆದು, ಲಕ್ಷ್ಮಿಯನ್ನೇ ಪ್ರೀತಿಸುವಂತಾಗಬೇಕು. ಅದಕ್ಕೆ ಅವಳು ಮಾಟದ ತಾಯಿತವನ್ನು ತಯಾರಿಸಿ ಇಟ್ಟಿದ್ದಳು.

ಆದರೆ ವೆಂಕಟೇಶ ಅವರ ಬದಲು, ನಾರಾಯಣರಾಯರು ಅಲ್ಲಿಗೆ ಬಂದುಬಿಟ್ಟರು! ನಾರಾಯಣರಾಯರಿಗೆ ಹಿಂದಕ್ಕೆ ತ್ರಾಸ ಕೊಟ್ಟವಳು ಇದೇ ಜೋಗಿತಿ! ಇವಳನ್ನು ಕಂಡಕೂಡಲೇ ಅವರು ಚಿಟ್ಟನೇ ಚೀರಿ ಓಡಿಹೋಗುತ್ತಿದ್ದರು. ಈಗ ಮಾತ್ರ ಧೈರ್ಯದಿಂದ ಅವಳೆದುರಿಗೆ ನಿಂತು, ಕಣ್ಣು ತೆರೆದು ನೋಡಹತ್ತಿವರು. "ವೆಂಕಟೇಶ ಎಲ್ಲಿ ಇದ್ದಾರೆ ಹೇಳು" ಎಂದು ಮತ್ತೊಮ್ಮೆ ಗದ್ದರಿಸಿದರು.

ಕರಿಮುಖದಲ್ಲಿ ಆ ಕಾಂತಿಯುಕ್ತ ಕಣ್ಣುಗಳನ್ನು ವಿಶಾಲವಾಗಿ ತೆರೆದು, ತುಟಿ ಕಚ್ಚುತ್ತ ನಿಂತ ನಾರಾಯಣರಾಯರನ್ನು ನೋಡಿ, ಜೋಗಿತಿಯ ಎದೆ ಅಂಜಿಕೆಯಿಂದ ಬಡಿದುಕೊಂಡಿತು. ಧೈರ್ಯ ತಂದುಕೊಂಡು, ನಾರಾಯಣರಾಯರನ್ನು ಹೆದರಿಸಿ ಓಡಿಸುವ ಉಪಾಯ ಕೈಕೊಂಡಳು. ಸುಮ್ಮಸುಮ್ಮನೆ ದೆವ್ವನ ಹಾಗೆ ಕುಣಿಯುವುದು; 'ಆಡರ್' ಎಂದು ಒದರುವುದು; ಹಲ್ಲು ಕಿರಿಯುವುದು; ಕೂದಲು ಹರವಿಕೊಂಡು ಜಿಗಿಯುವುದು ಮಾಡಹತ್ತಿದಳು.

"ಅಯ್ಯೋ! ನಿನ್ನ ಆಟವೆಲ್ಲ ನಾನು ಬಲ್ಲೆ!............ ನಿನಗೆ ಬೆನ್ನಮೇಲೆ ಮುಚ್ಚಿ ಏಟು ಬೀಳದ ಹೊರತು ಸಮಾಧಾನವಿಲ್ಲ. ಬಾ" ಎಂದು ಅವಳ ಕೈ

ಗಟ್ಟಿಯಾಗಿ ಹಿಡಿದು, ಕಾಲಲ್ಲಿಯ ಚಪ್ಪಲಿ ತೆಗೆದು ಹೊಡೆಯಹತ್ತಿದನು. ಆವೇಶದಿಂದ ಜೋರಾಗಿ ಹೊಡೆಯಹತ್ತಿದನು. ಜೋಗಿತಿಯು ಕಾಲುಕಾಲು ಬಿದ್ದು ನಮಸ್ಕಾರ ಮಾಡಹತ್ತಿದಳು. "ಹೀಗೆ ಮಾಡಿ ಎಷ್ಟು ಮಂದಿಯನ್ನು ಮೋಸ ಮಾಡಿರುವಿ? ಬಾ, ನಿನ್ನ ಜೀವವನ್ನೆ ತೆಗೆದುಕೊಳ್ಳುತ್ತೇನೆ!"

ಸಿಟ್ಟಿನಿಂದ ಅವಳನ್ನು ದರದರ ಎಳೆದುಕೊಳ್ಳುತ್ತ ಹೋಗಿ ದಿನ್ನೆದೇವರ ಮುಂದೆ ಒಗೆದನು. ಅವಳ ಮೈ ಹಣ್ಣಾಗುವಂತೆ ಅವಳನ್ನು ಬಡೆದು ಹೊರಗೆ ಬಂದನು. ಆ ಅಂಧಃಕಾರದಲ್ಲಿ ಕತ್ತಲೆಯನ್ನು ತುಳಿಯುತ್ತ ನಾರಾಯಣರಾಯರು ಮನೆಗೆ ಹೊರಳಿ ಬಂದುಬಿಟ್ಟರು.

ತಮ್ಮ ಹಾಸುಗೆಯ ಮೇಲೆ ಬಂದು ಬಿದ್ದಾಗಲೇ ಅವರ ಆವೇಶ ಇಳಿಯಿತು. ಎಚ್ಚತ್ತು ಅವರು ಲಕ್ಷ್ಮಿಯನ್ನು ನೋಡಿದರು. ಲಕ್ಷ್ಮಿಯು ಅಲ್ಲಿ ಇರಲಿಲ್ಲ. ಕೆಳಗೆ ಹೋಗಿ ಸುಬ್ಬಕ್ಕನವರನ್ನು ಕೇಳಿದರು. ಅವರಿಗೂ ಗೊತ್ತಿರಲಿಲ್ಲ. ರಾತ್ರಿ ೮ ಗಂಟೆ ಬಾರಿಸಿತು. ಇನ್ನೂ ಏಕೆ ಬರಲಿಲ್ಲವೋ ಎಂದು ಗಾಬರಿಯಾದರು. ಸುಬ್ಬಕ್ಕನವರು ಆಳುಮಗನನ್ನು ಕರೆದು ತೋಟಕ್ಕೆಹೋಗಿ ನೋಡಿಕೊಂಡು ಬರಲು ಹೇಳಿದರು. ಜೊತೆಗೆ ಒಂದಿಬ್ಬರನ್ನು ಕರೆದುಕೊಂಡು ದೀಪ ಮತ್ತು ಬಡಿಗೆ ಮುಂತಾದವುಗಳನ್ನು ತೆಗೆದುಕೊಂಡು ಹೋಗಲು ಹೇಳಿದರು. ಅಲ್ಲಿ ಇರದಿದ್ದರೆ ಮುದುಕಪ್ಪನಿಗೆ ಕೇಳಿ ಬೇರೆ ಕಡೆಗೆ ಹುಡುಕಲೂ ಹೇಳಿದರು. ಮಿಣಿಮಿಣಿ ದೀಪದ ಎದುರಿಗೆ ಚಿಂತಿಸುತ್ತ ಸುಬ್ಬಕ್ಕ ಮತ್ತು ನಾರಾಯಣರಾಯರು ಕುಳಿತುಕೊಂಡರು.

ಅಷ್ಟರಲ್ಲಿ ಒಬ್ಬ ಆಳು ಓಡಿಬಂದು ಹೇಳಿದ "ಅವ್ವಾಅವರ ಇಲ್ಲಿ ಸಣ್ಣಬಾಯರು ಬಂದಾರಂತ!"

"ಎಲ್ಲಿ ಇದ್ದಾರೋ?" ಸುಬ್ಬಕ್ಕನವರು ಕೇಳಿದರು.

"ಇಲ್ಲೆ ಹೊರಗಿನ ಶಾಂತಾಬಾಯರ ಮನಿಯೊಳಗ!............ ಇನ್ನೂ ಒಳಗ ಬಂದೇ ಇಲ್ಲೇನ್ರಿ?...."

"ಪಾರಾದೆ!" ಸುಬ್ಬಕ್ಕನವರು ನಾರಾಯಣರಾಯರನ್ನು ಕರೆದುಕೊಂಡು ವೆಂಕಟೇಶ ಅವರು ಇರುವ ಭಾಗಕ್ಕೆ ಹೋದರು.

ಹೊರಗಿನ ಕೋಣೆಯಲ್ಲಿ ಶಾಂತಾ ಸಣ್ಣಮುಖ ಮಾಡಿಕೊಂಡು ಕುಳಿತುಕೊಂಡಿದ್ದಳು. ಅವಳ ಹತ್ತಿರ ೫-೬ ಬೆಲ್ಲದ ಪೆಂಟಿಗಳೂ ಮತ್ತು ಗೋದಿಯ

ಚೀಲಗಳೂ ಬಿದ್ದಿದ್ದವು. ಸುಬ್ಬಕ್ಕನವರು ಹೋದಕೂಡಲೇ ಅವಳು ಸೆರಗಿನಿಂದ ಮುಖ ಮುಚ್ಚಿಕೊಂಡು ಅಳಹತ್ತಿದಳು. "ನಾನು ಇವರಿಗೆ ಇಷ್ಟು ಸವಲತ್ತು ಕೊಟ್ಟದ್ದು ನನ್ನದೇ ತಪ್ಪಾಯಿತು! ಹೌದು, ನಾನು ಕುರೂಪಿ; ಅವಳು ಸುರೂಪಿ!.......... ನನಗೆ ಮೊದಲು ಈ ನಾಟಕ ಗೊತ್ತಾಗಲಿಲ್ಲ. ನಾನೇನು ದುಡ್ಡಿನ ಆಶೆ ಮಾಡಿ ಬರಲಿಲ್ಲ. ಇವಳು ಹೀಗೆ ಇರುವಳೆಂದು ನನಗೆ ಮೊದಲು ಗೊತ್ತಾಗಲಿಲ್ಲ! ಎಲ್ಲಾ ನನ್ನದೇ ತಪ್ಪು!"

"ನಾನು ಹೇಳುತ್ತೇನೆ, ಶಾಂತಾಬಾಯಿ ನಿನಗೇನಾಗಿದೆ?" ಹೇಳಿಯಾದರೂ ಹೇಳು."

"ನನಗೇನು ಕೇಳಬೇಡಿರಿ, ನೀವೇ ಹೋಗಿ ನೋಡಿರಿ. ಒಳಗಿನ ಕೋಣೆಯಲ್ಲಿ ಏನೇನು ಆಟ ನಡೆದಿದೆ ನೀವೇ ನೋಡಿರಿ. ಬಂದು ಅರ್ಧ ತಾಸಾಯಿತು. ನನ್ನ ಜೊತೆಗೆ ಮಾತೇ ಇಲ್ಲ."

ಸುಬ್ಬಕ್ಕನವರು ಸಾವಧಾನವಾಗಿ ಒಳಗಿನ ಕೋಣೆಗೆ ಹೋದರು. ಅಲ್ಲಿಯೆ ಬಾಗಿಲ ಇರುಕಿನಲ್ಲಿ ಹಣಿಕಿಕ್ಕಿ ನೋಡಿದರು. ಲಕ್ಷ್ಮಿಗೆ ಎದೆಯಮೇಲಿನ ಸೆರಗಿನ ಎಚ್ಚರಿಕೆ ಇರಲಿಲ್ಲ. ವೆಂಕಟೇಶ ಅವಳನ್ನು ಮೋಹಿಸಲು ಯತ್ನಿಸುತ್ತಿದ್ದನು. ಇಬ್ಬರೂ ಪ್ರೇಮದಾಟದಲ್ಲಿಯೆ ಲೀನರಾಗಿದ್ದರು.

"ಥೂ! ಥೂ!" ಎಂದು ಸುಬ್ಬಕ್ಕನವರು ಕಣ್ಣುಮುಚ್ಚಿಕೊಂಡು ಹೊರಗೆ ಬಂದರು. "ಇದೇನು ಭಯಂಕರ?........ ಶಾಂತಾಬಾಯಿ, ಸುಮ್ಮನಾಗು. ಎಲ್ಲ ಕಡೆಗೂ ಈಗಲೇ ಹೇಳಬೇಡ. ನಾನೂ ಅವಳನ್ನು ಕೇಳಿಕೊಳ್ಳುತ್ತೇನೆ. ನಾನು ಹೇಳುತ್ತೇನೆ; ನೀನು ಸುಮ್ಮನಾಗು!"

ಸುಬ್ಬಕ್ಕನವರು ಶಾಂತಾಳಿಗೆ ಸಮಾಧಾನ ಮಾಡಿ, ತಾವೂ ಅಲ್ಲಿಯೆ ಕೆಲ ಹೊತ್ತು ಕುಳಿತರು. ವಾಡೆಯಲ್ಲಿ ಈ ಮಾತು ಬಬ್ಬಾಟವಾಗಬಾರದೆಂಬುದೇ ಸುಬ್ಬಕ್ಕನವರ ಉದ್ದೇಶ. ಇದೂ ಒಂದು ದೊಡ್ಡ ಅನಾಹುತವಾದರೆ? ಅದಕ್ಕೆ ಅವರು ಅಲ್ಲಿ ಕುಳಿತುಕೊಂಡು ಸ್ವಲ್ಪ ಯೋಚಿಸಿದರು. ತರುವಾಯ ನಾರಾಯಣರಾಯರನ್ನು ಕೂಡಿಕೊಂಡು, ಒಳಗಿನ ಕೋಣೆಗೆ ಹೋಗಿ ಜುಲುಮೆಯಿಂದ ಲಕ್ಷ್ಮಿಯನ್ನು ಕರೆದುಕೊಂಡು ಬಂದರು. ಆಗ ವಾಡೆಯಲ್ಲಿ ಎಷ್ಟೋ ಸ್ತಬ್ಧತೆಯಿತ್ತು. ಲಕ್ಷ್ಮಿಯನ್ನು ಕೈಹಿಡಿದು ಕರೆದುಕೊಂಡು ಹೋಗಿ ಯಾರಿಗೂ ಗೊತ್ತಾಗದಂತೆ ಅವಳ ಕೋಣೆಯಲ್ಲಿ ಮಲಗಿಸಿದರು.

ಲಕ್ಷ್ಮಿಯನ್ನು ಕರೆದುಕೊಂಡು ಹೋಗುವಾಗ ನಾರಾಯಣರಾಯರಿಗೆ ಲಕ್ಷ್ಮಿಯ ಬಾಯಿಂದ ಒಂದು ರೀತಿ ವಾಸನೆ ಬರುತ್ತಿತ್ತು! ಅದನ್ನು ನಾರಾಯ ಣರಾಯರು ಬೇಗನೇ ಗುರುತಿಸಿದರು.

" ಅವ್ವ! ಅವ್ವ! " ನಾರಾಯಣರಾಯರು ಕೂಗಿದರು. " ಇದೆಲ್ಲ ಆ ಮುದುಕಪ್ಪನ ಆಟವಿರಬೇಕು. ಒಂದು ದೀಪವನ್ನು ತೆಗೆದುಕೊಂಡು ಹೋಗಿ ಈಗಲೇ ಅವನನ್ನು ಬಡಿದು ಬರುತ್ತೇನೆ."

" ನಾರಾಯಣ ಹುಚ್ಚನಂತೆ ಮಾಡಬೇಡ. ನಾನು ಹೇಳುತ್ತೇನೆ. ಏನಾಗಿದೆ ಹೇಳು. "

" ಅವ್ವ, ಇವರಿಗೆ ಮೋಸಮಾಡಿ ಕುಡಿಯಲು ಕೊಟ್ಟಿದ್ದಾರೆ. ಆ ಮುದು ಕಪ್ಪನೇ ಕೊಟ್ಟಿರಬೇಕು. "

ನಾರಾಯಣರಾಯರು ಹೇಳಿದ ಮಾತುಗಳು ನಿಜವಿದ್ದವು. ಮಸಾಲಿ ಹಾಲು ಎಂದು ಹೇಳಿ ಒಂದು ರೀತಿಯ ' ಬಾಂಗ ' ಮಾಡಿ ಕೊಟ್ಟಿದ್ದನು. ಅದನ್ನು ಕುಡಿದರೆ ಜನರಲ್ಲಿ ಒಂದು ರೀತಿಯ ಮಬ್ಬು ಬರುತ್ತಿತ್ತು. ಮತ್ತು ಜನರು ಹುಚ್ಚರಂತೆ ವರ್ತಿಸುತ್ತಿದ್ದರು.

ಇದನ್ನೆಲ್ಲ ನೆನೆದು ನಾರಾಯಣರಾಯರು ಸಿಟ್ಟಿಗೆದ್ದರು. " ಅವ್ವ, ನಾವು ಸುಮ್ಮನೇ ಕೂತದ್ದೇ ತಪ್ಪಾಗಿದೆ. ಅದಕ್ಕೇ ನಮಗೆ ಹೀಗೆ ಒಂದರಮೇ ಲೊಂದು ಅಪಘಾತವಾಗುತ್ತಿವೆ. ಇವರ ಒಂದು ಕೈ ನೋಡಿಯೇ ಬಿಡು ತ್ತೇನೆ; ಆಗಲಿ! ನಾವಾದರೂ ಬದುಕಬೇಕು! ಅವರಾದರೂ ಬದುಕಬೇಕು! ಇದರ ಹೊರತು ಬೇರೆ ಮಾರ್ಗವೇ ಇಲ್ಲ. "

" ಮಗು, ಒಮ್ಮೆಲೆ ಎಷ್ಟು ಬುದ್ಧಿ ಬಂದು ಬಿಟ್ಟಿದೆಯಲ್ಲಾ ನಿನಗೆ. ನಾನು ಹೇಳುತ್ತೇನೆ. ಈ ರಾತ್ರಿ ಎಲ್ಲಿಯೂ ಹೋಗಬೇಡ. ಅವರನ್ನು ಕೆಣಕುವುದು ಒಳ್ಳೆಯದೇ ಅಲ್ಲ. ಏನಾದರೂ ರಾಕ್ಷಸರು ಅವರು! ಮಗು ಸ್ವಸ್ಥವಾಗಿ ಮಲ ಗಿಕೋ. ಬೇಕಾದರೆ ವೆಂಕಟೇಶದೇವರ ಧ್ಯಾನ ಮಾಡು. ಎಲ್ಲ ತಾನೇ ಸರಿ ಹೋಗುವುದು! "

ಸುಬ್ಬಕ್ಕನವರು ನಾರಾಯಣರಾಯರನ್ನು ಹೊರಗೆ ಬಿಡಲಿಲ್ಲ. ನಾರಾಯ ಣರಾಯರು ನಿರ್ವಾಹವಿಲ್ಲದೆ ಮನೆಯಲ್ಲಿ ಮಲಗಿಕೊಂಡರು.

## ೨೨

ಮಾನೋಮಿಯ ಬೆಳಗು! ಆಕಾಶವು ಮೋಡಗಳಿಂದ ಬಿಮ್ಮನೆ ಮುಖ ಬಿಗಿದುಕೊಂಡಿದ್ದಿತು! ಹಬ್ಬದ ದಿನವೆಂದು ಲಕ್ಷ್ಮಿ ಬೇಗನೇ ಎದ್ದು ಸ್ವಚ್ಛವಾಗಿ ಮೈ ತೊಳೆದುಕೊಂಡಿದ್ದಳು. ಪ್ರತಿದಿನದಂತೆ ಅವಳು ದೇವರ ಹಾಡುಗಳನ್ನು ಹೇಳುತ್ತಿದ್ದಳು. ಅವಳಿಗಾಗುವ ದುಃಖವನ್ನು ಮರೆಯಲು ಅವಳಿಗೆ ಇದೊಂದೇ ಉಪಾಯವಾಗಿತ್ತು. ಇದನ್ನು ಅವಳ ತಾಯಿಯು ಕಲಿಸಿಕೊಟ್ಟಿದ್ದಳು. ಆ ಭಕ್ತಿಯ ಹಾಡುಗಳನ್ನು ಹೇಳುವಾಗ ಅವಳು ಸಂಸಾರದ ತಾಪತ್ರಯಗಳನ್ನೆಲ್ಲ ಮರೆತುಬಿಡುತ್ತಿದ್ದಳು. ಅವಳ ಸುಸ್ವರವನ್ನು ಕೇಳುತ್ತ ನಾರಾಯಣರಾಯರೂ, ಅವಳ ಸನಿಹದಲ್ಲಿಯೇ ಕುಳಿತುಕೊಳ್ಳುತ್ತಿದ್ದರು. ಮಾನೋಮಿಯ ದಿನವೂ ನಾರಾಯಣರಾಯರು ಸ್ನಾನಮಾಡಿ ಭಕ್ತಿಭಾವದಿಂದ ಲಕ್ಷ್ಮಿಯ ಹತ್ತಿರವಿದ್ದರು.

ಹಾಡು ಮುಗಿಯುತ್ತಲೆ ನಾರಾಯಣರಾಯರು ಗಿಳಿಯ ಪಂಜರದ ಕಡೆಗೆ ಹೋದರು. 'ಟುಪ್ಪೀ! ಟುಪ್ಪೀ!' ಗಿಳಿ ಒದರಿದವು. ನಾರಾಯಣರಾಯರು ಅವುಗಳ ಕಡೆಗೆ ನೋಡುತ್ತ, ಅವುಗಳಿಗೆ ಫಲಗಳನ್ನು ಕೊಟ್ಟು ಮಾತನಾಡಿಸಿದರು! ಲಕ್ಷ್ಮಿ ಆ ಗಿಳಿಗಳನ್ನು ನಿರೀಕ್ಷಿಸುತ್ತಿರುವಾಗ ನಾರಾಯಣರಾಯರು ಹೇಳಿದರು "ನೀನು ಒಂದೇ ಗಿಳಿ ಪಂಜರದಲ್ಲಿ ಇಟ್ಟಿದ್ದೆ! ನಾನೂ ಮತ್ತೊಂದು ಇಟ್ಟಿದ್ದೇನೆ! ಎರಡು ಗಿಳಿ!"

ಲಕ್ಷ್ಮಿ ನಗುತ್ತ ಹೇಳಿದಳು "ಹೌದು ಇನ್ನೊಂದು ಗಿಳಿ ನಾನು! ಪಂಜರ ದೇವರ ಕೃಪೆ!"

ಲಕ್ಷ್ಮಿಯ ಮಾತುಗಳನ್ನು ಕೇಳಿ, ನಾರಾಯಣರಾಯರು ತಮ್ಮ ಅಧಿಕಾರ ವಾಣಿಯನ್ನು ಉಪಯೋಗಿಸಿದರು— "ಇಲ್ಲಿಯದೆಲ್ಲ ನಿನಗೆ ಅನುಭವವಾಯಿತಷ್ಟೆ? ಇನ್ನು ನೀನು ನಾನು ಹೇಳಿದಂತೆ ಕೇಳು. ನಿನ್ನನ್ನು ಪಂಜರದಲ್ಲಿ ಇಡಬೇಕು!"

ಸರಸ ಸಂಭಾಷಣೆಯಲ್ಲಿ ಲಕ್ಷ್ಮಿ ಮತ್ತು ನಾರಾಯಣರಾಯರು ಇರುವಾಗ ಹೊರಗೆ ಯಾರೋ ಬಾಗಿಲ ತಟ್ಟಿದ ಸಪ್ಪಳವಾಯಿತು. ಮತ್ತೂ ಒಮ್ಮೆ

ಬಾಗಿಲ ತಟ್ಟಿದರು.

"ಯಾರು?" ಎಂದು ಲಕ್ಷ್ಮಿ ಒದರಿದಳು.

ನಾರಾಯಣರಾಯರು ಹೋಗಿ ಬಾಗಿಲ ತೆರೆದರು. ಬಂದ ವ್ಯಕ್ತಿಯನ್ನು ನೋಡಿ ನಾರಾಯಣರಾಯರಿಗೆ ಅಚ್ಚರಿಯಾಯಿತು. ಕೈಯಲ್ಲಿ ಒಂದು ಉದ್ದವಾದ ಕೋಲು! ಮುಖ ಜೋಲು ಬಿದ್ದಿದೆ. ಬಹಳ ದಣಿದಿದ್ದಾರೆ! ಉಶ್ಯ್ ಉಶ್ಯ್ ಎಂದು ಉಸಿರ್ಗರೆಯುತ್ತಿದ್ದಾರೆ! ನಾರಾಯಣರಾಯರು ತಮ್ಮ ಕಣ್ದೆರೆದು ಅವರನ್ನು ಮಿಕಿಮಿಕಿ ನೋಡುತ್ತ ನಿಂತರು.

ನಾರಾಯಣರಾಯರು ಬೇಗ ಬರಲಿಲ್ಲವೆಂದು ಲಕ್ಷ್ಮಿ ತಾನೇ ಎದ್ದು ಹೊರಗಿನ ಕೋಣೆಗೆ ಹೋದಳು. ಸೋತು ಬಂದಿತ್ತು ಆ ವ್ಯಕ್ತಿ! "ಅಪ್ಪಾ!" ಎಂದು ಕೂಗಿದಳು.

ನಾರಾಯಣರಾಯರು ಕೂಡಲೇ ಅವರ ಕೈಹಿಡಿದು ಒಳಗೆ ಕರೆತಂದರು. ಅವರಿಗೆ ಸಾಷ್ಟಾಂಗ ನಮಸ್ಕಾರ ಮಾಡಿದರು. ಲಕ್ಷ್ಮಿ ಅವರಿಗೆ ಉಪಚರಿಸಿ ವಿರಾಮ ಕುರ್ಚಿಯ ಮೇಲೆ ಕೂಡಿಸಿದಳು.

"ಅಪ್ಪ, ಎಷ್ಟು ಸೋತಿರುವೆ? ಏನಾಗಿದೆ ನಿನಗೆ?" ತಂದೆಯ ಮೇಲಿನ ವಾತ್ಸಲ್ಯದಿಂದ ಕೇಳಿದಳು.

"ನನ್ನದೇನು ಉಳಿದಿದೆ ಲಕ್ಕಮ್ಮಾ? ಇನ್ನು ನನ್ನದೇನು ಉಳಿದಿದೆ ಲಕ್ಕಮ್ಮಾ ಈ ಜಗತ್ತಿನಲ್ಲಿ?" ಸಂಜೀವರಾಯರು ಉಸಿರ್ಗರೆದರು.

"ಅಪ್ಪ, ಬಹಳೇ ದಣಿದಿರುವಿ........ ವಿಶ್ರಾಂತಿ ತಗೋ. ನಿಲ್ಲು. ನಾನೇ ನಿನ್ನ ಬಟ್ಟೆ ತೆಗೆಯುತ್ತೇನೆ!........"

"ಸ್ನಾನ ಮಾಡಲಿ, ಏನಾದರೂ ತೆಗೆದುಕೊಳ್ಳಲಿ" ನಾರಾಯಣರಾಯರು ಹೇಳಿದರು.

ಸಂಜೀವರಾಯರು ಏನೂ ಉತ್ತರ ಕೊಡಲಿಲ್ಲ. ಕ್ಷಣಕ್ಷಣಕ್ಕೆ ಉಸಿರ್ಗರೆಯುತ್ತಿದ್ದರು. ಲಕ್ಷ್ಮಿ ಮತ್ತು ನಾರಾಯಣರಾಯರು ಎಷ್ಟು ಅವರಿಗೆ ಉಪಚರಿಸುತ್ತಿರುವಾಗಲೂ, ಸಂಜೀವರಾಯರದು ಅದೇ ರಾಗ ಅದೇ ಧ್ವನಿ!

"ಜೀವ ಬಿಟ್ಟುಬಿಡಬೇಕೆಂದೇ ಬಂದಿದ್ದೇನೆ, ಮಗೂ. ನನ್ನದೇನು ಇನ್ನು ಉಳಿಯಿತು?" ಮಧ್ಯಾಹ್ನ ಸಂಜೀವರಾಯರು ತಮ್ಮ ಮಗಳನ್ನು ತಮ್ಮ ಹತ್ತಿರ ಕೂಡಿಸಿಕೊಂಡು ಹೇಳಿದರು.

"ಅಪ್ಪಾ, ಏನಾಗಿದೆ. ಏನೂ ಹೇಳಲೇ ಒಲ್ಲೆ. ನಿನಗೇನಾಗಿದೆ ಹೇಳು ಡಾಕ್ಟರಿಗೆ ಹೇಳಿ ಕಳಿಸುತ್ತೇನೆ ?"

"ಲಕ್ಕಮ್ಮಾ, ಯಾವ ಡಾಕ್ಟರರೂ ಇದನ್ನು ಗುಣ ಮಾಡುವದಿಲ್ಲ. ನನ್ನ ಆಯುಷ್ಯವೇ ತುಂಬಿ ಬಂದಿದೆಯೆಂದಮೇಲೆ ಯಾರೇನು ಮಾಡುವರು ? ಇದೆಲ್ಲ ನಮ್ಮ ದೈವ ಇಷ್ಟೆ ! ನನ್ನ ಹಣೆಯಲ್ಲಿ ಹೀಗೆ ಬರೆದಿತ್ತು ಅನ್ನಬೇಕು ಅಷ್ಟೆ !........"

"ಯಾವ ದೈವ ? ಏನು ಮಾತನಾಡುತ್ತಿರುವೆ ಅಪ್ಪ ?"

"ಇಷ್ಟು ದಿನ ನೀನು ನನ್ನ ಕಾಳಜಿ ತೆಗೆದುಕೊಳ್ಳದೇ ಇದ್ದುದು ಈಗ ತಿಳಿಯಿತು ಲಕ್ಕಮ್ಮಾ ! ಉಶ್ಶ್ಯ !" ಎಂದು ಮತ್ತೆ ಸಂಜೀವರಾಯರು ಉಸಿ ರ್ಗರೆದು ಪಲಂಗದ ಮೇಲೆ ಒರಗಿದರು.

"ಅಪ್ಪ, ನಿನಗೆ ನಾನು ಮಾಡದೆ ಯಾರು ಮಾಡಬೇಕು ನೀನೇ ಹೇಳು ನೀನು ಒಂದು ಪತ್ರ ಬರೆದು ತಿಳಿಸಿದ್ದರೆ ನಾನೇ ಬಂದು ನಿನ್ನನ್ನು ಕರೆದು ಕೊಂಡು ಬರುತ್ತಿದ್ದೆ."

"ಲಕ್ಕಮ್ಮಾ ನಿನಗೆ ಬರಲು ಹೇಗೆ ಸವುಡಾಗಬೇಕು ? ನಿನ್ನವು ನೂರೆಂಟು ಕಾರಸ್ಥಾನ !"

"ಕಾರಸ್ಥಾನ !" ಗಾಬರಿಯಾಗಿ ಲಕ್ಷ್ಮಿ ಕೇಳಿದಳು.

"ಹೂಂ ! ಕಾರಸ್ಥಾನ !........ ನೀನು ಹೆಂಗಸು ! ನಿನಗೆ ಏಕೆ ಬೇಕಾಗಿತ್ತು ? ಯಾರು ಕಲಿಸಿದರು ಇದನ್ನೆಲ್ಲ ?"

"ಅಪ್ಪಾ, ಏನೂ ತಿಳಿದುಕೊಳ್ಳದೆ ಮಾತನಾಡಬೇಡ...."

"ಎಲ್ಲಾ ತಿಳಿದುಕೊಂಡಿದ್ದೇನೆ ! ಮಗೂ. ಎಲ್ಲಾ ತಿಳಿದಿದೆ !........ ಆ ಸುದ್ದಿ ಕೇಳಿದಂದಿನಿಂದ ನನ್ನ ಮೈ ಉರಿಯುತ್ತಿದೆ. ನನ್ನ ಮನಸ್ಸು ಒಡೆದು ಚೂರು ಚೂರಾಗಿದೆ ! ನನಗೆ ಏನೂ ಜಡ್ಡಿಲ್ಲ ಲಕ್ಕೂ........ ಇದೇ ಜಡ್ಡು ನನಗೆ !"

"ಅಪ್ಪ, ನೀನು ಶೀನೂಕಾಕಾ ಅವರನ್ನು ನಂಬಿ ಏನೂ ಹೇಳಬೇಡ !"

"ಥೂ !" ಎಂದು ಎದ್ದು ಕುಳಿತು ಸಂಜೀವರಾಯರು ತಮ್ಮ ಮಗಳಿಗೆ ಜಬರಿಸಿದರು. "ನಿನಗೆ ಸಾವಿರ ಸಲ ಹೇಳಿದ್ದೇನೆ. ಅವರ ಹೆಸರನ್ನು ಸ್ಮರಿಸಿ ನಾವು ದಿನಾಲು ಹೊಟ್ಟೆಯಲ್ಲಿ ಒಂದು ತುತ್ತು ಹಾಕಿಕೊಳ್ಳಬೇಕು !" ಎಲ್ಲಿಲ್ಲದ

ಆವೇಶ ಸಂಜೀವರಾಯರಲ್ಲಿ ಬರಹತ್ತಿತು. "ಲಕ್ಶ್ಮೂ, ಈ ಮನೆ ಒಡೆದು ಪಾಲು ಮಾಡಲು ಯಾರು ಹೇಳಿದ್ದರು? ದೊಡ್ಡ ಮನೆತನ ಹಾಳು ಮಾಡಿದೆ. ನನ್ನ ಮಗಳು ನೀನು! ಹೀಗೆ ಮಾಡಬೇಕೆ? ನನ್ನ ಕಣ್ಣಿನಿಂದ ಇದನ್ನು ಹೇಗೆ ನೋಡಲಿ? ಪಾಪ! ಆ ಶೀನಪ್ಪನವರನ್ನು ದಿಕ್ಪಾಪಾಲು ಮಾಡಿ ಹೀಗೆ ಓಡಿಸಬೇಕೆ? ಪಾಪ! ಅವರ ತ್ಯಾಗಬುದ್ಧಿ ನಿನಗೆ ಗೊತ್ತಿಲ್ಲ ಲಕ್ಶ್ಮೂ. ನೀನು ಮತ್ತೆ ಭಿಕ್ಷಾಪಾತ್ರೆ ಹಿಡಿದರೆ, ನಿನಗೆ ಗೊತ್ತಾಗುತ್ತದೆ!"

ಸಂಜೀವರಾಯರು ಧೊಪ್ಪನೆ ಹಾಸಿಗೆಯ ಮೇಲೆ ಬಿದ್ದರು. ಲಕ್ಷ್ಮಿ ಅವರ ಸ್ಥಿತಿಯನ್ನು ನೋಡಿ ದುಃಖಿಸಹತ್ತಿದಳು. ತಂದೆಯ ಎದೆಯ ಮೇಲೆ ತನ್ನ ತಲೆಯನ್ನು ಇಟ್ಟು, ತನ್ನ ಕಂಬನಿಗಳಿಂದ ಅವರ ಹೃದಯವನ್ನು ತೋಯಿಸಿದಳು. "ಅಪ್ಪಾ! ನಾನು ಎಷ್ಟು ಕಷ್ಟಪಟ್ಟಿದ್ದೇನೋ ದೇವರೇ ಬಲ್ಲ. ನಾನು ಎಲ್ಲವನ್ನು ನುಂಗಿಕೊಂಡು ಇದ್ದೇನೆ. ಯಾರ ಮುಂದೆಯೂ ಚಕಾರ ಶಬ್ದವನ್ನು ತೆಗೆದಿಲ್ಲ. ಅವ್ವ ಬದುಕಿ ಇದ್ದರೆ, ಅವಳಾದರೂ ನನ್ನ ಕಣ್ಣೀರು ಒರಸುತ್ತಿದ್ದಳೋ ಏನೋ! ಅಪ್ಪಾ!" ಲಕ್ಷ್ಮಿ ಬಿಕ್ಕಿಸಿ ಅಳಹತ್ತಿದಳು.

"ಮಗೂ, ನಿನ್ನ ಅವ್ವ ಈಗ ಬದುಕಿ ಇರದೇ ಇದ್ದುದೇ ಗುಣವಾಯಿತು! ನಿನ್ನ ಸ್ವಭಾವವನ್ನು ನೋಡಿ ಅವಳು ಎಲ್ಲಿಯಾದರೂ ಭಾವಿ ಹಾರಿಕೊಳ್ಳುತ್ತಿದ್ದಳು. ನಾನು ಗಂಡಸು—ಜೀವ ಹಿಡಿದಿದ್ದೇನೆ!" ಲಕ್ಷ್ಮಿಯ ತಲೆಯ ಮೇಲೆ ಕೈಯಾಡಿಸದೇ ಸಹ, ಅಲಿಪ್ತರಂತೆ ಸಂಜೀವರಾಯರು ಮಾತನಾಡಿದರು.

ಸಂಜೀವರಾಯರ ರೀತಿಯನ್ನೂ, ಅವರ ಮಾತಿನ ನೀತಿಯನ್ನೂ ನೋಡಿ ಲಕ್ಷ್ಮಿಗೆ ಕರುಳನ್ನೇ ಹಿಂಡಿ ಚೆಲ್ಲಿದಂತಾಯಿತು. ಸಂಕಟದಿಂದ "ಅಪ್ಪಾ!" ಎಂದು ಕೂಗಿದಳು. "ನೀನೂ ಸಹ ಎಂಥ ಮಾತು ನನ್ನ ಸಲುವಾಗಿ ಆಡುತ್ತಿರುವೆ? ನಾನು ಹೇಗೆ ಇದನ್ನು ತಾಳಿಕೊಳ್ಳಲಿ? ನಾನು ನಿನ್ನ ಮುಂದೆಯೂ ನನಗಾದ ಸಂಕಟವನ್ನು ಇನ್ನೂ ಹೇಳಿಲ್ಲ....ಅವ್ವ ಬದುಕಿದ್ದರೆ........?"

ದೃಢವಾದ ಮನಸ್ಸಿನಿಂದಲೆ, ಹುಬ್ಬು ಬಿಗಿದುಕೊಂಡು ಸಂಜೀವರಾಯರು ಹೇಳಿದರು—"ನೀನೇ ತಪ್ಪು ಮಾಡಿರುವಿಯೆಂದು ಯಾರ ಮುಂದೆಯೂ ಹೇಳಿಲ್ಲ! ಇಷ್ಟು ಗೊತ್ತಾಗದೇ? ನಿನ್ನ ಅವ್ವ ಬದುಕಿದ್ದರೆ........? ಅಯ್ಯೋ! ಅವಳು ಸಾಯುವಾಗಿನ ಆಶೆಯನ್ನು ಶೀನಪ್ಪನವರು ಪೂರೈಸಿದ್ದರು! ಲಕ್ಶ್ಮೂ, ನಿನಗಿನ್ನೂ ಜಗತ್ತಿನ ಜ್ಞಾನವಿಲ್ಲ. ಮನುಷ್ಯ ಸಾಯುವಾಗ ಹೇಳುವ ಮಾತು

ಗಳಿಗೆ ಬಹಳ ಮಹತ್ವವಿದೆ. ಅವರ ಹೃದಯದಲ್ಲಿರುವ ಕೊನೆಯ ಆಶೆ, ನಾ
ಗೆಯ ಮೇಲೆ ಬರುತ್ತದೆ! ಅದನ್ನು ನಾವು ಪೂರ್ಣ ಮಾಡದಿದ್ದರೆ ಅವರು ಭೂ
ರಾಗಿ ನಮ್ಮ ಬೆನ್ನುಹತ್ತುತ್ತಾರೆ! ಅದೇನೇ ಇರಲಿ, ಅವರ ಕೊನೆಯ ಆ
ಈಡೇರಲೇ ಬೇಕು. ಮಗೂ, ನಿನ್ನ ಅವ್ವ ಸುಮ್ಮನೇ ನಿನಗೆ ಶ್ರೀಮಂತ ಮ
ಬಯಸಿದಳೆಂದು ತಿಳಿದಿರುವಿಯೇನು? ಅವಳು ಜೀವನದಲ್ಲಿ ಪಟ್ಟ ಕಷ್ಟ ಕಡಿ
ಯಿಲ್ಲ. ನಾವು ಆಗರ್ಭ ಶ್ರೀಮಂತರು! ನಿನ್ನ ಅವ್ವನ ದುರ್ದೈವವೋ ಏನೋ
ಲಗ್ನವಾದ ಎರಡು ವರ್ಷಗಳಲ್ಲಿಯೇ ಭಿಕ್ಷಾಪಾತ್ರೆಯನ್ನು ಹಿಡಿಯುವ ಪ್ರಸಂ
ಬಂದಿತು. ನಮ್ಮ ತಂದೆ ಭೋಳೆತನದಿಂದ ಸುಮ್ಮಸುಮ್ಮನೇ ಅನೇಕರಿ
ಜಾಮೀನ ಆಗಿ ತಮ್ಮ ಎಲ್ಲಾ ಆಸ್ತಿಯನ್ನು ನಾಶ ಮಾಡಿಕೊಂಡರು. ತಾವು
ಈ ಜಗತ್ತಿನಿಂದ ನಾಶವಾಗಿ ಹೋದರು. ಒಮ್ಮೆಲೆ ಪರಿಸ್ಥಿತಿ ಹೀಗೆ ಬದಲಾದ
ಎಷ್ಟು ಕೆಡುಕೆನಿಸಬೇಡ—ನೀನೇ ಹೇಳು. ಅಂಬಲಿ, ಗಂಜೀ ತಿಂದು ನಾ
ಕಷ್ಟದಿಂದ ಕಾಲ ಕಳೆದಿದ್ದೇವೆ. ಬೇನೆ ಬಂದಾಗ, ವೈದ್ಯರನ್ನು ಸಹ ಎಷ್ಟೋ
ಸಲ ಕರೆಯಿಸದೆ ಜೀವ ಹಿಡಿದಿದ್ದೇವೆ. ಹೀಗಾಗಿಯೆ ನಿನ್ನ ಅವ್ವ, ಕೆಮ್ಮಿ
ಬೇನೆಯನ್ನು ಬೆಳೆಯಿಸಿಕೊಂಡು ಸತ್ತುಹೋದಳು. ಲಕ್ಷ್ಮೂ, ಅನುಭವಿಸಿದ
ರಿಗೇ ಎಲ್ಲ ತಿಳಿಯುವುದು!"

"ಅಪ್ಪಾ, ಇದೇ ಮಾತನ್ನೇ ನಾನು ನಿನಗೆ ಹೇಳಬೇಕಾಗಿದೆ. ಅವ್ವನ
ಆಶೆ ಪೂರ್ಣವಾಗಿರಬಹುದು. ಆದರೆ?"

"ಮಗೂ, ನನಗೇ ಬುದ್ಧಿ ಕಲಿಸಲು ಬಂದಿರುವೆಯಲ್ಲಾ? ನನಗೇನೂ
ತಿಳಿಯದೆ? ಮುಪ್ಪಾಗುತ್ತ ಬಂದಿದ್ದೇನೆ. ನೀನು ಇಲ್ಲಿಗೆ ಬಂದು ಇಷ್ಟು ಮಾತ
ನಾಡಲು ಕಲಿತಿರುವಿಯೆಂದ ಮೇಲೆ, ಇಲ್ಲಿ ಏನನ್ನು ಮಾಡಿರುವೆ, ಏನನ್ನು
ಮಾಡಿರಲಿಕ್ಕಿಲ್ಲ?"

"ಅಪ್ಪಾ, ಸುಮ್ಮನೇ ಸಿಟ್ಟಿಗೇಳಬೇಡ! ನನ್ನ ಅನುಭವದಿಂದಲೇ ನನಗೆ
ಆ ಧೈರ್ಯ ಬಂದಿದೆ. ಅಂತೆಯೇ ಮಾತನಾಡುತ್ತಿರುವೆ. ನನ್ನ ಲಗ್ನ ಮಾಡಿ
ದಿರಿ ನೀವು! ಆದರೆ ಯಾರಿಗೆ ಮಾಡಿದಿರಿ ಗೊತ್ತೇ!"

"ನಾರಾಯಣರಾಯರಿಗೆ! ನಮಗೇನು ಕಣ್ಣಿಗೆ ಕಾಣಿಸುವುದಿಲ್ಲವೇ?"

"ಅಪ್ಪ ನಿಮಗೆ ಕಣ್ಣಿಗೆ ಕಾಣಿಸುವುದು ಅವರು! ಆದರೆ ನಿಜವಾಗಿ
ಶ್ರೀಮಂತಿಕೆಗೆ ಲಗ್ನ ಮಾಡಿದಿರಿ! ಅಪ್ಪ!" ಲಕ್ಷ್ಮಿ ತನ್ನ ಕಣ್ಣುಗಳನ್ನು ಒತ್ತಿ

ಕೊಳ್ಳುತ್ತ ಹೇಳಿದಳು "ನನ್ನ ಸ್ವಭಾವ ತಿಳಿದುಕೊಳ್ಳಲಿಲ್ಲ! ನನಗೆ ಒಪ್ಪಿಗೆ ಕೇಳಲಿಲ್ಲ!........ ಏನು ಮೋಸ? ಏನು ಕಪಟ ನಾಟಕ?........ ಇವರು ಮೊದಲು ಹೇಗೆ ಇದ್ದರು? ಈಗ ಹೇಗಿದ್ದಾರೆ? ನೀನೇ ಅವರನ್ನು ಕೇಳು. ಹೆಂಗಸರು ಪ್ರತಿಯೊಂದಕ್ಕೂ ಸುಮ್ಮನಿರುತ್ತಾರೆ. ಯಾರಿಗೂ ಏನೂ ಗೊತ್ತಾಗುವದಿಲ್ಲ. ನನ್ನ ಸ್ಥಿತಿಯಲ್ಲಿಯೆ ಇನ್ನೊಬ್ಬ ಹೆಂಗಸರಿದ್ದರೆ........?"

"ಲಕ್ಷ್ಮೂ, ಇವೆಲ್ಲ ಡಂಭಾಚಾರದ ಮಾತುಗಳನ್ನು ನನಗೆ ಕಲಿಸಬೇಡ. ಶೀನಪ್ಪ ನನಗೆ ಎಲ್ಲವನ್ನೂ ಹೇಳಿದ್ದಾನೆ. ಮನೆಯಲ್ಲಿಯ ಮಾನ, ಮರ್ಯಾದೆ ಏನೂ ಉಳಿಸಲಿಲ್ಲ—ನೀನು. ನಿನ್ನ ಗೃಹಪ್ರವೇಶದಿಂದ ಈ ಮನೆ ಸರ್ವನಾಶವಾಗಿದೆ. ನಡುನಡುವೆ ಏನು ಗೋಡೆಗಳು ಬಿದ್ದಿವೆ? ಏನು ಒಲೆಗಳು ಬೇರೆ ಬೇರೆಯಾಗಿ ಉರಿಯುತ್ತಿವೆ. ಎರಡು ವರ್ಷಗಳಲ್ಲಿಯೇ ಇಷ್ಟು ರಂಭಾಟವನ್ನು ನೀನು ನಡೆಸಿರುವಿ. ಈ ಸತ್ಯಸಂಗತಿಯನ್ನೆಲ್ಲ ನಾನು ಹೇಗೆ ತಾಳಿಕೊಳ್ಳಲಿ? ಇದನ್ನು ಹೇಗೆ ನೋಡಲಿ? ಇದರಿಂದ ನನ್ನ ಮರ್ಯಾದೆಯೂ ಹೋಯಿತು. ಇನ್ನು ನನ್ನದೇನು ಉಳಿದಿದೆ ಲಕ್ಷ್ಮೂ. ಸರ್ವನಾಶ! ನಿನಗೆ ಇದನ್ನೆಲ್ಲ ಹೇಳಿ, ಇಲ್ಲಿ ಸಾಯಲೆಂದೇ ಬಂದಿದ್ದೇನೆ."

ಸಂಜೀವರಾಯರ ದೃಢವಾದ ಮಾತುಗಳನ್ನು ಕೇಳಿ ಲಕ್ಷ್ಮಿಗೆ ಎಂದೂ ಇಲ್ಲದಷ್ಟು ಕೆಡುಕೆನಿಸಿತು. ಇಷ್ಟೆಲ್ಲ ಆದದ್ದು ಶೀನಪ್ಪನವರ ಉಪದೇಶದಿಂದಲೇ ಎಂಬುದೂ ಅವಳಿಗೆ ನಿಶ್ಚಿತವಾಯಿತು. ಸಂಜೀವರಾಯರಿಗೆ ಏನು ಹೇಳಬೇಕು ಏನು ಹೇಳಬಾರದು? ದುಃಖದಾವೇಶದಲ್ಲಿ ಸಂಕಟವನ್ನು ತಾಳಿಕೊಳ್ಳಲಾರದೆ ಲಕ್ಷ್ಮಿ ಹೇಳಿದಳು "ಅಪ್ಪಾ, ಶೀನೂಕಾಕಾನ ಸ್ವಭಾವ, ನಿನಗೆ ಗೊತ್ತಿಲ್ಲ. ನನಗೆ ಗೊತ್ತಿದೆ!"

"ಏನಂದಿ?" ಸಂಜೀವರಾಯರು ಮತ್ತೆ ಎದ್ದು ಕುಳಿತು ಕೇಳಿದರು.

ಮನಸ್ಸನ್ನು ಬಿಗಿ ಹಿಡಿದುಕೊಂಡು ಲಕ್ಷ್ಮಿ ಮಾತನಾಡಿದಳು. "ಹೂಂ! ಹೌದು! ನನಗೆ ಗೊತ್ತಿದೆ, ಅವನು ಕಪಟಿಯಿದ್ದಾನೆ! ನೀತಿಯೆಂಬುದು ಗೊತ್ತಿಲ್ಲ! ಅವನೆದುರಿಗೆ ಹೆಂಗಸರು ಮಾನದಿಂದ ಬಾಳುವುದೇ ಕಷ್ಟ!"

"ಏನಂದೀ? ಶೀನಪ್ಪನವರ ಬಗ್ಗೆ ಈ ಮಾತುಗಳನ್ನು ಹೇಳುತ್ತಿರುವಿಯೇನು?" ಉದ್ವೇಗದಿಂದ ಸಂಜೀವರಾಯರು ಕೇಳಿದರು.

"ಹೌದು! ಅವನೆದುರಿಗೆ ಹೆಂಗಸರು ಮಾನದಿಂದ ಇರುವುದು ಸಾಧ್ಯ

ವಿಲ್ಲ. ಅಪ್ಪ, ಇದನ್ನು ಯಾರ ಮುಂದೆಯೂ ಈವರೆಗೂ ಈ ಮನೆಯಲ್ಲಿ ನಾನ
ಹೇಳಿಲ್ಲ. ಮನೆತನದ ಗೌರವವನ್ನು ಕಾಯ್ದುಕೊಳ್ಳಲು ಸುಮ್ಮನೇ ಇದ್ದೇನೆ
ಹೆಂಗಸು, ನಾನು! ಎಷ್ಟು ನುಂಗಿಕೊಂಡಿದ್ದೇನೆ! ಅಪ್ಪ ನಿನಗೆ ಗೊತ್ತಿಲ್ಲ
ಶೀನೂಕಾಕಾ ಹೀಗೆ ಇದ್ದಾನೆಂದು ನನ್ನ ಸ್ವಂತ ಅನುಭವದಿಂದ ಹೇಳುತ್ತಿದ್ದೇನೆ
ಅಪ್ಪ, ಈಗಾದರೂ ನಿನಗೆ ತಿಳಿಯಿತೇ ?"

"ಲಕ್ಶ್ಮೊ, ಯಾರ ಬಗ್ಗೆ ಈ ಮಾತನ್ನು ಹೇಳುವಿ ಚೆನ್ನಾಗಿ ಸ್ಮ
ಸಿಕೋ."

"ಅಪ್ಪ, ಅನುಭವದಿಂದ ಎಲ್ಲ ಧೈರ್ಯ ತಂದುಕೊಂಡಿದ್ದೇನೆ. ಶೀನು
ಕಾಕಾನ ಬಗ್ಗೆಯೇ ನಾನು ಈ ಮಾತನ್ನು ಹೇಳಿದ್ದು........"

"ತನ್ನಲ್ಲಿಯೇ ತಪ್ಪು ಇಟ್ಟುಕೊಂಡು ಯಾರಿಗಾದರೂ ಏನಾದರೂ
ಅನ್ನುವದು. ಮಗೂ, ಜಗತ್ತಿನ ಜ್ಞಾನವಿಲ್ಲ ನಿನಗೆ! ಈ ಪತ್ರವನ್ನಾದರೂ
ಓದು!"

ಸಂಜೀವರಾಯರು ತಮ್ಮ ಕಿಸೆಯಲ್ಲಿಯ ಒಂದು ಪತ್ರವನ್ನು ಹೊರಗೆ
ತೆಗೆದು ಅವಳ ಕಡೆಗೆ ಬೀಸಾಡಿದರು!

ಲಕ್ಷ್ಮಿ ಆ ಪತ್ರವನ್ನು ಕೈಯಲ್ಲಿ ತೆಗೆದುಕೊಂಡು, ಅದನ್ನು ತೆರೆದುನೋಡ
ಹತ್ತಿದಳು. ಅಹುದು, ಅವಳದೇ ಪತ್ರವಾಗಿತ್ತು! ವೆಂಕಟೇಶ ಅವರಿಗೆ ಬರೆ
ದದ್ದು! ಅದರ ಒಕ್ಕಣಿಕೆ ಹೀಗೆ ಇತ್ತು—

ರಾ|| ರಾ|| ವೆಂಕಟೇಶ ಅವರಿಗೆ,

ನಮಸ್ಕಾರಗಳು. ನಾನು ಹೇಳಿದಂತೆ ನೀವು ಬೇಗನೇ ಕಳಸಾಪೂರಿಗೆ
ಹೊರಟು ಬರಬೇಕು. ನನಗೆ ಈ ಮನೆಯಲ್ಲಿ ತ್ರಾಸವಾಗಿದೆ. ಮನಸ್ಸಿಗೂ
ಬಹಳ ತ್ರಾಸವಾಗಿದೆ. ನೀವು ಬಂದರೆ ಎಲ್ಲಕೆಲಸ ಸುರಳೀತವಾಗಿ ಸಾಗುವವು.
ನನ್ನ ಮನಸ್ಸಿಗೂ ಶಾಂತಿ ಸಿಗುವದು. ನೀವು ಈ ಪತ್ರ ಕಂಡಕೂಡಲೆ ಬೇಗನೆ
ಹೊರಟು ಬರಬೇಕು. ನಾನು ನಿಮ್ಮ ಹಾದಿಯನ್ನೇ ನೋಡುತ್ತಿದ್ದೇನೆ.

ಇತಿ— ಲಕ್ಷ್ಮಿ

ಪತ್ರವನ್ನು ಲಕ್ಷ್ಮಿ ಪುನಃ ಪುನಃ ನೋಡಹತ್ತಿದಳು. ಆ ಪತ್ರ ಸಂಜೀವ
ರಾಯರ ಕಡೆಗೆ ಹೇಗೆ ಹೋಯಿತು? ಇದನ್ನು ವಿಚಾರಿಸಿದಳು.

ಲಕ್ಷ್ಮಿಯ ಪೆಚ್ಚುಮುಖ ನೋಡುತ್ತ, ಸಂಜೀವರಾಯರು ಹೇಳಿದರು

"ಪತ್ರದ ಅರ್ಥವಾಯಿತೇನು ನಿನಗೆ? ನಿನಗೆ ಹೇಗೆ ತಿಳಿಯುವುದು? ನಾನು ನಿನಗೆ ಓದುಬರೆಹ ಕಲಿಸಿದ್ದೇ ತಪ್ಪಾಯಿತು. ತಮ್ಮಲ್ಲಿ ತಪ್ಪು ಇಟ್ಟುಕೊಂಡು, ಎರಡನೆಯವರಿಗೆ ತಪ್ಪು ಹೊರಿಸುವುದು. ಇದೆಲ್ಲಿಯ ನ್ಯಾಯ? ಶೀನಪ್ಪನವರು ನನ್ನ ಕಡೆಗೆ ಈ ಪತ್ರ ಕೊಡದಿದ್ದರೆ, ನಿನ್ನ ಕಾರಸ್ಥಾನ ನನಗೆ ಹೇಗೆ ಗೊತ್ತಾಗುತ್ತಿತ್ತು!"

"ಅಪ್ಪಾ, ಅವರು ಬಂದದ್ದು........"

"ಹೂಂ! ಇನ್ನು ಹೆಚ್ಚಿಗೆ ಮಾತನಾಡಬೇಡ. ನನ್ನ ಮಗಳು ಹೀಗೆ ಆಗುವಳೆಂದು ನನಗೆ ಅನಿಸಿರಲಿಲ್ಲ." ಸಂಜೀವರಾಯರು ತಮ್ಮ ಮುಖ ಮುಚ್ಚಿಕೊಂಡು ಹಾಸುಗೆಯ ಮೇಲೆ ಬಿದ್ದರು. "ನನ್ನ ಮಗಳು ಹೀಗೆ ಆಗುವಳೆಂದು ನನಗೆ ಅನಿಸಿರಲಿಲ್ಲ. ಮೊಮ್ಮಗನಿಗೆ ಎಷ್ಟು ಆಭರಣ ಮಾಡಿಸಬೇಕೆಂದು ಉಮೇದಿ ಇತ್ತು! ಎಲ್ಲವೂ ಸುಟ್ಟುಹೋಯಿತು! ಭಸ್ಮವಾಯಿತು! ನಿನಗೂ ಕಲಂಕ ತಂದುಕೊಂಡೆ. ನನಗೂ ಕಲಂಕ ಹಚ್ಚಿದೆ!"

"ಅಪ್ಪಾ, ನನ್ನ ಮೇಲೆ ಎಂಥ ತಪ್ಪು ಹೊರಿಸುತ್ತಿರುವೆ!" ಲಕ್ಷ್ಮಿ ಸಂಜೀವರಾಯರ ಎದೆಯ ಮೇಲೆ ಬಿದ್ದು ಅತ್ತಳು. "ನನ್ನನ್ನು ಕೊಂದು ಬಿಡು! ನನ್ನ ಮೇಲೆ ಇಷ್ಟು ಸಂಶಯವಿದ್ದರೆ ಈಗಲೇ ನನ್ನನ್ನು ಕೊಂದು ಬಿಡು. ನಿನ್ನ ಎದೆಯ ಮೇಲೆ ನಾನು ಜೀವವನ್ನು ಬಿಡುತ್ತೇನೆ. ಎಂಥ ಅಪರಾಧ ನನ್ನ ಮೇಲೆ, ಅಪ್ಪಾ! ಎಲ್ಲಾ ನೀನು ಹೇಗೆ ನಂಬಿದೆ? ಮಗಳ ಮಾತಿನ ಮೇಲೆ ನಿನಗೆ ವಿಶ್ವಾಸವಿಲ್ಲವೆ?............... ನಾನು ಹೇಳುವವಳು ಹುಚ್ಚಿ ಏನು?..............."

"ಹುಚ್ಚಿ!........ ಯಾವುದೋ ಹುಚ್ಚು ಹಿಡಿದಿದೆ ನಿನಗೆ! ವೆಂಕಟೇಶ ಅವರನ್ನು ಇಲ್ಲಿಗೆ ಏಕೆ ಕರೆಯಿಸಿದೆ ನನಗೆ ತಿಳಿಯುವದಿಲ್ಲವೇ? ಅವರ ಜೊತೆಗೆ ತೋಟದಲ್ಲಿಯೂ ಮಲಗಿ........"

"ಅಪ್ಪಾ!" ಎಂದು ಲಕ್ಷ್ಮಿ ಜೋರಾಗಿ ಚೀರಿದಳು. "ಎಲ್ಲಾ ಮಾಡಿದವಳು ನಾನೇ ಹುಚ್ಚಿ! ನಾನೇ ಹುಚ್ಚಿ!" ಜೋರಾಗಿ ಬಿಕ್ಕಿಸಿ ಅತ್ತಳು!

ಮಾನೋಮಿಯ ದಿನ ರಾತ್ರಿಯೆಲ್ಲ ಲಕ್ಷ್ಮಿಗೆ ನಿದ್ದೆ ಹತ್ತಲಿಲ್ಲ. ಹಾಸಿಗೆಯಲ್ಲಿಯ ತಲೆಗಿಂಬು, ಅವಳ ತಲೆಗೆ ಏನೂ ಇಂಬು ಕೊಡಲಿಲ್ಲ. ಅವಳು ಹಾಗೆಯೆ ಹಾಸುಗೆಯಲ್ಲಿ ಹೊರಳಾಡಿದಳು.

ಅನೇಕ ವಿಚಾರಗಳು ಅವಳ ತಲೆಯಲ್ಲಿ ಓಡಾಡುತ್ತಿದ್ದವು. ಸತ್ಯವಾದ ಸಂಗತಿಗೆ, ಸರಳ ಸ್ವಭಾವಕ್ಕೆ ಜಗತ್ತಿನಲ್ಲಿ ಏನೂ ಸ್ಥಾನವಿಲ್ಲ ಎಂದು ಎನಿಸು ತ್ತಿತ್ತು.

ಅದೇ ಹೊತ್ತಿಗೆ ತನ್ನ ಗೆಳತಿ ಶಾಂತಾಳ ಜೊತೆಗೆ ನಡೆದ ಸಂಗತಿಯೂ ಅವಳಿಗೆ ನೆನಪಾಯಿತು. ಅವಳಿಗೆ ನಿಲ್ಲಲು ಎಷ್ಟು ಹೇಳಿದರೂ ಅವಳು ನಿಲ್ ಲಿಲ್ಲ. ಆಯತ ಹೊತ್ತಿಗೆ ನವರಾತ್ರಿಯ ನೆವ ಮಾಡಿಕೊಂಡು ಪಾಡ್ಯದ ಮುನ್ನ ಸಂಜೆಯೇ ವೆಂಕಟೇಶ ಅವರನ್ನು ಊರಿಗೆ ಕರೆದುಕೊಂಡು ಹೋಗಿಬಿಟ್ಟಿದ್ದಳು. ತನ್ನ ಮೇಲಿನ ಸಂಶಯದಿಂದಲೇ ಅವಳು ಹೀಗೆ ಮಾಡಿರಬೇಕೆಂದು ಅವಳಿಗೆ ಈಗ ಅನಿಸಹತ್ತಿತು. ಶಾಂತಾ ಇನ್ನು ತಿರುಗಿ ಬರುವಳೇ? ಇಲ್ಲ, ಇಲ್ಲ ಎಂದು ಸಾವಿರ ಸಲ ಅನಿಸಿತು.

ಲಕ್ಷ್ಮಿಯ ಜೀವ ಯಾರಿಗೆ ಬೇಕಾಗಿದೆ? ಸ್ವತಃ ಹಡೆದ ತಂದೆಯೆ ವಿರು ದ್ಧವಾಗಿ ನಿಂತಿದ್ದಾನೆ! ಬಂಧುಬಳಗದವರು ವಿರುದ್ಧವಾಗಿ ನಿಂತಿದ್ದಾರೆ? ಗೆಳತಿ ವಿರುದ್ಧವಾಗಿದ್ದಾಳೆ! ಈ ಜೀವ ಯಾರಿಗೆ ಬೇಕು? ಈ ಜೀವ ಯಾರಿಗೆ ಬೇಕು?

ಮಂದವಾದ ಬೆಳಕಿನಲ್ಲಿ ಎರಡು ಗಿಳಿಗಳು ಪಂಜರದಲ್ಲಿ ಕಂಡವು. ಲಕ್ಷ್ಮಿ ನಾರಾಯಣರಾಯರ ಕಡೆಗೆ ನೋಡಿದಳು. ಅವರು ಸ್ವಸ್ಥವಾಗಿ ಮಲಗಿಕೊಂಡಿ ದ್ದರು. ಅವರ ಸಲುವಾಗಿ ತಾನು ಜೀವಿಸಬೇಕೆ? ಆದರೆ ತನ್ನ ಹೊಟ್ಟೆ? ಅವಳಿಗೆ ಆನಂದರಾಯರ ಹೆಂಡತಿ ಪದ್ದಕ್ಕನವರ ಜೀವನ ನೆನಪಾಯಿತು. ಅವಳ ಮನಸ್ಸು ಹುಚ್ಚೆಯಾಯಿತು.

ಶೀನೂಕಾಕಾ ಕಣ್ಣೆದುರು ಬಂದು ನಿಂತರು. ಅವರ ಆ ಶರ್ವಾನಿಯ ಕೋಟು. ಅವರ ಆ ಠೀವಿ. ಅವರ ಕುಚೇಷ್ಟೆ. ಅವರ ಸುಳ್ಳು ಮಾತುಗಳು. ಅವರ ಆ ಕಪಟವೇಷ! ನೂರು ಬರ್ಚಿಗಳಿಂದ ಅವರ ಮೈ ಚುಚ್ಚಬೇಕೆನಿಸಿತು. ಲಕ್ಷ್ಮಿ ಹುಚ್ಚಿಯಂತಾದಳು.

ದಸರೆಯ ಇಡೀ ದಿನ ಲಕ್ಷ್ಮಿ ಮಾತನಾಡಲಿಲ್ಲ. ಸಂಜೀವರಾಯರು ಹಾಸುಗೆಯಲ್ಲಿ ನರಳುತ್ತ ಬಿದ್ದುಕೊಂಡಿದ್ದರು. ಅವರೂ ಮಗಳ ಜೊತೆಗೆ ಮಾತನಾಡಲಿಲ್ಲ. ಔಪಚಾರಿಕವಾಗಿ ಮಾಡಬೇಕಾದ ಕಾರ್ಯಗಳನ್ನಷ್ಟೆ ಮಾಡುತ್ತಿದ್ದರು. ಇದನ್ನು ನೋಡಿ ಲಕ್ಷ್ಮಿ ಮತ್ತಿಷ್ಟು ಹುಚ್ಚಿಯಂತಾದಳು.

ಹೊರಗೆ ಜನರು ವಿಜೃಂಭಣೆಯಲ್ಲಿದ್ದರು. ಊರನ್ನು ತಳಿರು ತೋರಣಗಳಿಂದ ಶೃಂಗರಿಸಿದ್ದರು. ಢಂ, ಢಂ, ಡೋಲು ಮುಂತಾವುಗಳ ಸಪ್ಪಳ ಕೇಳಿಸುತ್ತಿತ್ತು. ಕಹಳೆಗಳು ಆಕಾಶವನ್ನೇ ಬಿರಿಯುವಂತೆ ಊದುತ್ತಿದ್ದವು. ಗೋವಿಂದರಾಯರು ಬನ್ನಿ ಕೊಡುವ ಉತ್ಸವವನ್ನು ನೆರವೇರಿಸಲು ಶೃಂಗಾರವಾಗಿ ನಿಂತಿದ್ದರು. ಶೀನಪ್ಪನವರೂ ತಮ್ಮ ತಯಾರಿಯನ್ನು ಮಾಡಿಕೊಂಡಿದ್ದರು.

ಲಕ್ಷ್ಮಿ ತಾನೂ ತನ್ನ ಶೃಂಗಾರವನ್ನು ಮಾಡಿಕೊಂಡಳು. ಹೊಸ ರೇಶಿಮೆಯ ಸೀರೆ, ಕುಪ್ಪಸ ತೊಟ್ಟುಕೊಂಡು, ಅಲಂಕಾರದ ಆಭರಣಗಳನ್ನು ಧರಿಸಿಕೊಂಡಳು. ನಾಲ್ಕು ಜನರೆದುರಿಗೆ ತಾನೂ ಡೌಲಿನಿಂದ ಮೆರೆದಳು ಮುಗುಳು ನಗೆ ನಗುತ್ತ ಎಲ್ಲ ಕಡೆಗೂ ಓಡಾಡಿದಳು.

ಬನ್ನಿ ಕೊಡುವ ಉತ್ಸವ ನೆರವೇರಿತು. ತೇರು ತಿರುಗಿ ವೆಂಕಟೇಶ ದೇವರ ಗುಡಿಗೆ ಸಾಗಿತು. ಆಗ ಆಕಾಶದಲ್ಲಿ ಮೋಡಗಳು ಮುಸುಗಿದ್ದವು. ಜನರೆಲ್ಲರೂ ತಮ್ಮ ತಮ್ಮ ಕೆಲಸ ಬೇಗ ಮುಗಿಸಿಕೊಂಡು ಮನೆಯ ಕಡೆಗೆ ಧಾವಿಸಹತ್ತಿದರು.

ಲಕ್ಷ್ಮಿ ಬೇಗನೆ ಮನೆಗೆ ಬಂದಳು. ಅಟ್ಟದ ಮೇಲಿನ ಕಿಟಕೆಯಲ್ಲಿ ನಿಂತು ಕೆಳಗಿನ ಜಗತ್ತಿನಲ್ಲಿ ನಡೆಯುವ ಎಲ್ಲವನ್ನೂ ನಿರೀಕ್ಷಿಸುತ್ತಿದ್ದಳು. ಮೇಲೆ ಆಕಾಶದ ಅಂತರಿಕ್ಷದಲ್ಲಿ ಗೊಂದಲ. ಕೆಳಗೆ ಜನರ ಗೊಂದಲ! ಇವೆರಡರ ನಡುವೆ ಲಕ್ಷ್ಮಿಯ ಮನಸ್ಸು ತಿರ್ರನೆ ತಿರುಗಿತು.

ಹಳೆಯ ಆಯುಧಗಳನ್ನು ಪೂಜೆಗಾಗಿ ತೆಗೆದಿಟ್ಟಿದ್ದರು. ಲಕ್ಷ್ಮಿಯ ಲಕ್ಷ್ಯವು ಅತ್ತ ಕಡೆಗೆ ಹರಿಯಿತು. ತಾನು ಇಷ್ಟು ತಾಳಿಕೊಂಡದ್ದೇ ಸಾಕು. ಇನ್ನು ಜಗತ್ತಿನಲ್ಲಿರುವುದು ಹಿತವಲ್ಲವೆಂದು ಬಲವಾಗಿ ಅನಿಸಿತು, ನರನರಗಳು ಅದೇ ಮಾತನ್ನೇ ಎತ್ತಿ ನುಡಿಯುತ್ತಿದ್ದವು. ರಕ್ತವು ಕುದಿಯುತ್ತಿದ್ದಿತು. ಲಕ್ಷ್ಮಿಯು ದೇವರ ಮನೆಯಲ್ಲಿ ಹೋಗಿ ಆ ಆಯುಧಗಳಿಗೆ ನಮಸ್ಕರಿಸಿದಳು. ಹೂವನ್ನು ಕೆಳಗೆ ಕೆಡವಿ ಒಂದು ಬರ್ಚಿಯನ್ನು ತೆಗೆದು ಮುಚ್ಚಿಟ್ಟುಕೊಂಡಳು.

ಆಗಲೆ ರಾತ್ರಿ ೯ ಗಂಟೆಯಾಗಿದ್ದಿತು. ಯಾರಿಗೂ ಹೇಳದೆ ಲಕ್ಷ್ಮಿ ಹೊರಹೊರಟಳು.

ಕೋಣೆಯ ಬಾಗಿಲು ಇಕ್ಕಿದ್ದಿತು. ಒಳಗೆ ದೀಪ ಕಾಣುತ್ತಿದ್ದಿತು. ಲಕ್ಷ್ಮಿ
ಬಾಗಿಲು ತಟ್ಟಿದಳು.

ಉತ್ತರ ಬರಲಿಲ್ಲ !

ಮತ್ತೆ ಬಾಗಿಲ ತಟ್ಟಿದಳು !

ಒಮ್ಮೆಲೆ ಬಾಗಿಲು ತೆರೆಯಿತು. ಅವರು ಒಬ್ಬರೇ ಇದ್ದರು. ಅವಳ
ಬಾಗಿಲು ಇಕ್ಕಿಕೊಂಡು ಮುಂದೆ ಬಂದಳು. ಎಂದೂ ಇಲ್ಲದ ಉತ್ಸಾಹವನ್ನು
ಮುಖದಲ್ಲಿ ತೋರಲು ಪ್ರಯತ್ನಿಸಿದಳು. "ಬನ್ನಿಯನ್ನು ಕೊಟ್ಟಿರಲಿಲ್ಲ
ಕೊಟ್ಟು ಹೋಗಬೇಕೂ ಎಂದು ಬಂದೆ ! "

" ನನಗೆ ಗೊತ್ತು. ನೀನು ಭಂಗಾರದಂಥ ಹುಡುಗಿ. ಬಾ, ಬಾ. "

" ಈ ಬಂಗಾರ ತೆಗೆದುಕೊಂಡು ಬಂಗಾರದಂತೆ ಇರಬೇಕೂ. "

" ನೀನೇ ಬಂಗಾರದಂಥವಳು ! " ಎಂದು ಗಹಗಹಿಸಿ ನಕ್ಕರು.

" ಅಹುದು ! ಅದನ್ನು ಕೊಡಲೆಂದೇ ಈ ದಿನ ಬಂದಿದ್ದೇನೆ! ಶೀನು
ಕಾಕಾ ! ನನ್ನ ತಪ್ಪನ್ನೆಲ್ಲ ಒಪ್ಪಿಕೊಳ್ಳುತ್ತೇನೆ. ಅಪ್ಪಿಕೋ ! "

ಶೀನಪ್ಪನವರು ಬಾಗಿಲ ಚಿಲಕ ಹಾಕಿದರು. ನಗುನಗುತ್ತ ಒಳಗೆ ಬರ
ವಾಗ, ಆವೇಶದಿಂದ ಲಕ್ಷ್ಮಿ ಅವರ ಕೈಹಿಡಿದಳು. " ನನಗೆ ಹುಚ್ಚು ಹಿ
ದಿದೆ ! ನಿಮ್ಮ ಸಲುವಾಗಿ ನನಗೆ ಹುಚ್ಚು ಹಿಡಿದಿದೆ ! "

" ಛಿ ! ಛಿ ! " ಶೀನಪ್ಪನವರು ನಕ್ಕರು.

ಲಕ್ಷ್ಮಿಯ ಮಾತುಗಳ ಅರ್ಥ ಅವರಿಗೆ ಆಗಲಿಲ್ಲ !

" ಅಪ್ಪಿಕೊಳ್ಳಿರಿ ! " ಲಕ್ಷ್ಮಿ ಹುಚ್ಚೆದ್ದು ಹೇಳಿದಳು.

ಲಕ್ಷ್ಮಿಗೆ ಆವೇಶ ಎಲ್ಲಿಂದಲೋ ಬಂದಿತು. ಬಚ್ಚಿಕೊಂಡು ಇಟ್ಟ ಬಚಿ
ಯನ್ನು ಹಿರಿದು ಅವರ ಎದೆಗೆ ಚುಚ್ಚಿದಳು. ಅಯ್ಯೋ ಎಂದು ಒದರುತ್ತಿರುವ
ಗಲೇ, ಒಂದು ಅರಿವೆಯನ್ನು ತೆಗೆದು ಅವರ ಬಾಯಲ್ಲಿ ತುರುಕಿದಳು. ಮೂರ
ನಾಲ್ಕು ಸಲ ಅವರ ಮೈಗೆ ಇರಿದಳು ! ರಕ್ತವು ಚಿಮ್ಮಿ ಹರಿಯಿತು ! ಲಕ್ಷ್ಮಿ
ದೀಪವನ್ನು ಆರಿಸಿಬಿಟ್ಟಳು. ಅವಳು ತಪ್ತಳಾಗಿದ್ದಳು. ಮೈಯಲ್ಲಿ ದೆವ್ವ ಹೊಕ್ಕ
ತಾಗಿತ್ತು ! ಕತ್ತಲೆಯಲ್ಲಿ ಮತ್ತೆ ಶೀನಪ್ಪನವರಿಗೆ ಗಾಯಮಾಡಿದಳು.

ಲಕ್ಷ್ಮಿ ಹೊರಗೆ ಬಂದು ಬಾಗಿಲ ಇಕ್ಕಿದಳು. ಕತ್ತಲೆಯಲ್ಲಿ ಹೊರ

...ಡಿ ಓಡಿ ಹೋದಳು. ಮುಳ್ಳೆನ್ನಲಿಲ್ಲ, ಕಲ್ಲೆನ್ನಲಿಲ್ಲ! ಹಾಗೆಯೇ ಓಡಿ ...ೋದಳು. ಮುಗಿಲಿನಲ್ಲಿ ಮೋಡಗಳ ಆರ್ಭಟೆಯಿತ್ತು. ಧೋ ಧೋ ಮಳೆ ...ೊಡೆಯುತ್ತಿತ್ತು. ಜನರೆಲ್ಲ ತಮ್ಮ ಮನೆಗಳ ಬಾಗಿಲ ಇಕ್ಕಿಕೊಂಡು ಕುಳಿತಿ...ರು. ಲಕ್ಷ್ಮಿ ಮಾತ್ರ ಹುಚ್ಚಿಯಂತೆ ಓಡಿದಳು.

ದಿನ್ನೆಯ ಮೇಲಿನ ಹುಣಿಸೆಯ ಮರ ಆ ಬಿರುಗಾಳಿಗೂ ಬೀಳದೆ ಅಚಲ...ಾಗಿ ನಿಂತಿತ್ತು. ಲಕ್ಷ್ಮಿ ತನ್ನ ಕೈ ತಾನೇ ನೋಡಿಕೊಂಡಳು. ಕೈಯೆಲ್ಲ ...ಂಪಾಗಿತ್ತು. ಮಿಂಚಿನ ಆ ಬೆಳಕಿನಲ್ಲಿ ಆ ಕೆಂಪು ರಕ್ತ ಕಾಣಿಸಿತು. "ಎಂಥ ...ೋರ ಕೃತ್ಯ ಮಾಡಿದೆನಲ್ಲಾ" ಎಂದು ಅವಳಿಗೆನಿಸಿತು; "ಇಲ್ಲ—ನಾನು ...ುಚ್ಚಿ! ನಾನು ಪಾಪಿ!!" ಅವಳಿಗೆ ಅಲ್ಲಿ ನಿಲ್ಲುವದಾಗಲಿಲ್ಲ. ಓಡಿ ಓಡಿ ...ಳಗೆ ಹೋದಳು. ಲಕ್ಷ್ಮಿ ಆ ದಿನ ಸೀಮೋಲ್ಲಂಘನ ಮಾಡಿದಳು. ಮನುಷ್ಯ ...ೋಕವನ್ನು ದಾಟಿ ಹೋದಳು!



